೧

"ವಿಷಯ ಹೀಗಾಗುತ್ತದೆಂದು ತಿಳಿದಿದ್ದರೆ ನಾನು ಲತೆಯ ಪರಿಚಯ ನಿಮಗೆ ಮಾಡಿಸುತ್ತಲೇ ಇರಲಿಲ್ಲ."

ವಹಿದಾ ಈ ಮಾತುಗಳನ್ನು ಹೇಳಿದಾಗ ಅವಳ ಕೆಂದುಟಿಗಳ ಮೇಲೆ ಮೆಲು ನಗೆಯಿತ್ತು. ಆ ನಗೆಯೊಂದಿಗೆ ಸ್ವಲ್ಪ ಕುಹಕವೂ ಬೆರೆತಿತ್ತು – ಎಂದರೆ ತಪ್ಪಾಗುತ್ತಿರಲಿಲ್ಲ. ಹಾಗೆಯೇ ಅವಳ ತುಟಿಗಳು ವೈನ್‌ನಿಂದ ನೆನೆದಿದ್ದವು. ಆಗತಾನೇ ಅವಳು ಗ್ಲಾಸ್ ಕೆಳಗಿಟ್ಟಿದ್ದಳು.

"ಈಗ ಏನು ಅನಾಹುತವಾಯಿತೆಂದು ಮಾತನಾಡುತ್ತೀರಿ?"

"ಇನ್ನೇನಾಗಬೇಕು? ನೀವು ಲಲಿತೆಯನ್ನು ಪ್ರೇಮಿಸುತ್ತಿದ್ದೀರಿ?"

"ಪ್ರೇಮ ಮಾಡುವುದು ತಪ್ಪೇ? ಜಗತ್ತಿನಲ್ಲಿ ಪ್ರೇಮಕ್ಕಿಂತಲೂ ಪವಿತ್ರವಾದುದೂ ಅಮರವಾದುದೂ ಬೇರೆ ಯಾವುದೂ ಇಲ್ಲ."

"ಇಲ್ಲ, ವಹೀದಾರವರೇ. ನಾನು ಅವಳನ್ನು ಎಂದೆಂದಿಗೂ ಕೈಬಿಡುವುದಿಲ್ಲ."

"ಎಲ್ಲಾ ಗಂಡಸರೂ ಪ್ರೇಮ ಪ್ರಕರಣವನ್ನು ಆರಂಭಿಸುವುದು ಹೀಗೆಯೇ...."

ಪಿಂಕ್ಸ್‌ನಲ್ಲಿ ಕುಡಿಯುತ್ತಾ ಕುಳಿತಿದ್ದ ಆ ಇಬ್ಬರು ವ್ಯಕ್ತಿಗಳಲ್ಲಿ ಒಬ್ಬಳು ಪ್ರೌಢೆಯಾಗಿಯೂ, ಮತ್ತೊಬ್ಬನು ಮುಗ್ಧನಾಗಿಯೂ ಕಂಡುಬರುತ್ತಿದ್ದರು.

ವಹಿದೆಯು ಕಡೆಯಲ್ಲಿ ಒಂದು ಮಾತು ಹೇಳಿದಳಷ್ಟೇ. ಅವಳನ್ನು ನೋಡಿದ ಯಾರೇ ಆಗಲಿ ಅವಳಿಗೆ ಆ ಮಾತು ಹೇಳುವುದಕ್ಕೆ ಅಧಿಕಾರವಿದೆ ಎಂದು ಒಪ್ಪಿಕೊಳ್ಳುತ್ತಿದ್ದರು. ಅವಳಿಗೆ ಮೂವತ್ತೈದು ವರ್ಷ. ಅವಳ ದೇಹ ಸುಖಪಡುವುದಕ್ಕಾಗಿಯೇ ಹುಟ್ಟಿದಂತೆ ಇತ್ತು. ಜೀವನದಲ್ಲಿ ಎಲ್ಲ ಬಗೆಯ ಸುಖಗಳನ್ನೂ ಪಟ್ಟ ಅನುಭವ ಮುಖದಲ್ಲಿ ಮೂಡಿತ್ತು.

ಅವಳೊಡನೆ ಮಾತನಾಡುತ್ತಾ ಕುಳಿತಿದ್ದ ವ್ಯಕ್ತಿಯ ಹೆಸರು ಪ್ರಕಾಶ್. ಅವನು ಇಪ್ಪತ್ತಮೂರು ಇಪ್ಪತ್ತನಾಲ್ಕು ವರ್ಷಗಳ ತರುಣ. ಆಡುತ್ತಿದ್ದ ಮಾತುಗಳಂತೆಯೇ ಮುಗ್ಧನಾಗಿದ್ದ.

"ಹಾಗಾದರೆ ನನ್ನ ಪ್ರೇಮವು ಕಪಟವಾದುದೆಂದು ಭಾವಿಸು ತ್ತಿದ್ದೀರಿ...."

"ಇಲ್ಲ. ನಿಮ್ಮ ಪ್ರೇಮವು ಕಪಟವಾದರೂ, ವಾಸ್ತವವಾದರೂ ಅದರ ಪರಿಣಾಮವು ಒಂದೇ. ನಾನು ಹೇಳಿದಂತೆ ಅದು ಲತೆ ಮೋಸಹೋಗುವು ದರಲ್ಲಿಯೇ ಪರ್ಯವಸಾನವಾಗುತ್ತದೆ – "

"ಈ ಮಾತನ್ನು ನಾನು ಸರ್ವಥಾ ಒಪ್ಪುವುದಿಲ್ಲ."

"ಪ್ರಕಾಶ್, ನಾನು ಹೇಳುವುದನ್ನು ಕೇಳಿರಿ. ಈ ವಿಷಯವನ್ನು ಲತೆ ಯೊಂದಿಗೇ ಮಾತನಾಡುತ್ತಿದ್ದೆ. ಅದರದು ಪ್ರಯೋಜನವಿಲ್ಲ. ಅವಳು ಶುದ್ಧ ಎಳೆಯ ನಿಂಬೇಕಾಯಿ. ನಿಮಗೆ ಅವಳಿಗಿಂತಲೂ ವಯಸ್ಸಾಗಿದೆ. ತಕ್ಕಮಟ್ಟಿಗೆ ಲೋಕಾನುಭವವೂ ಇದೆ. ಅದರಿಂದ ನಿಮಗೆ ಹೇಳುತ್ತಿದ್ದೇನೆ. ಬಹುಮಟ್ಟಿಗೆ ನಿಮನಿಮಗೆ ಮದುವೆಯಾಗುವುದು ಸಂಭವವಿಲ್ಲ. ಒಂದು ವೇಳೆ ಆದರೂ ಅದು ಶಾಶ್ವತವಲ್ಲ.

"ಅದೇಕೆ ಮದುವೆಯಾಗುವುದಿಲ್ಲವೆನ್ನುತ್ತೀರಿ ?"

"ನಿಮ್ಮ ಜಾತಿ ಬೇರೇ. ಅವರ ಜಾತಿ ಬೇರೇ. ನಿಮ್ಮ ತಂದೆ ಯವರೂ ಶ್ರೀಮಂತರಾಗಿರಬಹುದು. ಲತೆಯ ತಂದೆಯವರೂ ಶ್ರೀಮಂತರೇ. ವಿವಾಹದಲ್ಲಿ ಮುಖ್ಯವಾಗಿ ಸರಿಸಮಾನಸ್ಕಂದತೆ ಇರಬೇಕು. ನಿಮ್ಮ ನಿಮ್ಮ ಶ್ರೀಮಂತಿಕೆಗಳು ನಿಮ್ಮನ್ನು ಸರಿಸಮಾನಸ್ಕಂದರಾಗಿ ಮಾಡುವುದಿಲ್ಲ."

"ಜಾತಿ ಬೇರೇ ಎಂಬ ವಿಷಯ ಮೊದಲೇ ಗೊತ್ತು. ಆದರೂ ಪ್ರೇಮಕ್ಕೆ ಇದಾವುದೂ ಅಡ್ಡಿಯಾಗುವುದಿಲ್ಲ. ಇಂತಹ ಸಣ್ಣ ಅಡ್ಡಿ ಆತಂಕ ಗಳಿಂದ ಹೆಚ್ಚುಕಡಿಮೆಯಾಗುವುದಾದರೆ ಅದು ಪ್ರೇಮವೇ ಅಲ್ಲವೆಂದು ನನ್ನ ಭಾವನೆ."

ವಹಿದಳು ನಗುತ್ತಾ "ಈ ಪ್ರೇಮವೆಂಬುದೇ ನನಗೆ ಸರಿಬೀಳದೇ ಇರು ವುದು." ಎಂದಳು.

"ಯಾಕೆ....?"

"ಅದು ಸ್ವಂತ ಅನುಭವ. ಏನೋ ತಾಯಿ ತಂದೆಗಳು ಯಾರನ್ನು ಗೊತ್ತುಮಾಡುತ್ತಾರೆಯೋ ಅವರನ್ನು ಮದುವೆ ಮಾಡಿಕೊಳ್ಳುವುದರಿಂದ ವಿವಾಹವು ಶಾಶ್ವತವಾಗಬಹುದೇ ಹೊರತು, ಪ್ರೇಮಿಸಿ ವಿವಾಹವಾಗುವುದು ಶಾಶ್ವತವೂ ಅಲ್ಲ, ಅದರಿಂದ ಸುಖವಾಗುವುದೂ ಇಲ್ಲ...."

"ಹಾಗಾದರೆ ನಿಮ್ಮ ಪ್ರೇಮಾನುಭವವು ಬಹಳ ಕಹಿಯಾದುದೆಂದು ಕಂಡುಬರುತ್ತದೆ...."

ವಹಿದೆಯು ಹುಬ್ಬು ಗಂಟುಹಾಕಿಕೊಂಡು "ಹುಂ. ಕೇವಲ ಕಹಿ ಯಾಗಿದ್ದಿದ್ದರೆ ಹೇಗೆಯೋ ಅನುಭವಿಸುತ್ತಿದ್ದೆ. ಅಷ್ಟೇ ಅಲ್ಲ – ಅದರಿಂದ ನನ್ನ ಸರ್ವನಾಶವಾಯಿತು, ಪ್ರಕಾಶ್. ಸುಮಾರು ಹದಿನೈದು ಹದಿನಾರು ವರ್ಷಗಳ ಹಿಂದಿನ ಮಾತು. ನಾನೊಬ್ಬ ಮುಗ್ಧಬಾಲೆಯಾಗಿದ್ದೆ. ನಿಮ್ಮ ಹೆಂಗಸರಾದರೂ ಹೊರಗೆ ಬರುತ್ತಾರೆ. ಅವರಿಗೆ ಏನಾದರೂ ಅನುಭವವಿರು ತ್ತದೆ. ಆದರೆ ನಮ್ಮ ಜಾತಿಯಲ್ಲಿ ಹೊರಗೆ ಬರುವಂತೆಯೇ ಇಲ್ಲ. ನನಗೆ ಯಾವ ವಿಧವಾದ ಅನುಭವವೂ ಇಲ್ಲ. ಇಂತಹ ಸ್ಥಿತಿಯಲ್ಲಿ ದೈವಯೋಗ ದಿಂದ ನನಗೊಬ್ಬ ವ್ಯಕ್ತಿಯ ಪರಿಚಯವಾಯಿತು. ನನ್ನ ಹೃದಯದಲ್ಲಿ ಪ್ರೇಮಾಂಕುರವಾಯಿತು ಜಗತ್ತಿನಲ್ಲಿ ಸರ್ವವೂ ಸುಂದರವೆಂದು ಭಾವಿಸ ತೊಡಗಿದೆ. ಅದೊಂದು ಬಗೆಯ ಸ್ವಪ್ನ. ಆ ಸ್ವಪ್ನದಲ್ಲಿ ನಾನು ಲೈಲ ಳೆಂದೂ, ಆ ಮಜನು ಇಲ್ಲದಿದ್ದರೆ ಜೀವನವೇ ವ್ಯರ್ಥವೆಂದೂ ಕಂಡಿತು. ಅವನೂ ಪ್ರೇಮವು ಪವಿತ್ರವೆಂದೂ, ಅಮರವೆಂದೂ ಹೇಳುತ್ತಿದ್ದ. ಯಾವ ಜನ್ಮದಲ್ಲೂ ನನ್ನನ್ನು ಕೈಬಿಡುವುದಿಲ್ಲವೆಂದು ಹೇಳುತ್ತಿದ್ದ. ಆದರೆ ಅವೆಲ್ಲವೂ ಎರಡೇ ದಿನಗಳು. ಹೆಂಗಸರ ಪ್ರೇಮದಂತೆ ಗಂಡಸರ ಪ್ರೇಮವು ಶಾಶ್ವತ ವಲ್ಲ. ಪುಷ್ಪವು ಒಂದೇ ದುಂಬಿಯ ಕ್ಷಣಮಾತ್ರ ಸಾನ್ನಿಧ್ಯದಿಂದಲೂ ತೃಪ್ತ ವಾಗುತ್ತದೆ. ಆದರೆ ದುಂಬಿಗೆ ಹಾಗಲ್ಲ. ಕ್ಷಣವೂ ಅದು ಒಂದು ಪುಷ್ಪದ ಮೇಲೆ ಕುಳಿತಿರುವುದಿಲ್ಲ. ಒಂದರಿಂದ ಮತ್ತೊಂದು ಹೂವಿಗೆ ಹಾರುತ್ತಿರು ತ್ತದೆ. ಗಂಡಸಿನ ಸ್ವಭಾವವೂ ಅದೇ ಆಗಿದೆ. ಬಹು ಬೇಗ ನನಗೆ ಈ ಅನುಭವವಾಯಿತು." ಎಂದಳು.

ಅವಳು ಹೇಳಬೇಕೆಂದುಕೊಂಡುದನ್ನೂ ಹೇಳಿ ಮುಗಿಸಿರಲಿಲ್ಲ.

ವಹಿದೆಯ ಅನುಭವವು ಎಷ್ಟು ಕಹಿಯಾದುದೆಂದು ಪ್ರಕಾಶನು ಮನಸ್ಸಿನಲ್ಲಿಯೇ ಯೋಚಿಸಿಕೊಳ್ಳುತ್ತಿದ್ದ ಹಾಗೆಯೇ ಅವಳು ಅಷ್ಟರಲ್ಲಿ ಕೇಳಿದಳು.

"ಪ್ರಕಾಶ್, ನಾನು ಈ ಕಡೆಯವಳೇ ಅಲ್ಲ, ಉತ್ತರ ಭಾರತದವಳು. ಕಂಡುಕಾಣದ ಈ ಸೀಮೆಗೇಕೆ ಬಂದಿದ್ದೇನೆ - ಎಂದುಕೊಂಡಿದ್ದೀರಿ ?"

ತನಗೆ ಗೊತ್ತಿಲ್ಲವೆನ್ನುವಂತೆ ಪ್ರಕಾಶ್ ತಲೆಯಾಡಿಸಿದ.

"ನನ್ನನ್ನು ವಂಚಿಸಿದಂತಹದರ ಆಸಾಮಿಯೊಬ್ಬನ ವಿಷಯವನ್ನು ನಿಮಗೆ ಹೇಳಿದೆನಷ್ಟೇ ಅವನ ಮೇಲೆ ಪ್ರತೀಕಾರವನ್ನು ತೀರಿಸಿಕೊಳ್ಳಲು ಇಲ್ಲಿಯವರೆವಿಗೆ ಬರಬೇಕಾಯಿತು...."

"ವಹೀದಾರವರೇ! ನಿಮ್ಮ ಸ್ವಂತ ವಿಚಾರದಲ್ಲಿ ಪ್ರವೇಶಿಸಲು ನನಗೆ ಅಧಿಕಾರವಿಲ್ಲ. ಆದರೂ ಒಮ್ಮೆಯಾದರೂ ಪ್ರೇಮಿಗಳಾಗಿದ್ದವರು ಒಬ್ಬರ ಮೇಲೆ ಒಬ್ಬರು ಪ್ರತೀಕಾರವನ್ನು ತೆಗೆದುಕೊಳ್ಳುವುದೆಂದರೇನೋ ನನಗೆ ಅರ್ಥವಾಗುವುದಿಲ್ಲ. ಅಕಸ್ಮಾತ್ ಯಾರಾದರೊಬ್ಬರು ತಪ್ಪಿ ನಡೆದರೂ ಮತ್ತೊಬ್ಬರು ಉದಾರ ಹೃದಯದಿಂದ ಕ್ಷಮಿಸುವುದೇ ಸರಿಯಾದುದೆಂದು ನನ್ನ ಅಭಿಪ್ರಾಯ."

ವಹಿದಳು ಹುಚ್ಚಳಂತೆ ನಗುತ್ತಾ "ಕ್ಷಮಿಸುವುದು. ನೋಡಿರಿ. ನೀವು ನೋಡುತ್ತಿರುವಂತೆಯೇ ಅವನನ್ನು ಜೈಲಿನಲ್ಲಿ ಕೂರಿಸುತ್ತೇನೆ. ಅಲ್ಲಿಯವರೆವಿಗೆ ನನಗೆ ಮನಶ್ಶಾಂತಿಯಿಲ್ಲ." ಎಂದಳು.

ಯಾವುದೋ ವ್ಯಕ್ತಿಯಿಂದ ಈ ಹೆಂಗಸಿಗೆ ವಿಪರೀತ ಅನ್ಯಾಯವಾಗಿದೆ ಎಂದು ಪ್ರಕಾಶ್ ಮನಸ್ಸಿನಲ್ಲಿಯೇ ಪರಿತಾಪ ಪಟ್ಟುಕೊಂಡ.

"ಗಂಡಸರಿಗಾಗಲೀ ಹೆಂಗಸರಿಗಾಗಲೀ ನಾನು ಹೇಳುವ ಮಾತು ಒಂದೇ. ಪ್ರೇಮವೆಂಬುದನ್ನು ಹತ್ತಿರ ಕೂಡಾ ಸೇರಿಸದಿರಿ. ಅದು ಒಬ್ಬರು ಮತ್ತೊಬ್ಬರನ್ನು ವಂಚಿಸುವುದಕ್ಕಿರುವ ಮಹಾಮಾಯೆ. ಅದರಿಂದ ದೂರವಾಗಿರಿ – ಎಂಬುದು."

"ವಹೀದಾರವರೇ! ನಿಮಗೆ ವಂಚಿಸಿದ ವ್ಯಕ್ತಿ ಯಾರೆಂಬುದನ್ನೂ ಅವನು ನಿಮಗೆಂತಹ ಅನ್ಯಾಯ ಮಾಡಿದನೆಂಬುದನ್ನೂ ನಾನು ತಿಳಿದುಕೊಳ್ಳಬಹುದೇ ?"

"ಬೇಷಕ್ ! ಆದರೆ ಈಗಲ್ಲಾ. ಇನ್ನು ನಾಲ್ಕೈದು ದಿನಗಳು ತಡೆಯಿರಿ. ಆ ಮನುಷ್ಯನನ್ನು ನಿಮಗೆ ತೋರಿಸುತ್ತೇನೆ. ಅವನು ಮಾಡಿದ ಅನ್ಯಾಯವನ್ನು ತಿಳಿಸುತ್ತೇನೆ. ಅಷ್ಟೇ ಅಲ್ಲ. ಆ ಮನುಷ್ಯ ಜೈಲಿನಲ್ಲಿ ಕಬ್ಬಿಣದ ಸಲಾಕೆಗಳ ಹಿಂದೆ ನಿಂತುಕೊಂಡಿರುವಾಗ ನನ್ನ ಪ್ರತೀಕಾರವು ತೀರಿತೆಂದು ಅವನಿಗೆ ಹೇಳುತ್ತೇನೆಯಷ್ಟೇ. ಆಗ ನಿಮ್ಮನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುತ್ತೇನೆ."

ಪ್ರಕಾಶನು ಅದಕ್ಕೆ ಏನೂ ಹೇಳಲಿಲ್ಲ. ಉದ್ದವಾದ ಗ್ಲಾಸ್‌ನಲ್ಲಿದ್ದ ತಣ್ಣನೆಯ ಬಿಯರ್ ಸ್ವಲ್ಪ ಸ್ವಲ್ಪವಾಗಿ ಕುಡಿಯ ತೊಡಗಿದ. ಅವನ ಎದುರಿಗೆ ಕುಳಿತಿದ್ದ ವಹೀದಾ ಸುಂದರಿ ಎಂಬುದರಲ್ಲಿ ಸಂದೇಹವೇ ಇರಲಿಲ್ಲ. ಹದಿನಾರು ಹದಿನೆಂಟು ವರ್ಷಗಳ ಪ್ರಾಯದಲ್ಲಿ ಈ ಹೆಂಗಸು ಹೇಗಿದ್ದಿರಬೇಕೆಂಬುದನ್ನು ಮನಸ್ಸಿನಲ್ಲಿಯೇ ಲೆಕ್ಕ ಹಾಕಿದ. ಅವಳಂದು ಸ್ವರ್ಗಲೋಕದ ದೇವಕನ್ಯೆಯಂತೆ ಇದ್ದಿರಬಹುದೆಂದು ಅವನಿಗೆ ತೋರಿತು. ಅಂತಹ ಹೆಂಗಸು ಇಂತಹ ಕಠೋರ ಹೃದಯಿಯಾಗಬೇಕಾಗಿದ್ದರೆ ಅವಳಿಗೆ ಎಂತಹ ಅನುಭವಗಳಾಗಿರಬೇಕೆಂದು ಯೋಚಿಸುತ್ತಾ ವಹಿದಳ ಕಡೆಯೇ ನೋಡ ತೊಡಗಿದ.

"ಪ್ರಕಾಶ್ ! ನಾನು ನಿಮ್ಮನ್ನು ಬ್ಯಾಂಕಿನಲ್ಲಿ ನೋಡಿದಾಗ ಯಾವುದೋ ಒಂದು ವಿಧವಾದ ಅಭಿಮಾನ ಉಂಟಾಯಿತು. ನೀವು ಮಾಡುತ್ತಿದ್ದ ಕೆಲಸವನ್ನು ನೋಡಿ ನೀವು ಬಡವರೆಂದುಕೊಂಡೆ. ನಿಮಗೊಂದಿಷ್ಟು ಹಣ ಸಿಕ್ಕುವಂತೆ ಮಾಡಬೇಕೆಂದು ನಿಮ್ಮ ಬಳಿಗೆ ಬಂದೆ. ಇಲ್ಲಿ ಜಾಕಿಗಳ ಮತ್ತು ಕುದುರೆ ಮಾಲೀಕರುಗಳ ಪರಿಚಯ ಮಾಡಿಸಿದೆ, ಇವರುಗಳ ಸಹವಾಸದಿಂದ ಯಾವ ದಿನ ಯಾವ ಕುದುರೆಯು ಗೆಲ್ಲುತ್ತದೆಂಬುದನ್ನು ಮೊದಲೇ ಅರಿತು ಅವುಗಳ ಮೇಲೆ ಹಣ ಕಟ್ಟಿ ದುಡ್ಡು ಮಾಡಿಕೊಳ್ಳಲಿ ಎಂಬುದು ನನ್ನ ಉದ್ದೇಶವಾಗಿತ್ತು. ಆದರೆ ನನ್ನ ಎಣಿಕೆ ತಲೆಕೆಳಗಾಯಿತು. ಹಣ ಮಾಡುವುದನ್ನು ಬಿಟ್ಟು ಹೆಣ್ಣು ಕಟ್ಟಿಕೊಳ್ಳಲು ಹೊರಡಿರಿ. ಈ ಕಡೆಯ ಗಳಿಗೆಯಾದರೂ ನನ್ನ ಮಾತು ಕೇಳಿ. ನಿಮ್ಮ ಹತ್ತಿರ ಹಣ ವಿದ್ದರೂ ಚಿಂತೆಯಿಲ್ಲ. ಇನ್ನೊಂದಿಷ್ಟು ಹಣವು ಬಂದರೆ ಅದು ಹುಳಿತು ಹೋಗುವುದಿಲ್ಲ. ಇಂತಹ ಅವಕಾಶ ನಿಮಗೆ ಮತ್ತೊಮ್ಮೆ ಸಿಕ್ಕಲಾರದು.

ಈಗಲೇ ಸಾಧ್ಯವಾದಷ್ಟು ಹಣವನ್ನು ಮಾಡಿಕೊಳ್ಳಿರಿ. ಲತೆಯನ್ನು ಮರೆತು ಬಿಡಿರಿ."

ಲತೆಯ ಮತ್ತು ನನ್ನ ಪ್ರೇಮಕ್ಕೆ ಇವಳೇಕೆ ಇಷ್ಟೊಂದು ವಿರೋಧಿ ಎಂಬುದು ಪ್ರಕಾಶನಿಗೆ ಅರ್ಥವಾಗಲಿಲ್ಲ. ವಹಿದೆಯನ್ನು ಆ ಮಾತು ಕೇಳ ಬಹುದಾಗಿತ್ತು. ಮಾತು ಈ ಧೋರಣೆಯಲ್ಲಿ ಮುಂದುವರಿಯುತ್ತಿರುವಾಗ ಅದನ್ನು ಕೇಳುವುದು ಸೂಕ್ತವಾಗಿ ಕಾಣಲಿಲ್ಲ.

"ಈ ನಿಮ್ಮ ಪ್ರೇಮವು ಗುಲಾಬ್ ಚಂದನಿಗೆ ತಿಳಿದಿದೆಯೇ ಪ್ರಕಾಶ್."

"ಈ ವಿಷಯ ಪ್ರಪಂಚದಲ್ಲಿ ನಿಮ್ಮ ವಿನಾ ಮತ್ತಾರಿಗೂ ಗೊತ್ತಿಲ್ಲ. ಪ್ರೇಮಿಸುತ್ತಿದ್ದೇನೆಂಬುದನ್ನು ಲತೆಗೆ ಸಹ ನಾನಿನ್ನೂ ಹೇಳಿಲ್ಲ. ಆದರೆ ಅವಳ ತರಹ ನೋಡಿದರೆ ಅವಳೂ ನನ್ನನ್ನು ಪ್ರೀತಿಸುತ್ತಿದ್ದಾಳೆಂದು ತೋರು ತ್ತದೆ. ಅವಳೊಂದಿಗೆ ಈ ವಿಷಯ ಪ್ರಸ್ತಾಪಿಸುವುದಕ್ಕಿಂತ ಮೊದಲು ನಿಮ್ಮೊಂದಿಗೆ ಪ್ರಸ್ತಾಪಿಸಬೇಕೆಂದುಕೊಂಡೆ."

ವಹಿದೆ ತೃಪ್ತಿಯಿಂದ "ನನ್ನ ವಿಷಯದಲ್ಲಿ ನೀವು ಇಷ್ಟೊಂದು ವಿಶ್ವಾಸ ವನ್ನಿಟ್ಟುಕೊಂಡಿರುವುದಕ್ಕಾಗಿ ನನಗೆಷ್ಟೋ ಹೆಮ್ಮೆಯಾಗಿದೆ. ಹಾಗೆಯೇ ನಾನು ಹೇಳುವ ಮಾತುಗಳಲ್ಲಿಯೂ ಭರವಸೆಯನ್ನಿಟ್ಟರೆ ನನಗೆ ಮತ್ತೂ ಸಂತೋಷವಾಗುತ್ತದೆ." ಎಂದಳು.

ಬಿಸಿ ತುಪ್ಪವನ್ನು ಬಾಯಲ್ಲಿಟ್ಟುಕೊಂಡಿರುವವರ ಸ್ಥಿತಿಯಾಯಿತು. ಪ್ರಕಾಶನಿಗೆ. ಅದನ್ನು ನುಂಗುವಂತೆಯೂ ಇಲ್ಲ. ಉಗುಳುವಂತೆಯೂ ಇಲ್ಲ. ಈ ಇಬ್ಬರು ಸುಂದರಿಯರ ಸಹವಾಸದಲ್ಲಿ ಅವನು ಹಣ್ಣಾಗಿದ್ದಾನೆ. ಇತ್ತ ವಹಿದೆಯನ್ನಾದರೂ ಬಿಡಬೇಕು. ಅತ್ತ ಲತೆಯನ್ನಾದರೂ ತ್ಯಾಗ ಮಾಡಬೇಕು. ಅವನ ಮನಸ್ಸಿನ ಒಳಸ್ಥಿತಿಯನ್ನು ಹೇಳುವುದಾದರೆ ಸರ್ವ ಸ್ವವನ್ನೂ ಬಿಡುವುದಕ್ಕೆ ತಯಾರಾಗಿದ್ದ. ಲತೆಯಿಂದ ದೂರವಾಗುವುದು ಮಾತ್ರ ಅವನಿಗೆ ಸಾಧ್ಯವಿರಲಿಲ್ಲ.

ಅವರಿಬ್ಬರೂ ಮಾತನಾಡುತ್ತಾ ಕುಳಿತುಕೊಂಡಿರುವಂತೆಯೇ ಒಬ್ಬಾ ನೊಬ್ಬ ಕಿಶೋರಿಯು ಅತ್ತಕಡೆಗೆ ಬಂದಳು ಅವಳು ಅಲ್ಲಿಗೆ ಬರಬೇಕೆಂಬು ದಾಗಿ ಬರಲಿಲ್ಲ. ಆ ಹೋಟೆಲಿನಲ್ಲಿ ಅವಳು ತಂದೆಯೊಡನೆ ವಾಸವಾಗಿ ದ್ದಳು ಹೊರಗಡೆಗೆ ಹೋಗೋಣವೆಂಬುದಾಗಿ ಹೊರಟಿದ್ದಳು.

ಆ ಸಮಯದಲ್ಲಿ ಪಿಂಕ್ಸ್‌ನ ಉದ್ಯಾನವನದಲ್ಲಿ ಬೆತ್ತದ ಕುರ್ಚಿಯ ಮೇಲೆ ಕುಳಿತು ಕುಡಿಯುತ್ತಿದ್ದ ಪ್ರೌಢೆಯನ್ನು ನೋಡಿ "ವಹೀದಾ ಬರ್ಹ್" ಎನ್ನುತ್ತಾ ಸಮೀಪಕ್ಕೆ ಬಂದಳು.

ಹತ್ತಿರಕ್ಕೆ ಬಂದ ಮೇಲೆ ಅಲ್ಲಿ ಕುಳಿತಿದ್ದ ತರುಣನನ್ನು ನೋಡಿ "ಓಹೋ! ನೀವೂ ಇಲ್ಲಿಯೇ ಇದ್ದೀರೇನು? ನಾನು ಈಗ ಎತ್ತಕಡೆಗೆ ಹೊರಟಿದ್ದೆನೆಂಬುದನ್ನು ಬಲ್ಲಿರಾ? ನಿಮ್ಮನ್ನೇ ನೋಡೋಣವೆಂದು ಹೊರಟಿದ್ದೆ. ಅಷ್ಟರಲ್ಲಿ ನೀವೇ ಇಲ್ಲಿ ಸಿಕ್ಕಿದಿರಿ" ಎಂದು ಹೇಳುತ್ತಾ ಅಲ್ಲಿಯೇ ಇದ್ದ ಕುರ್ಚಿಯನ್ನು ಎಳೆದುಕೊಂಡಳು.

"ಈ ದಿನ ಸ್ವಲ್ಪ ಬೇಗ ಕೆಲಸ ಮುಗಿಯಿತು ಲತಾ. ನಿಮ್ಮನ್ನು ನೋಡೋಣವೆಂದೇ ಇಲ್ಲಿಗೆ ಬಂದೆ. ವಹೀದಾರವರು ಸಿಕ್ಕಿದರು. ನೀವು ಸಿಂಗರಿಸಿಕೊಳ್ಳುತ್ತಿದ್ದೀರೆಂದೂ ಸ್ವಲ್ಪ ಹೊತ್ತಿನಲ್ಲಿಯೇ ಬರುತ್ತೀರೆಂದೂ ಹೇಳಿದರು. ಆದರಿಂದ ಮಾತನಾಡುತ್ತಾ ಕುಳಿತುಕೊಂಡೆ."

ಮೂರನೆಯ ವ್ಯಕ್ತಿಯೊಂದು ಆ ಟೇಬಲ್‌ನಲ್ಲಿ ಕುಳಿತುದನ್ನು ನೊಡಿದ ಬೇರರ್ ಬಂದು ವಿನಯವಾಗಿ ನಿಂತುಕೊಂಡ.

ವಹಿದೆಯು "ನೀನೇನು ತೆಗೆದುಕೊಳ್ಳುತ್ತೀಯೆ?" ಎಂದಳು.

"ನನಗೇನೂ ಬೇಡ...."

"ನೀನು ಏನೂ ತೆಗೆದುಕೊಳ್ಳದಿದ್ದರೆ ನಾವು ಹೇಗೆ ತೆಗೆದುಕೊಳ್ಳುವುದು?"

"ಅದಕ್ಕೇನು ಪರವಾಯಿಲ್ಲ. ನಾನು ನಿಮ್ಮ ಜೊತೆಗಿರುತ್ತೇನೆ. ಎಷ್ಟು ಬೇಕಾದರೂ ತೆಗೆದುಕೊಳ್ಳಿರಿ."

"ಎಷ್ಟು ಬೇಕಾದರೂ ತೆಗೆದುಕೊಳ್ಳುವಂತಿಲ್ಲ ನಾನೀಗ ಒಂದು ಕೆಲಸದ ಮೇಲೆ ಹೋಗಬೇಕಾಗಿದೆ. ಅದರಿಂದಲೇ ಕೆಲಸಕ್ಕೆ ಬಾರದ ವೈನ್ ತೆಗೆದುಕೊಳ್ಳುತ್ತಿದ್ದೇನೆ" ಎಂದು ಹೇಳಿ ವೈಟರ್ ಕಡೆಗೆ ತಿರುಗಿ "ನನಗೆ ಒಂದು ವೈನ್. ಇವರಿಗೆ ಒಂದು ಬಿಯರ್ ತೆಗೆದುಕೊಂಡು ಬಾ" ಎಂದು ಆರ್ಡರ್ ಮಾಡಿದಳು

ಲತೆ ಪ್ರಕಾಶ ಕಡೆ ನೋಡಿದಳು.

ಅವನು ತನಗೇನೂ ಬೇಡವೆಂದು ಹೇಳಿದ.

ಅವನು ಬೇಡವೆಂದುದಕ್ಕೆ ಲತೆ ಅವನ ಕಡೆ ನೋಡಿದುದೇ ಕಾರಣವೆಂದು ಗ್ರಹಿಸಿದರೂ ಅದನ್ನು ತೋರಿಸಿಕೊಳ್ಳದೇ ವಹಿದೆ "ಯಾಕೆ, ಪ್ರಕಾಶ್. ಬಿಯರ್ ನಿಮಗೆಷ್ಟೋ ಪ್ರಿಯವಲ್ಲವೇ ?" ಎಂದಳು.

"ನಿಜ. ಅದರೂ ಈ ದಿನ ಮಧ್ಯಾಹ್ನದಿಂದ ಯಾಕೋ ಸಣ್ಣ ತಲೆಯ ನೋವು. ಅದರಿಂದ ಹಿಂದೆ ಮುಂದೆ ನೋಡುತ್ತಿದ್ದೇನೆ ಅಷ್ಟೇ."

ಬೇರರ್ ವೈನ್ ಮತ್ತು ಬಿಯರುಗಳನ್ನು ತಂದಿಟ್ಟ. ವಹಿದಾ ಕುಡಿಯ ತೊಡಗಿದಳು. ಪ್ರಕಾಶ್ ಬಿಯರ್ ರುಚಿ ನೋಡುತ್ತಿದ್ದನೇ ವಿನಾ ಕುಡಿಯುತ್ತಿರಲಿಲ್ಲ.

ವಹೀದಾ ಕುಡಿದು ಗ್ಲಾಸ್ ಕೆಳಗಿಡುತ್ತಿದ್ದಾಗ ಅವಳ ಎಡಗೈ ತೆಗೆದುಕೊಂಡು ಲತೆಯು "ವಹೀದಾ ಬೆಹೆನ್. ಈ ನಿಮ್ಮ ಉಂಗುರವು ಎಷ್ಟು ಚೆನ್ನಾಗಿದೆ." ಎಂದಳು.

"ನನ್ನ ಉಂಗುರದ ಮೇಲೆ ನಿನಗೆ ಕಣ್ಣು ಬಿದ್ದ ಹಾಗಿದೆಯಲ್ಲಾ-"

"ನಿಜವಾಗಿಯೂ ಈ ಉಂಗುರ ಎಷ್ಟೋ ಚೆನ್ನಾಗಿದೆ. ಎಷ್ಟು ದೊಡ್ಡ ಹರಳು. ಎಷ್ಟು ಮುದ್ದಾದ ಕಟ್ಟಡ."

"ನೀನು ಈ ಮಾತು ಅನೇಕ ಬಾರಿ ಹೇಳಿದ್ದೀಯೆ ? ಇದನ್ನು ನಿನಗೇ ಕೊಟ್ಟುಬಿಡಬೇಕೆಂಬ ಯೋಚನೆಯೂ ಬಂದಿದೆ. ಆದರೆ ನಿನ್ನಂತಹ ಶ್ರೀಮಂತ ಕುಮಾರಿಯ ಕೈಬೆರಳಿನಲ್ಲಿರುವುದಕ್ಕೆ ಇದು ಅರ್ಹವಾಗಿಲ್ಲ. ಇದರ ಕಟ್ಟಡ ಚೆನ್ನಾಗಿದೆ ಅಷ್ಟೇ. ಇದರಲ್ಲಿರುವುದು ಹರಳಲ್ಲ. ಕರಬಾ ಮಣಿಯ ಚೂರು. ಇಲ್ಲದಿದ್ದರೆ ಯಾವಾಗಲೋ ನಿನಗೆ ಕೊಟ್ಟುಬಿಡುತ್ತಿದ್ದೆ."

"ಸಮಯಕ್ಕೆ ಸರಿಯಾಗಿ ಚತುರೋಕ್ತಿಯನ್ನಾಡಿ ಜಾರಿಕೊಂಡು ಬಿಡುತ್ತೀರಿ ?"

ಪ್ರಶಂಸನೀಯವಾಗಿ ಆಡಿದರೂ ಆ ಮಾತು ವಹೀದಳಿಗೆ ಸರಿಬೀಳಲಿಲ್ಲ. ಆದರೂ ಅದನ್ನು ನುಂಗಿಕೊಂಡು ಹೇಳಿದಳು.

"ಇನ್ನೆರಡು ದಿನಗಳು ತಡೆದುಕೋ ಲತಾ. ನಿನಗಾಗಿ ಒಂದು ವಜ್ರದ ಹರಳನ್ನು ನೋಡಿಟ್ಟಿದ್ದೇನೆ. ಈ ದಿನವೋ ನಾಳೆಯೋ ಅದು ತಾನಾಗಿ

ನಿಮ್ಮ ತಂದೆಯ ಬಳಿ ಬರುವಂತೆ ಮಾಡಿದ್ದೇನೆ. ಅದರಲ್ಲಿ ಉಂಗುರವನ್ನು ಕಟ್ಟಿಸಿಕೋ. ಆ ಹರಳು ಈ ಕರಬಾಮಣಿಯ ಚೂರಿಗಿಂತಲೂ ದೊಡ್ಡದಾಗಿದೆ."

ಮಾತನಾಡುತ್ತಿದ್ದಂತೆಯೇ ವಹಿದಳು ಗಡಿಯಾರವನ್ನು ನೋಡಿಕೊಂಡಿದ್ದಳು. ಮಾತು ಮುಗಿದೊಡನೆಯೇ ಗ್ಲಾಸಿನಲ್ಲಿದ್ದ ತುಸ ವೈನನ್ನು ಬಾಯಿಗೆ ಹಾಕಿಕೊಂಡಳು

ಅನಂತರ "ಪ್ರಕಾಶ್. ಟ್ಯಾಕ್ಸಿಯನ್ನು ಕರೆಸಿ ಹೊರಡುವುದು ಎಂದರೆ ಹೊತ್ತಾಗಿ ಹೋಗುತ್ತದೆ. ನನ್ನನ್ನು ಸ್ವಲ್ಪ ಮಾರ್ಕೆಟ್ಟಿನ ಬಳಿ ಬಿಡುತ್ತೀರಾ ?" ಎಂದು ಕೇಳಿದಳು.

ಅವಳನ್ನು ಎಲ್ಲಿ ಬೇಕಾದರೂ ಬಿಡುವುದಕ್ಕೆ ಪ್ರಕಾಶ ತಯಾರಾಗಿದ್ದ. ಆದರೆ ಲತೆಯ ಅಭಿಮತವು ಹೇಗಿದೆ ಎಂದು ತಿಳಿದುಕೊಳ್ಳುವುದಕ್ಕಾಗಿ ಅವಳ ಕಡೆಗೆ ನೋಡಿದ. ಅವಳು ಬೇರೊಂದು ದಿಕ್ಕಿಗೆ ತಿರುಗಿಕೊಂಡಿದ್ದಳು.

ಆದರಿಂದ ಪ್ರಕಾಶ್ ''ಆಗಲಿ ಬನ್ನಿ, ಬಿಟ್ಟು ಹೋಗುತ್ತೇನೆ. ಎಷ್ಟಾದರೂ ನಾನೂ ಹೊರಗಡೆಗೆ ಬರಬೇಕಾಗಿದೆ." ಎಂದ.

"ನೀವು ಬಿಯರ್ ಮುಗಿಸಲೇ ಇಲ್ಲ.''

"ಇಲ್ಲ, ನನಗೆ ಈ ದಿನ ದೇಹಸ್ಥಿತಿ ಸರಿಯಾಗಿಲ್ಲವೆಂದು ಹೇಳಿದೆನಲ್ಲಾ. ಇನ್ನು ಬೇಡ.''

ವಹಿದಾ ಬೇರರ್‌ನನ್ನು ಕರೆದು ಬಿಲ್ ಕೊಡುವುದಕ್ಕೆ ಹೋದಳು. ಅವಳಿಂದ ಕೊಡಿಸುವುದು ಚೆನ್ನಾಗಿರುವುದಿಲ್ಲವೆಂದು ಪ್ರಕಾಶನೇ ಬೇರರ್‌ಗೆ ಬಿಲಾ ಹಣವನ್ನೂ, ಭಕ್ಷಿಸ್ ಅನ್ನೂ ಕೊಟ್ಟ.

ಅನಂತರ ಮೂರು ಮಂದಿಯೂ ಪ್ರಕಾಶನ ಕಾರ್ ಬಳಿಗೆ ಬಂದರು. ಪ್ರಕಾಶ್ ಡ್ರೈವಿಂಗ್ ಸೀಟಿನಲ್ಲಿ ಕುಳಿತ. ವಹಿದಾ ಹಿಂದುಗಡೆಯ ಬಾಗಿಲು ತೆಗೆದು ಕುಳಿತುಕೊಂಡಳು. ಲತೆ ಅವಳ ಪಕ್ಕದಲ್ಲಿ ಕುಳಿತಳು.

ಕಾರು ವಾಣೀವಿಲಾಸ ಆಸ್ಪತ್ರೆಯ ಬಳಿ ಬರುತ್ತಲೇ ವಹಿದೆಯು ಕಾರು ನಿಲ್ಲಿಸುವಂತೆ ಹೇಳಿ ಅದರಿಂದ ಇಳಿದಳು. ಅವಳು ಹೊರಟುಹೋದ ಮೇಲೆ ಕಾರು ಇನ್ನೂ ಮುಂದೆ ಹೋಗಿ ಬಲಗಡೆಗೆ ತಿರುಗಿ ಟಿಪ್ಪೂಸುಲ್ತಾನನ

ಅರಮನೆಯ ಮುಂದೆ ನಿಂತಿತು. ಲತಾ ಕಾರಿನಿಂದ ಇಳಿದು ಮುಂದುಗಡೆ ಪ್ರಕಾಶನ ಪಕ್ಕದಲ್ಲಿ ಕುಳಿತಳು. ಪುನಃ ಕಾರು ಹೊರಟಿತು.

ಪ್ರಕಾಶನು "ವಹಿದಾ ಎಲ್ಲಿಗೆ ಹೋದಳೆಂಬುದು ಗೊತ್ತೇ ?" ಎಂದ.

''ನನಗೆ ಅವಳ ವಿಷಯ ಬೇಡ.''

"ಎಲ್ಲಿಗೆ ಹೋಗೋಣ ಲತಾ ?''

"ಈ ಜನಜಂಗುಳಿಯು ನನಗೆ ಬಹಳ ಬೇಜಾರಾಗಿದೆ. ಇದರಿಂದ ದೂರವಾಗಿ ಎಲ್ಲಿಯಾದರೂ ಹೋಗೋಣ."

## ೨

ವಹಿದೆಯು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಹೋದಾಗ ಇಬ್ರಾಹಿಂ ಸಾಹೇಬರು ಅಲ್ಲಿಯೇ ಇದ್ದರು. ಆ ದಿನ ಅವರಿಗೆ ಏನೇನೋ ಕೆಲಸಗಳು ಬಿದ್ದು ಕೋರ್ಟಿಗೆ ಹೋಗಿರಲಿಲ್ಲ. ಆದರಿಂದ ಸಬ್ ಇನ್ಸ್ಪೆಕ್ಟರ್ ರಾಜ ಶೇಖರಪ್ಪನೊಂದಿಗೆ ಆ ದಿನ ಕೋರ್ಟಿನಲ್ಲಿದ್ದ ತಮ್ಮ ಕೇಸುಗಳ ವಿಷಯವನ್ನು ಚರ್ಚಿಸುತ್ತಾ ಕುಳಿತಿದ್ದರು.

ಯಾರೋ ಒಬ್ಬ ಹೆಂಗಸು ನೋಡುವುದಕ್ಕೆ ಬಂದಿದ್ದಾಳೆಂದೂ, ನೋಡುವುದಕ್ಕೆ ಗೌರವಸ್ಥಳಂತೆ ಕಂಡುಬರುತ್ತಾಳೆಂದೂ ಸೆಂಟ್ರಿ ತಿಮ್ಮಯ್ಯನು ಬಂದು ಹೇಳಲು ಒಳಗೆ ಕರೆದುಕೊಂಡು ಬರಬೇಕೆಂದು ಹೇಳಿದರು.

ಒಳಗೆ ಬಂದ ಹೆಂಗಸು ತಮ್ಮ ಜಾತಿಯವಳೆಂದು ನೋಡಿದ ಕೂಡಲೇ ಇಬ್ರಾಹಿಂ ಸಾಹೇಬರಿಗೆ ಗೊತ್ತಾಯಿತು. ಸ್ವಜಾತಿಯವಳೆಂಬ ಅಭಿಮಾನವು ಬಂದಿತಾದರೂ ಮುಸಲ್ಮಾನ ಹೆಂಗಸು ಪರದಾ ಇಲ್ಲದೇ ಇದ್ದಾಳೆಂದು ಅಸಮಾಧಾನವೂ ಆಯಿತು. ಆದರೆ ಕರ್ತವ್ಯ ನಿರ್ವಹಣಾ ದೃಷ್ಟಿಯಿಂದ ಹೇಳಿದರು.

"ಬನ್ನೀಮ್ಮ. ಕುಳಿತುಕೊಳ್ಳಿರಿ."

ವಹಿದೆಯು ಬಂದು ಅಲ್ಲಿ ಖಾಲೀ ಇದ್ದ ಕುರ್ಚಿಯ ಮೇಲೆ ಕುಳಿತು ಕೊಂಡಳು.

"ಏನು ಬಂದಿದ್ದೀರಿ, ಹೇಳಿ."

"ನೀವು ಈ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇನ್ಸ್‌ಪೆಕ್ಟರ್ ಸಾಹೇಬರೆಂದು ಕಾಣುತ್ತದೆ...."

"ಹೌದು...."

"ನಾನು ನಿಮ್ಮೊಡನೆ ರಹಸ್ಯವಾಗಿ ಮಾತನಾಡಬೇಕೆಂದು ಬಂದಿದ್ದೇನೆ...."

"ನೀವು ಯಾವ ವಿಷಯವನ್ನಾದರೂ ಇವರೆದುರಿಗೆ ಮಾತನಾಡಬಹುದು. ಇವರು ನಮ್ಮ ಸಬ್ ಇನ್ಸ್‌ಪೆಕ್ಟರು ರಾಜಶೇಖರಪ್ಪನವರೆಂದು."

ಮಹಿಳೆಯು ತಾನು ಮಾಡಿದುದು ಅಸಂಗತವಾಯಿತೆಂಬಂತೆ ಮುಖ ಮಾಡಿಕೊಂಡು "ಕ್ಷಮಿಸಬೇಕು. ನಾನು ಈ ಊರಿಗೆ ಹೊಸಳು. ಇಲ್ಲಿಯ ಜನಗಳ ಪರಿಚಯವಿಲ್ಲ. ಯಾರು ಯಾರೆಂಬುದನ್ನು ಕಾಣೆ." ಎಂದಳು.

ರಾಜಶೇಖರಪ್ಪನು "ಪರವಾಯಿಲ್ಲಮ್ಮ. ಮಾತನಾಡುವ ಮೊದಲು ಯಾರು ಯಾರೆಂಬುವನ್ನು ತಿಳಿದುಕೊಳ್ಳುವುದರಲ್ಲಿ ಯಾವ ತಪ್ಪೂ ಇಲ್ಲ. ನೀವು ಬಂದಿರುವ ಕಾರ್ಯವಿಶೇಷವನ್ನು ಹೇಳಿರಿ." ಎಂದ.

ಮಹಿಳಾ ಇನ್ಸ್‌ಪೆಕ್ಟರ ಕಡೆಗೆ ನೋಡುತ್ತಾ "ತಾವು ಇಸ್ಮಾಯಿಲ್‌ನನ್ನು ಬಲ್ಲಿರಷ್ಟೇ ?" ಎಂದು ಕೇಳಿ, ತನ್ನ ಪ್ರಶ್ನೆಯನ್ನೇ ತಾನು ತಿದ್ದಿಕೊಳ್ಳುವವಳಂತೆ "ಈ ದೇಶದ ದೊಡ್ಡ ಪೋಲೀಸ್ ಇನ್ಸ್‌ಪೆಕ್ಟರಾದ ನಿಮಗೆ ಇಂತಹ ಘಾತುಕ ಜನದ ವಿಷಯವೆಲ್ಲಾ ತಿಳಿದೇ ಇರುತ್ತದೆ." ಎಂದಳು.

ತಮಗಾವುದೋ ಉಪಯುಕ್ತವಾದ ವರ್ತಮಾನವನ್ನು ಕೊಡುವುದಕ್ಕಾಗಿ ಈ ಹೆಂಗಸು ಬಂದಿದ್ದಾಳೆಂದು ಇಬ್ರಾಹಿಂ ಸಾಹೇಬರಿಗೆ ಸಂತೋಷವಾಯಿತು. ಬಹುಮಟ್ಟಿಗೆ ಅವಳು ಯಾವ ಇಸ್ಮಾಯಿಲ್‌ನ ವಿಷಯ ಹೇಳುತ್ತಿದ್ದಾಳೆಂಬುದು ಆ ವೇಳೆಗಾಗಲೇ ಅವರಿಗೆ ಅರಿವಾಗಿತ್ತು. ತಮಗೆ ಸಹಾಯ ಮಾಡಲು ಬಂದ ಹೆಂಗಸನ್ನು ಉಪಚರಿಸಬೇಕೆಂದುಕೊಂಡರು. ಅವಳು ಪೂರಾ ವಿಷಯವನ್ನು ಹೇಳುವ ಮೊದಲೇ ಸೌಜನ್ಯವನ್ನು ತೋರುವುದು ಉದಾರವಾಗುತ್ತದೆಂದು ಮನಗಂಡು ಹೇಳಿದರು.

"ಪೋಲೀಸಿನವರ ಜೀವನದಲ್ಲಿ ಇಂತಹ ವಿಷಯಗಳೆಷ್ಟೋ ಬರುತ್ತವೆ. ಎಷ್ಟೋ ವ್ಯಕ್ತಿಗಳು ಬರುತ್ತಾರೆ. ಇದನ್ನೆಲ್ಲಾ ನಿದಾನವಾಗಿ ಮಾತನಾಡಿ

ಕೊಳ್ಳೋಣ. ಇದಕ್ಕೆಲ್ಲಾ ಅವಸರಪಡಬೇಕಾಗಿಲ್ಲ. ಈಯಮ್ಮ ಪೋಲೀಸ್ ಸ್ಟೇಷನ್ನಿಗೆ ಬಂದಿದ್ದರೂ ನಮ್ಮ ಅತಿಥಿಯಂತೆ. ಮೊದಲು ಸ್ವಲ್ಪ ಟೀ ತರಿಸಿ, ರಾಜಶೇಖರಪ್ಪ"

ಆಗಂತುಕಳು ಟೀ ತೆಗೆದುಕೊಳ್ಳುತ್ತಾಳೆಯೋ ಇಲ್ಲವೋ ಎಂಬುದನ್ನು ಸಹ ಕೇಳದೇ ಇನ್ಸ್‌ಪೆಕ್ಟರ ಅಪ್ಪಣೆಯಾದನಂತರ ರಾಜಶೇಖರಪ್ಪ ಸೆಂಟ್ರಿ ತಿಮ್ಮಯ್ಯನನ್ನು ಕರೆದು ಕೂಡಲೇ ಮೂರು ಕಪ್ಪು ಚಹಾ ತರುವಂತೆ ಹೇಳಿದ.

ಅನಂತರ ಇಬ್ರಾಹಿಂ ಸಾಹೇಬರು "ಚುನ್ನೀಲಾಲನ ಹಣ ಹೊಡೆದು ಕೊಂಡು ಹೋದ ಇಸ್ಮಾಯಿಲ್‌ನ ವಿಷಯ ತಾನೇ ನೀವು ಹೇಳುವುದು." ಎಂದು ಆ ಹೆಂಗಸಿನ ಕಡೆ ನೋಡಿದರು.

ಅವಳು ಹೌದೆಂಬಂತೆ ತಲೆಯಾಡಿಸಿದಳು.

ಚುನ್ನೀಲಾಲನ ಹಣ ಅಪಹಾರವಾದ ಪ್ರಕರಣ ರಾಜಶೇಖರಪ್ಪನಿಗೆ ಗೊತ್ತಿರಲಿಲ್ಲ. ಇಬ್ಬರು ಯಾವುದಾದರೂ ವಿಷಯವನ್ನು ಮಾತನಾಡು ತ್ತಿದ್ದರೆ ಆ ವಿಷಯವೇ ಗೊತ್ತಿಲ್ಲದ ಮೂರನೆಯವರು ಅಲ್ಲಿದ್ದರೆ ಹೇಗೆ ನೋಡುತ್ತಾರೆಯೋ ಹಾಗೆ ಅವನು ಅವರಿಬ್ಬರ ಕಡೆಗೂ ನೋಡಿದ.

ತಮಗೆ ತಿಳಿಯದಿರುವ ವಿಷಯಗಳೇ ಇಲ್ಲವೆಂಬ ಹೆಮ್ಮೆಯಿಂದ ಒರಟಾದ ಗಡ್ಡವನ್ನು ನೀವಿಕೊಳ್ಳುತ್ತಾ ಇಬ್ರಾಹಿಂ ಸಾಹೇಬರು ಹೇಳಿದರು.

"ಅದು ನೀವು ಸರ್ವಿಸ್‌ಗೆ ಬರುವುದಕ್ಕಿಂತ ಸ್ವಲ್ಪ ಮೊದಲು ನಡೆದ ಪ್ರಸಂಗ, ರಾಜಶೇಖರಪ್ಪ. ಚುನ್ನೀಲಾಲ್ ಈ ಊರಿನ ಮಂಡೀ ಪೇಟೆ ಯಲ್ಲಿ ದೊಡ್ಡ ವರ್ತಕ. ಅವನ ಗುಮಾಸ್ತ ಹಳೆಯ ಹ್ಯಾಂಡ್ ಬ್ಯಾಗಿನಲ್ಲಿ ದಿನವೂ ಕಂತೆ ಕಂತೆ ನೋಟುಗಳನ್ನು ಬ್ಯಾಂಕಿಗೆ ತೆಗೆದುಕೊಂಡು ಹೋಗು ತ್ತಿದ್ದ. ಈ ಸೂಕ್ಷ್ಮ ತಿಳಿದುಕೊಂಡಿದ್ದ ಇಸ್ಮಾಯಿಲ್ ಅವನಿಗೆಷ್ಟೋ ಹೆಸರುಗಳು – ಹಳೇ ಕಾರೊಂದನ್ನು ಅವನು ಬರುವ ದಾರಿಯಲ್ಲಿಯೇ ನಿಲ್ಲಿಸಿ ಕೊಂಡು ನಿಂತಿದ್ದ. ಇಸ್ಮಾಯಿಲ್ ಯಾವಾಗಲೂ ಚುಟ್ಟಾ ಸೇದುತ್ತಾನೆ. ಕಾರು ನಿಲ್ಲಿಸಿ ಅದರ ಪಕ್ಕದಲ್ಲಿ ಯಾರನ್ನೋ ಕಾಯುತ್ತಿರುವಂತೆ ಚುಟ್ಟಾ ಸೇದುತ್ತಾ ನಿಂತಿದ್ದ. ಚುನ್ನಿಲಾಲನ ಗುಮಾಸ್ತ ತನ್ನ ಪಕ್ಕದಲ್ಲಿ ಹಾದು ಹೋಗುವಾಗ ಹಟಾತ್ತನೆ ಚೂರಿಯಿಂದ ಅವನಿಗೆ ಸಣ್ಣ ಗಾಯವನ್ನು

ಮಾಡಿದ. ಈ ಸೇಟುಗಳ ವಿಷಯವನ್ನು ಹೇಳಬೇಕಾಗಿಯೇ ಇಲ್ಲವಲ್ಲ. ದೇವರು ಅವರಿಗೆ ದುಡ್ಡು ಮಾಡುವ ವಿಷಯವೊಂದರಲ್ಲಿ ಬುದ್ಧಿಯನ್ನು ಕೊಟ್ಟಿದ್ದಾನೆಯೇ ವಿನಾ ಇನ್ನಾವ ಬುದ್ಧಿಯನ್ನೂ ಕೊಟ್ಟಿಲ್ಲ. ಚೂರೀ ಏಟು ಬಿದ್ದು ಬಟ್ಟೆ ರಕ್ತವಾಗುತ್ತಲೇ ಚುನ್ನೀಲಾಲನ ಮುನಿಯಂಜೀ ಯಾರೋ ಕೊಲೆಮಾಡುವ ಉದ್ದೇಶದಿಂದ ತನಗೆ ಚೂರಿ ಹಾಕಿದರೆಂದೂ, ಸ್ವಲ್ಪ ಹೊತ್ತಿಗೆ ತನ್ನ ಪ್ರಾಣ ಹೋಗುತ್ತದೆ ಎಂದೂ ಭಾವಿಸಿ ಕೂಗಿ ಕೊಳ್ಳುತ್ತಾ ನೆಲದ ಮೇಲೆ ಬಿದ್ದುಬಿಟ್ಟ. ಇಸ್ಮಾಯಿಲ್ ಅವನ ಕೈಯಲ್ಲಿದ್ದ ಬ್ಯಾಗ್ ಕಿತ್ತುಕೊಂಡು ಪರಾರಿಯಾದ. ಇದಿಷ್ಟೂ ಕ್ಷಣಾರ್ಧದಲ್ಲಿ ನಡೆದು ಹೋಯಿತು."

ಸಾಹೇಬರು ಹೆಂಗಸಿನ ಕಡೆ ತಿರುಗಿ "ನೀವು ಹೇಳುವುದು ಈ ಇಸ್ಮಾಯಿಲ್‌ನನ್ನು ಕುರಿತು ತಾನೇ ?" ಎಂದರು.

"ಹುಂ. ಆತನ ವಿಷಯವನ್ನೇ...."

ಆಕೆ ಮುಂದೆ ಮಾತನಾಡುವುದರಲ್ಲಿ ರಾಜಶೇಖರಪ್ಪನು "ಮುನಿಯಂಜೀಯನ್ನು ಚೂರಿಯಿಂದ ಹೊಡೆದು ಅವನ ಕೈಯಲ್ಲಿದ್ದ ಹಣದ ಚೀಲವನ್ನು ಅಪಹರಿಸಿಕೊಂಡು ಹೋದನಷ್ಟೇ. ಅವನು ಕಾರು ತೆಗೆದುಕೊಂಡು ಬಂದಿದ್ದರಿಂದ ಕಾರಿನಲ್ಲಿಯೇ ಹೋಗಿರಬೇಕು. ಆ ಕಾರಿನ ನಂಬರು ಯಾರ ಕಣ್ಣಿಗೂ ಬೀಳಲಿಲ್ಲವೇ ?" ಎಂದ.

"ಬಿತ್ತು. ಎಷ್ಟೋ ಜನರು ಕಾರನ್ನೂ ಅದರ ನಂಬರನ್ನೂ ಗಮನಿಸಿದರು ಮಿ|| ರಾಜಶೇಖರಪ್ಪ. ಇಂತಹ ಸಮಯಗಳಲ್ಲಿ ಅಪರಾಧಿಗಳು ನಿಜವಾದ ನಂಬರಿರುವ ಕಾರನ್ನು ಉಪಯೋಗಿಸುತ್ತಾರೆಂದು ಯಾಕೆ ಭ್ರಾಂತರಾಗುತ್ತೀರಿ ? ಕಾರು ತೆಗೆದುಕೊಂಡು ಬರುವ ಮೊದಲೇ ಅದರ ನಂಬರು ಪ್ಲೇಟ್ ಬದಲಾಯಿಸಿಕೊಂಡು ಬಂದಿದ್ದ."

ಹೋಗಲಿ, ಕಡೆಗೆ ಅವನನ್ನು ಯಾವ ರೀತಿಯಾಗಿ ಹಿಡಿಯಲಾಯಿತು ?"

"ಅವನನ್ನು ಹಿಡಿಯುವುದಕ್ಕೇ ಆಗಿಲ್ಲ – ಬೊಂಬಾಯಿನ ಪೋಲೀಸರು, ಮದರಾಸಿನ ಪೋಲೀಸರು, ನಾವು ಮೈಸೂರಿನ ಪೋಲೀಸಿನವರು ಅವನನ್ನು ಹಿಡಿಯುವುದಕ್ಕೆ ಹರತರದೂದು ಮಾಡುತ್ತಿದ್ದೇವೆ."

ರಾಜಶೇಖರಪ್ಪನು ವಿಸ್ಮಿತನಾಗಿ "ನೀವು ಹೇಳುವುದು ಆಶ್ಚರ್ಯಕರವಾಗಿದೆ, ಸಾಹೇಬರೇ. ಈ ಕೆಲಸ ಮಾಡಿದವನು ಇಸ್ಮಾಯಿಲ್ ಎಂದು ಎಲ್ಲರಿಗೂ ತಿಳಿದಿದ್ದರೂ ಅವನನ್ನು ಹಿಡಿಯಲಿಲ್ಲವೇಕೆ? ಅವನು ಯಾರ ಕಣ್ಣಿಗೂ ಬೀಳುವುದಿಲ್ಲವೇನು?" ಎಂದ.

"ಬೀಳದೇ ಏನು? ರಾಜಾರೋಷವಾಗಿ ಓಡಿಯಾಡುತ್ತಾನೆ. ಆದರೆ ಅವನನ್ನು ಹಿಡಿಯುವುದು ಬಹಳ ಕಷ್ಟ. ಹೀಗೆ ಹೇಳಿದರೆ ನಿಮಗೆ ಅರ್ಥವಾಗುವುದಿಲ್ಲವೆಂದು ಕಾಣುತ್ತದೆ, ರಾಜಶೇಖರಪ್ಪ. ಸಾಧಾರಣವಾಗಿ ಅದು ಅರ್ಥವಾಗುವುದು ಕಷ್ಟ. ಹಿಡಿಯುವುದು ಸಾಧ್ಯವೇ ಆಗದಂತೆ ಚತುರತೆಯಿಂದ ಅವನು ಕೆಲಸಮಾಡುತ್ತಾನೆ. ಇಂತಹ ಕೆಲಸಗಳನ್ನು ಮಾಡುವವರು ಏನಾದರೊಂದು ತಪ್ಪುಮಾಡಿ ಸುಳಿವು ಬಿಟ್ಟುಕೊಟ್ಟಿರುತ್ತಾರೆ. ಈ ಹತ್ತು ವರ್ಷಗಳಿಂದ ಇಸ್ಮಾಯಿಲ್ ಅಂತಹದೊಂದು ಸಣ್ಣ ತಪ್ಪು ಮಾಡಿದ ನಿದರ್ಶನವನ್ನು ನಾನು ಕಾಣೆ. ಅವನೊಂದು ದೊಡ್ಡ ಲೂಟೀ ಹೊಡೆಯಲು ಪ್ರಯತ್ನಮಾಡುತ್ತಿರುತ್ತಾನೆಂದುಕೊಳ್ಳಿ. ಸಾಧಾರಣವಾಗಿ ಪೋಲೀಸರ ಮತ್ತು ಜನಗಳ ಕಣ್ಣಿಗೆ ಬೀಳುವಂತಹ ಯಾವುದಾದರೂ ಜುಜಬೀ ಕೆಲಸವನ್ನೂ ಆರಂಭಿಸುತ್ತಾನೆ. ಎಲ್ಲರೂ ನಿಗಾದಿಂದ ಒಂದುಕಡೆ ನೋಡುತ್ತಿರುವಾಗ ಮತ್ತೊಂದು ಕಡೆಯಿಂದ ಹದ್ದಿನಂತೆ ಅಪರಾಧವನ್ನು ಮಾಡಿ ಹೊರಟು ಹೋಗುತ್ತಾನೆ. ನೀವು ಯಾವುದರ ಮೇಲೆ ನಿಗಾ ಇಟ್ಟು ನೋಡುತ್ತಿರುತ್ತೀರೋ ಆ ಜುಜಬೀ ಅಪರಾಧ ಆಗಿಯೇ ಇರುವುದಿಲ್ಲ. ನೀವು ನಿಗಾ ಇಟ್ಟು ನೋಡುತ್ತಿದ್ದೀರೆಂಬ ಹೆದರಿಕೆಯಿಂದ ಓಡಿಹೋದಂತೆ ಹೋಗುತ್ತಾನೆ. ಇದರಲ್ಲಿ ಇನ್ನೂ ಒಂದು ವಿಷಯವಿದೆ. ಅವನು ವೇಷಾಂತರಗಳನ್ನು ಧರಿಸುವುದರಲ್ಲಿ ಮಹಾ ಚತುರ. ಚುನ್ನಿಲಾಲನ ಪ್ರಸಂಗವನ್ನೇ ನಿದರ್ಶನವಾಗಿ ತೆಗೆದುಕೊಳ್ಳಿರಿ. ಮುನಿಯಂಜೀ ತನ್ನನ್ನು ಇರಿದಾತನನ್ನು ನೋಡಿದ. ಪರಾರಿಯಾಗಿ ಓಡಿಹೋಗುತ್ತಿದ್ದವನನ್ನು ಎಷ್ಟೋ ಜನರು ನೋಡಿದರು. ಆದರೆ ಅವನು ಪಾರಸೀ ವೇಷವನ್ನು ಧರಿಸಿಕೊಂಡಿದ್ದ. ಗುರ್ತಿಸುವುದು ಹೇಗೆ? ಆ ಅಪರಾಧವನ್ನು ಮಾಡಿದವನು ಇಸ್ಮಾಯಿಲ್ ಎಂದು ಸಾಬೀತು ಮಾಡಲಾರದೇ ಹೋದೆವು."

"ಸಾಬೀತು ಮಾಡುವುದಕ್ಕಾಗದೇ ಇದ್ದರೂ ಅವನು ಇಸ್ಮಾಯಿಲ್ ಎಂದು ಹೇಗೆ ಹೇಳುತ್ತೀರಿ ?"

"ಅಷ್ಟೇ ಹೇಳುವುದಕ್ಕಾಗುವುದು. ಈಗ ಬೆಂಗಳೂರಿನಲ್ಲಿ ಎಷ್ಟೋ ಅಪರಾಧಗಳು ನಡೆಯುತ್ತವೆ. ಅದು ಯಾರು ಮಾಡಿದುದು ಎಂದು ನಾವು ನಿಗಾ ಮಾಡುವುದಿಲ್ಲವೇನು ? ಬೀಗ ಒಡೆದಿರುವ ತರಹ, ಕಳ್ಳತನ ಮಾಡಿರುವ ರೀತಿ ಇವುಗಳನ್ನು ನೋಡಿಕೊಂಡು ಬಂದ ನಮ್ಮ ಸಿ. ಐ. ಡಿ. ಗಳು ಇಂತಹವನೇ ಕಳ್ಳತನ ಮಾಡಿರುವನೆಂದು ಊಹೆಮಾಡಿ ಹೇಳುವುದಿಲ್ಲವೇ ? ಹಾಗೆ ಯಾವುದಾದರೂ ವಿಚಿತ್ರವಾದ ಕಳ್ಳತನ – ಅಪಹರಣಗಳು ನಡೆದರೆ ಅದರ ತರಹ, ರೀತಿಗಳನ್ನು ನೋಡಿ ಕೆಲವು ಇಸ್ಮಾಯಿಲ್‌ನಿಂದ ನಡೆದುವೆಂದು ಊಹೆಮಾಡುತ್ತೇವೆ."

ಸಾಹೇಬರು ಇಸ್ಮಾಯಿಲ್‌ನ ವಿಷಯವನ್ನು ರಾಜಶೇಖರಪ್ಪನಿಗೆ ವಿವರಿಸುತ್ತಿದ್ದಂತೆಯೇ ಹೋಟೆಲ್‌ನ ಮಾಣಿ ಕೆಟಲ್‌ನಲ್ಲಿ ಚಹಾ ತಂದು ಮೂರು ಕಪ್ಪುಗಳಿಗೆ ಸುರಿದ.

ಎಲ್ಲರೂ ಕುಡಿದು ಮುಗಿಸಿದ ಮೇಲೆ ಇಬ್ರಾಹಿಂ ಸಾಹೇಬರು "ಹೇಳೀಮ್ಮಾ. . ." ಎಂದರು.

"ಆ ಇಸ್ಮಾಯಿಲ್ ಈಗ ಬೆಂಗಳೂರಿಗೆ ಬಂದಿದ್ದಾನೆ. ಅವನು ಯಾವುದೋ ಕೇಪ್ ಹೊಡೆಯುವುದಕ್ಕಾಗಿ ಇಲ್ಲಿಗೆ ಬಂದಿರುವಂತೆ ಕಂಡು ಬರುತ್ತದೆ."

ಸಾಹೇಬರು ಆಸಕ್ತಿಯಿಂದ ಅವಳ ಕಡೆಗೆ ನೋಡುತ್ತಾ "ಸ್ವಲ್ಪ ಎಲ್ಲವನ್ನೂ ವಿವರವಾಗಿ ಹೇಳಿರಿ." ಎಂದರು.

"ಈಗಲೇ ಎಲ್ಲ ವಿವರಗಳನ್ನೂ ಹೇಳಲು ನನಗೆ ಏನೂ ಗೊತ್ತಿಲ್ಲ. ಆದರೆ ನಾನು ಅವನ ಮೇಲೆ ನಿಗಾ ಇಟ್ಟು ಕಾಯುತ್ತಿದ್ದೇನೆ. ಕಣ್ಣುರೆಪ್ಪೆ ಹೊಡೆಯದೇ ಅವನ ಮೇಲೆ ಕಾವಲು ಕಾದಿದ್ದೇನೆ. ಸಮಯ ಬಂದಾಗ ಎಲ್ಲಾ ವಿಷಯಗಳನ್ನೂ ಹೇಳುತ್ತೇನೆ."

"ಅವನು ಯಾವ ಬಗೆಯಾದ ಅಪರಾಧ ಮಾಡಲು ಬಂದಿದ್ದಾನೆಂಬುದನ್ನು ಹೇಳಲಾರಿರಾ ?"

"ವರ್ಷಾಂತರಗಳಿಂದ ಪೋಲೀಸ್ ಕೆಲಸದಲ್ಲಿ ಪರಿಶ್ರಮ ಹೊಂದಿರುವ ನೀವು ಈ ರೀತಿಯಾಗಿ ಮಾತನಾಡಿದರೆ ನನಗೆ ಆಶ್ಚರ್ಯವಾಗುತ್ತದೆ ಸಾರ್. ಇಸ್ಮಾಯಿಲ್‌ನನ್ನೂ ಅವನ ಗುಣಗಳನ್ನೂ ತಾವು ಚೆನ್ನಾಗಿ ಬಲ್ಲಿರಿ. ತನ್ನ ನಿಗಾ ಎತ್ತ ಕಡೆಯಿದೆ ಎಂಬ ಸೂಕ್ಷ್ಮವನ್ನು ಅವನು ಕಡೆಯ ಗಳಿಗೆಯವರೆವಿಗೆ ತೋರಿಸಿಕೊಳ್ಳುವುದಿಲ್ಲ. ಯಾವ ಬಗೆಯಾಗಿ ಕಾರ್ಯಾಚರಣೆ ಮಾಡು ತ್ತಾನೆಂಬುದು ಸಹ ಗೊತ್ತಾಗುವುದಿಲ್ಲ. ಅವನು ತಾನು ಮಾಡುವ ಕೆಲಸ ಗಳಲ್ಲಿ ಯಾರ ಸಹಾಯವನ್ನೂ ಪಡೆಯುವುದಿಲ್ಲ."

"ಹಾಗಾದರೆ ನೀವು ಏನು ಹೇಳುತ್ತೀರಿ?"

"ನಾನು ಸರಿಯಾದ ಸಮಯದಲ್ಲಿ ಬಂದು ನಿಮಗೆ ವಿಷಯ ತಿಳಿಸು ತ್ತೇನೆ. ನೀವು ಅವನನ್ನು ಹಿಡಿದು ಶಿಕ್ಷೆ ಮಾಡಬೇಕು."

"ಇಸ್ಮಾಯಿಲ್‌ನನ್ನು ಹಿಡಿದು ಒಳಗೆ ಹಾಕುವುದಕ್ಕಿಂತ ನನಗೆ ಸಂತೋಷಕರವಾದ ಕೆಲಸವು ಬೇರೇ ಇಲ್ಲವೇ ಇಲ್ಲ. ಆದರೆ ನಿಮ್ಮನ್ನು ಒಂದು ಮಾತು ಕೇಳಬೇಕಾಗಿದೆ. ನೀವೇಕೆ ಅವನನ್ನು ಹಿಡಿದುಕೊಡಲು ಮುಂದೆ ಬಂದಿದ್ದೀರಿ. ಅವನಿಗೆ ಶಿಕ್ಷೆಯಾಗುವುದರಲ್ಲಿ ನಿಮಗೇಕೆ ಆಸಕ್ತಿ?"

"ಅವನು ನನ್ನ ಆಜನ್ಮ ಶತೃವಾಗಿರುವುದರಿಂದ...."

ಇನ್ಸ್‌ಪೆಕ್ಟರ್, ಸಬ್ ಇನ್ಸ್‌ಪೆಕ್ಟರಿಬ್ಬರೂ ಆ ಮಾತು ಕೇಳಿ ಕ್ಷಣಕಾಲ ಸ್ಥಂಭಿತರಾದರು. ಆ ಹೆಂಗಸು ಮುಂದುವರಿದು ಹೇಳಿದಳು.

"ಅವನನ್ನು ಹಿಡಿದುಕೊಡುದಕ್ಕಿರಲಿ, ಅವನಿಗೆ ಶಿಕ್ಷೆಯಾಗುವುದರಲ್ಲಿ ನನಗೇಕೆ ಆಸಕ್ತಿಯಿದೆ ಎಂಬುದನ್ನು ವಿವರವಾಗಿ ಹೇಳಬೇಕಾದರೆ ಮೂರು ದಿನಗಳು ಬೇಕಾಗುತ್ತವೆ. ಒಟ್ಟನಲ್ಲಿ ನಾನೊಂದು ಮಾತು ಹೇಳುತ್ತೇನೆ. ನಾನು ಗೌರವಸ್ಥ ಕುಟುಂಬಕ್ಕೆ ಸೇರಿದ ಸ್ತ್ರೀ. ಇಂದು ಬೀದಿಯ ಹೆಣ್ಣಾಗಿ ದ್ದೇನೆ. ಇದಕ್ಕೆ ಕಾರಣ ಆ ಪರಮ ನೀಚ. ನಾನು ಅವನಿಗಾಗಿ ಸರ್ವಸ್ವ ತ್ಯಾಗಮಾಡಿದರೂ ಅವನು ನನ್ನನ್ನು ವಂಚಿಸಿದ್ದಾನೆ. ಇಷ್ಟರಿಂದಲೇ ಅವ ನನ್ನು ಹಿಡಿದುಕೊಳ್ಳುವುದರಲ್ಲಿ ನನಗೆಂತಹ ಆಸಕ್ತಿಯಿದೆ ಎಂಬುದನ್ನು ಬುದ್ಧಿ ವಂತರಾದ ನೀವು ಅರ್ಥಮಾಡಿಕೊಳ್ಳಬಲ್ಲರಿ. ಪ್ರೀತಿಸುವ ಹೆಂಗಸು ದ್ವೇಷಿ ಸಲು ತೊಡಗಿದರೆ ಎಂತಹ ಭಯಂಕರ ಸ್ವರೂಪಿಣಿಯಾಗಬಲ್ಲಳೆಂಬುದನ್ನು ಒಂದು ಬಾರಿ ಅವನಿಗೆ ತೋರಿಸಬೇಕೆಂದಿದೆ."

ಇಬ್ರಾಹಿಂ ಸಾಹೇಬರು ಆನಂದಭರಿತರಾಗಿ "ನೀವು ಪೋಲೀಸಿಗೆ ಅವನ ವಿಷಯವಾದ ಸಮಾಚಾರವನ್ನು ಕೊಟ್ಟು ನಮ್ಮಿಂದ ಏನಾದರೂ ಸಹಾಯವನ್ನು ಪಡೆಯಲು ಬಂದಿದ್ದೀರೆಂದು ಭಾವಿಸಿದ್ದೆ. ಆದರೆ ನೀವು ಮಹೋನ್ನತವಾದ ಉದ್ದೇಶದಿಂದ ಬಂದಿದ್ದೀರಿ. ಇದರಿಂದ ನಿಮ್ಮ ಇಷ್ಟಾರ್ಥ ಸಿದ್ಧಿಯಾಗುವುದರ ಜೊತೆಗೆ ದೇಶೋಪಕಾರವೂ ಆಗುತ್ತದೆ – ಎಂದು ಹೇಳಬಲ್ಲೆ. ಇಸ್ಮಾಯಿಲ್‌ನಂತಹ ಘಾತುಕರು ಹೊರಗೆ ಓಡಿಯಾಡುತ್ತಿರುವುದಕ್ಕಿಂತಲೂ ಕಾರಾಗೃಹದಲ್ಲಿರುವುದು ಒಳ್ಳೆಯದು." ಎಂದರು.

ಆ ಹೆಂಗಸು ನಗುತ್ತಾ "ಸರಿಯಾದ ಮಾತು ಹೇಳಿದಿರಿ. ಅಂತಹವರು ಒಳಗಿರುವುದು ಸರ್ವಕ್ಷೇಮ. ಇನ್ಸ್‌ಪೆಕ್ಟರ್ ಸಾಹೇಬರೇ, ನಾನು ದ್ರವ್ಯಾಪೇಕ್ಷೆಯಿಂದ ಬಂದವಳೆಂದು ನೀವು ಅಭಿಪ್ರಾಯಪಟ್ಟಿರಲ್ಲವೇ ? ಸರ್ವಥಾ ಆ ವಿಷಯ ಸರಿಯಲ್ಲ. ನನ್ನ ಹತ್ತಿರವೂ ಸ್ವಲ್ಪ ಹಣವಿದೆ. ಅವನ ಸರ್ವನಾಶನಕ್ಕಾಗಿ ಅದಷ್ಟನ್ನೂ ಖರ್ಚುಮಾಡಿಬಿಡಬೇಕೆಂದರೂ ನಾನು ಸಿದ್ಧನಾಗಿದ್ದೇನೆ." ಎಂದಳು.

"ಇಸ್ಮಾಯಿಲ್ ಈ ಊರಿನಲ್ಲಿ ಎಲ್ಲಿ ಇಳಿದುಕೊಂಡಿದ್ದಾನೆ?"

"ಅದನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ ನಿಮಗಿದೆಯೇನು ?"

ಆ ಪ್ರಶ್ನೆಯನ್ನು ಕೇಳಿ ಇಬ್ರಾಹಿಂ ಸಾಹೇಬರು ಅವಾಕ್ಕಾದರು.

"ಇಸ್ಮಾಯಿಲ್‌ನ ವಿಷಯವಾದ ಎಲ್ಲ ವಿವರಗಳನ್ನೂ ಹೇಳಲು ಬಂದಿರುವ ನಾನು ಅವನೆಲ್ಲಿ ಇಳಿದಿದ್ದಾನೆಂಬುದನ್ನು ತಿಳಿದುಕೊಳ್ಳದೇ ಇರುತ್ತೇನೆಯೇ ? ಅಥವಾ ಅವನೆಲ್ಲಿದ್ದಾನೆಂಬುದನ್ನು ನಿಮಗೆ ಹೇಳಲು ಸಂಕೋಚಿಸುತ್ತೇನೆಯೇ ? ಆದೊಂದೂ ಇಲ್ಲ. ನೀವು ಅವಸರಪಟ್ಟು ಸಿ. ಐ. ಡಿ. ಗಳೇ ಮುಂತಾದವರನ್ನು ಅವನ ಮೇಲೆ ಹಾಕುವುದರಿಂದ ಹಕ್ಕಿ ಬಲೆಯಲ್ಲಿ ಸಿಕ್ಕಿಕೊಳ್ಳುವ ಮೊದಲೇ ಹಾರಿಹೋಗುತ್ತದೆ. ಅದರಿಂದ ಅವನೆಲ್ಲಿದ್ದಾನೆಂದು ಹೇಳಲು ಸಂಕೋಚಿಸುತ್ತೇನೆ."

ಪೋಲೀಸ್ ಅಧಿಕಾರಿಗಳಿಬ್ಬರೂ ಅವಳ ಬುದ್ಧಿವಂತಿಕೆಗೆ ಮೆಚ್ಚಿಕೊಂಡರು.

ಇಬ್ರಾಹಿಂ ಸಾಹೇಬರು "ನಾನು ಹಾಗೆ ದುಡುಕುವುದಿಲ್ಲ. ಅವನೆಲ್ಲಿ

ದ್ದಾನೆಂಬುದನ್ನು ಹೇಳಿರಿ ಅದು ನನಗೆ ಗೊತ್ತಿರುವುದು ಒಳ್ಳೆಯದು." ಎಂದರು.

"ಅವನು ವಸಂತ ವಿಹಾರ ಹೋಟಲಿನಲ್ಲಿ ಇಳಿದುಕೊಂಡಿದ್ದಾನೆ."

"ಬಹಳ ಸಂತೋಷ. ನಿಮ್ಮ ಹೆಸರೇನೆಂಬುದನ್ನು ನಾನು ತಿಳಿದುಕೊಳ್ಳಬಹುದೇ?"

"ಅಗತ್ಯವಾಗಿ. ನಾನೇ ಹೇಳಬೇಕಾಗಿತ್ತು. ಕ್ಷಮಿಸಿರಿ, ನನ್ನ ಹೆಸರು ವಹಿದಾ."

## ೩

ವಹಿದಾ ತಾನು ಕೊಟ್ಟ ಮಾತಿಗೆ ತಪ್ಪಲಿಲ್ಲ.

ಸಂಜೆ ಐದು ಗಂಟೆಯ ವೇಳೆಗೆ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನಲ್ಲಿ ಹಾಜರಾದಳು ಹಿಂದಿನ ದಿನ ಸಂಜೆ ಅವಳು ಬಂದಿದ್ದುದನ್ನೂ ಇನ್ಸ್ಪೆಕ್ಟರ್ ಅವಳನ್ನು ಗೌರವ ಮಾಡಿದ್ದುದನ್ನೂ ಸೆಂಟ್ರಿ ತಿಮ್ಮಯ್ಯ ನೋಡಿದ. ಆದ ರಿಂದ ಟ್ಯಾಕ್ಸೀ ಬಂದು ನಿಂತು ವಹಿದಾ ಬಾಗಿಲು ತೆಗೆಯುತ್ತಿರುವಾಗಲೇ ಬಂದು ನಿಂತು ಸೆಲ್ಯೂಟ್ ಹೊಡೆದ.

"ಇನ್ಸ್ಪೆಕ್ಟರ್ ಸಾಹೇಬರಿದ್ದಾರೇನು?"

ಅವಳ ಮುಖಭಾವದಲ್ಲಿಯೂ ಧ್ವನಿಯಲ್ಲಿಯೂ ಗಾಬರಿ ಕಂಡು ಬರುತ್ತಿತ್ತು.

"ಇಲ್ಲ. ಅವರಿನ್ನೂ ಬಂದಿಲ್ಲ."

ವಹಿದಾ ಟ್ಯಾಕ್ಸಿಯ ಹಿಂದುಗಡೆ ಕುಳಿತಿದ್ದವಳು ಬಾಗಿಲು ತೆಗೆದಿದ್ದಳು. ಒಂದು ಹೆಜ್ಜೆ ನೆಲದ ಮೇಲೆ ಇಟ್ಟಿದ್ದಳು. ಬಲಗೈ ಬಾಗಿಲಿನ ಮೇಲೆಯೇ ಇದ್ದಿತು. ನಿಂತವಳು ನಿಂತಹಾಗೆಯೇ ನಿಂತು ಕೇಳಿದಳು.

"ಎಲ್ಲಿದ್ದಾರೆ? ಎಷ್ಟು ಹೊತ್ತಿಗೆ ಬರುತ್ತಾರೆ? ಈಗ ಎಲ್ಲಿ ಸಿಕ್ಕುತ್ತಾರೆ?"

ಅವಳ ತರಹವನ್ನು ನೋಡಿ ಏನೋ ಜರೂರು ಕೆಲಸವಿರಬಹುದೆಂದು ತಿಮ್ಮಯ್ಯ ಹೇಳಿದ.

"ಕೋರ್ಟಿಗೆ ಹೋಗಿದ್ದಾರೆ. ಇನ್ನೇನು ಕೋರ್ಟು ಮುಚ್ಚುವ ಹೊತ್ತೂ ಆಯಿತು. ಮನೆಗೆ ಹೋಗಿ ನಾಷ್ಟಾ ಮಾಡಿಕೊಂಡು ಆರೂವರೆ ಏಳುಗಂಟೆಯ ಸುಮಾರಿಗೆ ಬರಬಹುದು."

"ಅವರ ಮನೆಯೆಲ್ಲಿದೆ?" ಎಂದು ಕೇಳಿದ ವಹಿದಾ, ಮರುಕ್ಷಣ ದಲ್ಲಿಯೇ ಅದಕ್ಕೆ ಉತ್ತರವನ್ನು ನಿರೀಕ್ಷಿಸದೇ "ಹೊತ್ತಾಗಿ ಹೋಗುತ್ತದೆ. ಈಗಾಗಲೇ ಕೋರ್ಟು ಮುಚ್ಚುವ ಹೊತ್ತಾಯಿತು - ಎನ್ನುತ್ತೀಯೇ? ಕೋರ್ಟಿಗೆ ಹೋಗಿ ನೋಡುತ್ತೇನೆ. ಅವರಿಲ್ಲದಿದ್ದರೆ ಅನಂತರ ಬಂದು ಅವರ ಮನೆಯೆಲ್ಲಿದೆ ಎಂಬುದನ್ನು ತಿಳಿದುಕೊಂಡರಾಯಿತು." ಎಂದು ಹೇಳಿ ಡ್ರೈವರನನ್ನು ಕುರಿತು "ಮ್ಯಾಜಿಸ್ಟ್ರೇಟರುಗಳ ಕೋರ್ಟಿನ ಬಳಿ ಬಿಡು." ಎಂದು ಆಜ್ಞೆ ಮಾಡಿದಳು.

ಟ್ಯಾಕ್ಸಿಯು ಹೊರಟಿತು. ಅದು ವೇಗವಾಗಿಯೇ ಹೋಗುತ್ತಿತ್ತು. ಆದರೂ ಅದರ ವೇಗವು ವಹಿದೆಗೆ ಸಮಾಧಾನಕರವಾಗಿರಲಿಲ್ಲವೆಂದು ಕಾಣು ತ್ತದೆ. ಬೇಗ ಬಿಡು." "ಬೇಗ ಬಿಡು." ಎಂದು ಒಂದೆರಡು ಸಲ ಅವ ಸರ ಮಾಡಿದಳು.

ಮ್ಯಾಜಿಸ್ಟ್ರೇಟರುಗಳ ಕೋರ್ಟಿನ ಮುಂದಿರುವ ವಿಶಾಲವಾದ ಬಯಲಿ ನಲ್ಲಿ ಮೂರು ನಾಲ್ಕು ಮಂದಿ ಪೋಲೀಸಿನವರು ನಿಂತು ಮಾತನಾಡುತ್ತಿ ದ್ದರು. ಅವರಲ್ಲಿ ಇಬ್ರಾಹಿಂ ಸಾಹೇಬರೂ ಒಬ್ಬರಿದ್ದರು.

ವೇಗವಾಗಿ ಬಂದು ನಿಂತ ಟ್ಯಾಕ್ಸಿಯನ್ನು ಎಲ್ಲರೂ ಗಮನಿಸಿದರು. ಕಿಟಕಿಯಲ್ಲಿ ವಹಿದೆಯ ಮುಖವನ್ನು ನೋಡಿದೊಡನೆಯೇ ಅದು ಬಂದುದು ತಮಗಾಗಿ ಎಂದರಿತ ಇಬ್ರಾಹಿಂ ಸಾಹೇಬರು ಗುಂಪಿನಿಂದ ಬೇರ್ಪಟ್ಟು ಟ್ಯಾಕ್ಸಿಯ ಬಳಿಗೆ ಬಂದು ನಿಂತುಕೊಂಡರು.

"ಏನು ವಹಿದಾ ಬೇಗಂ?"

"ಸ್ವಲ್ಪ ಜರೂರಾಗಿ ಮಾತನಾಡಬೇಕಾಗಿತ್ತು...."

"ಹೇಳಿ, ಏನು ಸಮಾಚಾರ?"

"ಇಲ್ಲ. ನನ್ನ ಜೊತೆಯಲ್ಲಿ ಬನ್ನಿ, ಹೋಗೋಣ...."

ಸಾಹೇಬರು ಕ್ಷಣಕಾಲ ಸಂಕೋಚಿಸಿದರು.

"ನನಗೆ ಒಂದು ಗಳಿಗೆಯೂ ತಡಮಾಡುವುದು ಇಷ್ಟವಿಲ್ಲ. ಅದರಿಂದಲೇ ಆತುರ ಆತುರವಾಗಿ ಬಂದಿದ್ದೇನೆ. ನೀವು ಸ್ವಲ್ಪವೂ ತಡಮಾಡದೇ ಬಂದರೆ ಒಳ್ಳೆಯದು."

ಇಬ್ರಾಹಿಂ ಸಾಹೇಬರಿಗೆ ವಿಧಿಯಿಲ್ಲದೇ ಹೋಯಿತು.

ಅಲ್ಲಿಯೇ ನಿಂತಿದ್ದ ಸ್ಟೇಷನ್ ಗುಮಾಸ್ತನನ್ನು ಕುರಿತು "ಗುಂಡಪ್ಪ. ರಾಜಶೇಖರಪ್ಪನವರು ಹೋಟಲಿನಲ್ಲಿರಬಹುದು. ಈಗ ಬರುತ್ತಾರೆ. ಅವರನ್ನು ಸ್ಟೇಷನ್ನಿನಲ್ಲಿಯೇ ಇರುವಂತೆ ಹೇಳು. ನಾನು ಯಾವುದೋ ಜರೂರು ಕೆಲಸದ ಮೇಲೆ ಹೋಗಿದ್ದೇನೆಂದು ತಿಳಿಸು."

ಸಾಹೇಬರು ಟ್ಯಾಕ್ಸಿಯಲ್ಲಿ ಕುಳಿತರು. ಟ್ಯಾಕ್ಸೀ ಹೊರಟಿತು.

"ಏನು ವಿಷಯ, ಈಗಲಾದರೂ ಹೇಳಿ."

"ಅದೇ, ನಿನ್ನೆಯ ದಿನ ನಾನು ಬಂದು ಮಾತನಾಡಿದ ವಿಷಯ. ಆದರೆ ಇದೆಲ್ಲವನ್ನೂ ಅಲ್ಲಿ ಮತ್ತೊಬ್ಬರೆದುರಿಗೂ, ಇಲ್ಲಿ ಬೀದಿಯಲ್ಲಿಯೂ ಮಾತನಾಡುವುದಕ್ಕಾಗುವುದಿಲ್ಲ. ನಾನು ಪಿಂಕ್ಸ್‌ನಲ್ಲಿ ರೂಂ ತೆಗೆದುಕೊಂಡು ವಾಸವಾಗಿದ್ದೇನೆ. ಅಲ್ಲಿಗೆ ಬರುವುದಾದರೂ ಬನ್ನಿರಿ. ಅಥವಾ ಸ್ಟೇಷನ್ನಿಗೆ ಬೇಕಾದರೂ ಹೋಗೋಣ...."

ಸ್ಟೇಷನ್ನಿಗೇ ಹೋಗಿ ಮಾತನಾಡುವುದು ಸೂಕ್ತವೆಂದು ಸಾಹೇಬರಿಗೆ ತೋರಿತು ಅವರು ಹಾಗೆಯೇ ಹೇಳಿದರು.

ವಹಿದೆಯು ಟ್ಯಾಕ್ಸಿಯವನನ್ನು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಬಿಡುವಂತೆ ಹೇಳಿದಳು.

ಹೋಗಿ ಸ್ಟೇಷನ್ನಿನಲ್ಲಿ ಕುಳಿತುಕೊಂಡ ಮೇಲೆ ಸಾಹೇಬರು "ವಹಿದಾ ಬೇಗಂ. ಈಗ ವಿಷಯ ಹೇಳಬಹುದಲ್ಲವೇ . . . " ಎಂದರು.

"ಓಹೋ ! ಹೇಳುವುದಕ್ಕಾಗಿಯೇ ಬಂದಿದ್ದೇನೆ. ಈಗಿನ ಕಾಲದಲ್ಲಿ ನೋಡಿ, ಯಾರನ್ನೂ ನಂಬುವುದಕ್ಕಿಲ್ಲ. ನಾನು ಟ್ಯಾಕ್ಸಿಯಲ್ಲಿ ಮಾತನಾಡಿದ್ದರೆ ಆ ಡ್ರೈವರು ಹಣದಾಸೆಯಿಂದ ಈ ವಿಷಯವನ್ನು ಬೇರೆ ಯಾರಿಗಾದರೂ ಹೇಳಿ ಅನಾಹುತವಾದೀತು ಎಂದು ದಿಗಿಲಾಯಿತು. ಆದರಿಂದ ಅಲ್ಲಿ ಮಾತನಾಡಲಿಲ್ಲ ಅಷ್ಟೇ. ಇಸ್ಮಾಯಿಲ್ ಈ ದಿನ ಮಧ್ಯಾಹ್ನ ರಾಜ

ರತ್ನಂ ಶೆಟ್ಟರ ಅಂಗಡಿಗೆ ಹೋಗಿ ವಜ್ರದ ಹರಳೊಂದನ್ನು ಅಪಹರಿಸಿಕೊಂಡು ಬಂದಿದ್ದಾನೆ . . . "

"ನೀವು ಹೇಳಿದಂತೆಯೇ ಆಯಿತಲ್ಲ . . . "

"ಹೌದು ಇನ್‌ಸ್ಪೆಕ್ಟರ್ ಸಾಹೇಬರೇ. ಅದರಲ್ಲಿ ಸಂದೇಹವೇ ಇಲ್ಲ. ಅವನು ಈ ಊರಿಗೆ ಬಂದಾಗಲೇ ಇಂತಹದೇನೋ ನಡೆಯುತ್ತದೆಂದು ನಾನು ಅಂದುಕೊಂಡಿದ್ದೆ . . . "

"ಅನ್ಯಥಾ ಭಾವಿಸಬೇಡಿ. ಬೇಗಂ ಸಾಹೇಬ. ಇಸ್ಮಾಯಿಲ್ ಇಂತಹ ಕೆಲಸ ಮಾಡಿದನೆಂಬುದು ನಿಮಗೆ ಗೊತ್ತಾದುದು ಹೇಗೆ ?

"ಗೊತ್ತಾಗಿದೆ ಎಂದರೆ ಒಂದು ವಿಧವಾಗಿ ಗೊತ್ತುಮಾಡಿಕೊಂಡಿದ್ದೇನೆ. ನಾನು ನಿನ್ನೆಯ ದಿನ ಸಂಜೆಯಿಂದಲೂ ಇಸ್ಮಾಯಿಲ್‌ನ ಮೇಲೆ ಕಣ್ಣಿನಲ್ಲಿ ಕಣ್ಣಿಟ್ಟು ಕಾಯುತ್ತಿದ್ದೇನೆ. ಈ ದಿನ ಮದ್ಯಾಹ್ನ ಅವನು ರಾಜರತ್ನಂ ಶೆಟ್ಟರ ಅಂಗಡಿಯ ಬಳಿ ಸುಳಿದಾಡುತ್ತಿದ್ದುದನ್ನೂ ಅನಂತರ ಅವರ ಅಂಗಡಿಯ ಒಳಗೆ ಹೋಗಿ ಸ್ವಲ್ಪ ಹೊತ್ತು ಬಿಟ್ಟುಕೊಂಡು ಹೊರಗೆ ಬಂದುದನ್ನೂ ನೋಡಿದೆ. ಅನಂತರ ಅವನೊಂದು ವಜ್ರದ ಹರಳನ್ನು ಗುಲಾಬ್ ಚಂದ್ ಎಂಬುವ ಕುದುರೆ ಮಾಲೀಕರಿಗೆ ನಾಲ್ಕು ಸಾವಿರ ರೂಪಾಯಿಗಳಿಗೆ ಮಾರಿದ್ದಾನೆಂದು ಗೊತ್ತಾಯಿತು. ಅದರಿಂದ ಇಸ್ಮಾಯಿಲ್ ಆ ಶೆಟ್ಟರ ಅಂಗಡಿಯಿಂದ ವಜ್ರ ಹರಳೊಂದನ್ನು ಹೊಡೆದುಕೊಂಡು ಬಂದಿದ್ದಾನೆಂದು ಊಹೆ ಮಾಡಿದೆ."

"ಸರಿಯಾಗಿದೆ. ಈಗ ಇಸ್ಮಾಯಿಲ್ ಎಲ್ಲಿದ್ದಾನೆ. . ."

"ಅವನು ಖಚಿತವಾಗಿ ಇಂತಹ ಕಡೆಯೇ ಇದ್ದಾನೆಂಬುದನ್ನು ಹೇಗೆ ಹೇಳಲಿ. ಆದರೆ ಅವನಿನ್ನೂ ಈ ಊರು ಬಿಟ್ಟು ಹೋಗಿದ್ದಾನೆಂದು ಹೇಳಲಾರೆ. . ."

"ಆ ರಾಜರತ್ನಂ ಶೆಟ್ಟರ ಅಂಗಡಿ ಎಲ್ಲಿದೆ. . .?"

"ಅವೆನ್ಯೂ ರಸ್ತೆಯಲ್ಲಿದೆ. ಅವರೊಬ್ಬ ರತ್ನಪಡಿ ವ್ಯಾಪಾರಿಗಳು. . ."

ಇಬ್ರಾಹಿಂ ಸಾಹೇಬರು ಟೆಲಿಫೋನ್ ಡೈರೆಕ್ಟರಿಯನ್ನು ತೆಗೆದುಕೊಂಡು ರಾಜರತ್ನಂ ಶೆಟ್ಟರಿಗೆ ಟೆಲಿಫೋನ್ ಇದೆಯೇ ಎಂಬುದನ್ನು ನೋಡಿದರು. ಅವ

ರಿಗೆ ಫೋನಾಯಿತ್ತು. ಅವರ ನಂಬರಿಗೆ ರಿಂಗ್ ಮಾಡಿ ಶೆಟ್ಟರಿಗಾಗಿ ಕೇಳಿದರು. ಆತ ಅಂಗಡಿಯಲ್ಲಿಯೇ ಇದ್ದರು.

"ನಾನು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇಬ್ರಾಹಿಂ ಸಾಬ್ ಮಾತನಾಡುವುದು. ನೀವು ರಾಜರತ್ನಂ ಶೆಟ್ಟರು ತಾನೇ. . ."

ರಾಜರತ್ನಂ ಶೆಟ್ಟರು ಯಾವ ಅಪರಾಧವನ್ನು ಮಾಡದಿದ್ದರೂ ಜಂಘಾಬಲವೇ ಹೋದವರಂತಾಗಿ "ಹೌದು – ಸಾರ್. ನಾನೇ ತಮಗೇನಾಗಬೇಕಾಗಿದೆ ?" ಎಂದರು.

"ನಿಮ್ಮ ಅಂಗಡಿಯಲ್ಲಿ ಈ ದಿನ ಏನಾದರೂ ಕಳ್ಳತನವಾಯಿತೇ ?"

"ಇಲ್ಲವಲ್ಲ. ಅಂಥಹದೇನಾದದರೂ ಇದ್ದರೆ ನಾನೇ..."

ಇಬ್ರಾಹಿಂ ಸಾಹೇಬರು ತಟ್ಟನೆ ವಹಿದೆಯ ಕಡೆ ನೋಡಿದರು. ಸಾಹೇಬರು ಯಾಕೆ ನೋಡುತ್ತಾರೆಯೋ ಎಂದು ಉತ್ಸುಕತೆಯಿಂದ ಅವಳೂ ಅವರ ಕಡೆಗೆ ನೋಡಿದಳು. ಆದರೆ ಅಷ್ಟರಲ್ಲಿಯೇ ಸಾಹೇಬರು ಏನೋ ತೋಚಿಕೊಂಡು ಕೇಳಿದರು.

"ಹೋಗಲಿ. ಯಾರಾದರೂ ಅಪರಿಚಿತ ವ್ಯಕ್ತಿಯು ನಿಮ್ಮ ಅಂಗಡಿಗೆ ಈ ದಿನ ಬಂದಿದ್ದನೇನು ?"

ಅದಕ್ಕೆ ಉತ್ತರ ಕೊಡಲು ಶೆಟ್ಟರಿಗೆ ಕಷ್ಟವಾಯಿತು.

"ಅದನ್ನು ಹೇಗೆ ಹೇಳಲಿ ಸಾರ್. ಅಂಗಡಿ ಎಂದ ಮೇಲೆ ಪರಿಚಿತರೂ ಬರುತ್ತಾರೆ. ಅಪರಿಚಿತರೂ ಬರುತ್ತಾರೆ..."

"ಇಸ್ಮಾಯಿಲ್ ಎಂಬಾತ ಈ ದಿನ ಮಧ್ಯಾಹ್ನ ನಿಮ್ಮ ಅಂಗಡಿಗೆ ಬಂದಿದ್ದನೆಂದು ನಮಗೆ ವರದಿಯಾಗಿದೆ. ಅದೇ ಮನುಷ್ಯ ಈ ದಿನ ಸಂಜೆ ಯಾವುದೋ ವಜ್ರದ ಹರಳನ್ನು ಸಾವಿರಾರು ರೂಪಾಯಿಗಳಿಗೆ ವ್ಯಾಪಾರ ಮಾಡುತ್ತಿದ್ದ. ವ್ಯಾಪಾರ ಮಾಡುತ್ತಿದ್ದನೇನು – ಮಾರಿಯೇ ಬಿಟ್ಟ. ಅದರಲ್ಲಿ ನಿಮಗೇನಾದರೂ ಮೋಸವಾಗಿದೆಯೇನೋ ಎಂದು ಸಂದೇಹ ಬಂದು ಕೇಳುತ್ತಿದ್ದೇನೆ..."

"ತಾವು ಹೇಳುವುದು ಸರಿಯಾಗಿದೆ. ಈ ದಿನ ಮದ್ಯಾಹ್ನ ಹನ್ನೆರಡೂವರೆಯ ಸಮಯದಲ್ಲಿ ಒಬ್ಬಾತ ನಮ್ಮ ಅಂಗಡಿಗೆ ಬಂದಿದ್ದ. ಆತನ ಹೆಸರು ಇಸ್ಮಾಯಿಲ್ ಸೇಟ್ ಎಂದು. ಆತ ಐದು ಸಾವಿರ ರೂಪಾಯಿಗಳಿಗೆ ಚಕ್

ಕೊಟ್ಟು ನಮ್ಮಿಂದ ಒಂದು ವಜ್ರದ ಹರಳನ್ನು ತೆಗೆದುಕೊಂಡು ಹೋಗಿದ್ದಾರೆ..."

"ಸರಿ. ಸರಿ. ಆ ಚಕ್ಕನ್ನು ತೆಗೆದುಕೊಂಡು ಇಲ್ಲಿಗೆ ಬನ್ನಿ..."

"ಹಾಗಲ್ಲ, ಸಾರ್. ಏನಾಯಿತೆಂದರೆ...."

"ಅದನ್ನೆಲ್ಲಾ ನಿದಾನವಾಗಿ ಮಾತನಾಡಿಕೊಳ್ಳೋಣ. ಅವನು ಕೊಟ್ಟಿರುವ ಚೆಕ್ಕನ್ನು ತೆಗೆದುಕೊಂಡು ಕೂಡಲೇ ಇಲ್ಲಿಗೆ ಬನ್ನಿರಿ...."

ಶೆಟ್ಟರು ಆಗಲೆಂದು ಒಪ್ಪಿಕೊಂಡರು.

ಸಾಹೇಬರು ಟೆಲಿಫೋನ್ ಡಿಸ್‌ಕನೆಕ್ಟ್ ಮಾಡಿ ತಾವು ಮಾತನಾಡಿದ ವಿಷಯವೆಲ್ಲವನ್ನೂ ವಹಿದೆಗೆ ಹೇಳಿದರು.

"ಸರಿ. ಆ ಅಂಗಡಿಗೆ ಹೋಗಿ ಯಾವುದೋ ಸಣ್ಣ ವ್ಯಾಪಾರವನ್ನು ಮಾಡುವ ನೆಪದಿಂದ ಕುಳಿತುಕೊಂಡಿದ್ದು ವಜ್ರದ ಹರಳನ್ನು ಹೊಡೆದು ಕೊಂಡು ಬಂದಿದ್ದಾನೆಂದುಕೊಂಡೆ. ಅವನು ರಾಜಾರೋಷಾಗಿಯೇ ಚಕ್ ಕೊಟ್ಟು ತಂದಿದ್ದಾನೆ. ಆದರೆ ಅಪರಿಚಿತನಾದ ಈ ಆಸಾಮಿಯ ಚಕ್ ತೆಗೆದುಕೊಂಡು ರಾಜರತ್ನಂ ಶೆಟ್ಟರು ಅಂತಹ ಬೆಲೆಬಾಳುವ ವಜ್ರವನ್ನು ಹೊರಗೆ ಕೊಟ್ಟದ್ದು ಬಹಳ ಆಶ್ಚರ್ಯಕರವಾಗಿದೆ."

ಆ ವಿಷಯುವು ಸಾಹೇಬರಿಗೂ ಆಶ್ಚರ್ಯಕರವಾಗಿದ್ದಿತು.

ಅದೇ ಸಮಯಕ್ಕೆ ಸರಿಯಾಗಿ ರಾಜಶೇಖರಪ್ಪನೂ ಬಂದ. ಸಾಹೇಬರು ಸೂಕ್ಷ್ಮವಾಗಿ ಅವನಿಗೆಲ್ಲ ವಿಷಯಗಳನ್ನೂ ಹೇಳಿದರು ಚಹಾ ತರಿಸಿ ಮೂರು ಮಂದಿಯೂ ತೆಗೆದುಕೊಂಡರು.

ಮೂರೂ ಮಂದಿಯೂ ಇದೇ ವಿಷಯವನ್ನೂ ಮಾತನಾಡುತ್ತಾ ಕುಳಿತುಕೊಂಡಿರುವಂತೆಯೇ ಗಾಬರಿ ಗಾಬರಿಯಾಗಿ ರಾಜರತ್ನಂ ಶೆಟ್ಟರು ಬಂದರು.

ವಿಚಾರಿಸಿದಾಗ ಅವರು ಹೇಳಿದರು.

"ಮದ್ಯಾನ್ಹ ಹನ್ನೆರಡೂವರೆ ಗಂಟೆಯಿರಬಹುದು ಅಥವಾ ಹನ್ನೆರಡೂವರೆ ಗಂಟೆಗೆ ಇನ್ನೂ ಎರಡು ಮೂರು ನಿಮಿಷಗಳಿದ್ದವೋ ಏನೋ? ಇಸ್ಮಾಯಿಲ್ ಸೇಟ್ ಎಂಬ ವ್ಯಕ್ತಿಯೊಬ್ಬರು ನಮ್ಮ ಅಂಗಡಿಗೆ ಬಂದರು.

ವಜ್ರದ ಹರಳುಗಳು ಬೇಕಾಗಿವೆ ಎಂದು ಹೇಳಿದರು. ನಾನೇ ಅಂಗಡಿಯಲ್ಲಿದ್ದೆ. ಅನೇಕ ಕಲ್ಲುಗಳನ್ನು ತೆಗೆದು ತೋರಿಸಿದೆ. ಅವರು ಯಾವುದನ್ನೂ ಒಪ್ಪಲಿಲ್ಲ. ನನ್ನ ಹತ್ತಿರ ಅಪೂರ್ವವಾದುದೊಂದು ಹರಳಿದ್ದಿತು. ಅವರನ್ನು ಒಳಗೆ ಕರೆದುಕೊಂಡು ಹೋಗಿ ಕಬ್ಬಿಣದ ಪೆಟ್ಟಿಗೆಯಿಂದ ವಜ್ರದ ಹರಳನ್ನು ತೆಗೆದು ತೋರಿಸಿದೆ. ಆತನಿಗೆ ರತ್ನಗಳ ಯೋಗ್ಯತೆಯನ್ನು ಕಂಡು ಹಿಡಿಯುವ ಯೋಗ್ಯತೆಯಿದೆ ಎಂದು ಕಂಡುಬರುತ್ತದೆ. ಆ ಹರಳನ್ನು ನೋಡಿ, ಅದು ತನಗೆ ಬೇಕೆಂದು ಹೇಳಿ, ಬೆಲೆಯನ್ನು ವಿಚಾರಿಸಿದರು. ಐದು ಸಾವಿರ ರೂಪಾಯಿ ಬೆಲೆ ಹೇಳಿದೆ. ಬೆಲೆ ಸ್ವಲ್ಪ ಹೆಚ್ಚೆಂದು ಹೇಳಿದರು. ಅದಕ್ಕೆ ನಾನು "ಇದಕ್ಕೆ ಸರಿಯಾಗಿ ಸಾಣೆ ಹಿಡಿಸಿದರೆ ಇನ್ನೂ ವಿಪರೀತ ಬೆಲೆಯಾಗುತ್ತದೆ. ಅದರಿಂದ ಹೆಚ್ಚೇನಿಲ್ಲ." ಎಂದು ಹೇಳಿದೆ. ಅವರು ಮರುಮಾತಾಡದೆ ಅದನ್ನು ಕಾಗದದ ಚೂರಿನಲ್ಲಿ ಕಟ್ಟಿ ಜೇಬಿಗೆ ಹಾಕಿಕೊಂಡು, ಐದು ಸಾವಿರ ರೂಪಾಯಿಗಳಿಗೆ ಚಕ್ ಬರೆದುಕೊಟ್ಟರು...."

ಇಬ್ರಾಹಿಂ ಸಾಹೇಬರು ಆತುರದಿಂದ "ಅಪರಿಚಿತನಾದ ಆತನ ಚಕ್ಕನ್ನು ಏಕಾಏಕೀ ಹೇಗೆ ತೆಗೆದುಕೊಂಡಿರಿ ?" ಎಂದರು.

"ಆತನು ಅಪರಿಚಿತನೂ ಅಲ್ಲ. ನಾನು ಏಕಾಏಕೀ ಚಕ್ ತೆಗೆದುಕೊಳ್ಳಲೂ ಇಲ್ಲ...."

ಬೆಸ್ತು ತಿಂದವರಂತೆ ಪೋಲೀಸ್ ಅಧಿಕಾರಿಗಳೂ, ವಹಿದೆಯೂ ಪರಸ್ಪರ ಮುಖಗಳನ್ನು ನೋಡಿಕೊಂಡರು. ರಾಜರತ್ನಂ ಶೆಟ್ಟರು ಮುಂದೆ ಹೇಳತೊಡಗಿದರು.

"ಇಸ್ಮಾಯಿಲ್ ಸೇಟ್ ಎಂಬುವವರು ನನಗೆ ಹೊಸಪರಿಚಯವಾದರೂ ಅಪರಿಚಿತರಲ್ಲ. ಬೆಂಗಳೂರಿನಲ್ಲಿ ಈ ಬಾರಿ ರೇಸಿಂಗ್ ಸೀರ್ಸ ಆರಂಭವಾದ ಮೇಲೆ ಎರಡು ಮೂರು ಸಲ ಬಂದಿದ್ದರು. ಒಂದು ಬಾರಿಯೋ ಏನೋ ತಾವು ವ್ಯಾಪಾರ ಮಾಡಿದರು. ಇನ್ನೆರಡು ಬಾರಿ ತಮ್ಮ ಸ್ನೇಹಿತರನ್ನು ಕರೆತಂದಿದ್ದರು. ಅವರೂ ಅವರ ಸ್ನೇಹಿತರೂ ಒಳ್ಳೆಯ ಶ್ರೀಮಂತರಂತೆ ಕಂಡು ಬಂದರು. ಹಾಗಲ್ಲದಿದ್ದರೆ ಚಕ್ಕನ್ನು ಅಲ್ಲಿಯೇ ಹಾಕಿ ನನ್ನ ವಜ್ರದ ಹರಳನ್ನು ವಾಪ್ಸು ತೆಗೆದುಕೊಳ್ಳುತ್ತಿದ್ದೆ. ಅಲ್ಲಿಗೂ ನಾನು ಬೇಹುಷಾರಾಗಲಿಲ್ಲ. "ಯಾವುದೋ ಗಿರಾಕಿ ಬಂದಿದೆ. ಒಂದು ನಿಮಿಷ ಹೊರಗೆ ಹೋಗಿ ಬರು

ತ್ತೀನೆ"ಂದು ಅವರನ್ನು ಅಲ್ಲಿಯೇ ಕೂರಿಸಿ ಹೊರಗೆ ಬಂದೆ. ಬ್ಯಾಂಕಿಗೆ ಫೋನ್ ಮಾಡಿದೆ. ನನ್ನ ಅಕೌಂಟ್ ಅಲ್ಲಿಯೇ ಇದೆ. ಅದರಿಂದ ಸಮಾಚಾರ ತಿಳಿದುಕೊಳ್ಳಲು ಕಷ್ಟವಾಗಲಿಲ್ಲ. "ಬುಕ್ಕಿ ಇಸ್ಮಾಯಿಲ್ ಸೇಟ್ ಎಂಬುವವರು ಐದು ಸಾವಿರ ರೂಪಾಯಿಗಳಿಗೆ ಒಂದು ಚೆಕ್ ಕೊಟ್ಟಿದ್ದಾರೆ. ಈಗ ಬ್ಯಾಂಕ್‌ಗೆ ಟೈಂ ಆಗಿರುವುದರಿಂದ ಚೆಕ್ ಕಳಿಸುವಂತಿಲ್ಲ. ಕ್ಯಾಷ್ ಆಗುತ್ತದೆಯೇ?" ಎಂದು ವಿಚಾರಿಸಿದೆ. ಬ್ಯಾಂಕ್‌ನವರು "ಇಸ್ಮಾಯಿಲ್ ಸೇಟ್ ಎಂಬುವವರಿಗೇನು? ಅವರ ಲೆಕ್ಕದಲ್ಲಿ ಲಕ್ಷಾಂತರ ರೂಪಾಯಿ ಇದೆ" ಎಂದು ಉತ್ತರ ಹೇಳಿದರು. ಅಲ್ಲಿಗೆ ನನಗೇನು ಹೆದರಿಕೆ? ಚೆಕ್ ತೆಗೆದಿಟ್ಟು ಕೊಂಡು ಅವರನ್ನು ಕಳಿಸಿಕೊಟ್ಟೆ."

ಇದನ್ನೆಲ್ಲಾ ಕೇಳುತ್ತಿದ್ದ ವಹಿದಾ ಪಕಪಕನೆ ನಗಲಾರಂಭಿಸಿದಳು.

ಅದನ್ನು ನೋಡಿದ ಶೆಟ್ಟರ ತಲೆಯಲ್ಲಿ ನೂರಾರು ರೇಸ್ ಕುದುರೆಗಳು ಒಮ್ಮೆಗೇ ಓಡಿದಂತೆ ಹಲವಾರು ಯೋಚನೆಗಳು ಬಂದವು. ಅವರಿಗೆ ಹೆದರಿಕೆಯಾದುದೇ ಅಲ್ಲದೇ ಕಕ್ಕಾಬಿಕ್ಕಿಯಾಯಿತು.

ಅವರು ವಿನಯವಾಗಿ "ಇನ್ಸ್‌ಪೆಕ್ಟರ್ ಸಾಹೇಬರೇ. ನನ್ನನ್ನು ಬಾ ಎಂದು ಹೇಳಿದ ಕಾರಣವೇನೋ ತಿಳಿಯಲಿಲ್ಲ." ಎಂದರು.

"ಹುಂ. ಇದೇ ವಿಷಯವನ್ನು ಮಾತನಾಡಲು ಕರೆದೆ. ಆ ಇಸ್ಮಾಯಿಲ್ ನಿಮ್ಮಿಂದ ಕೊಂಡುಕೊಂಡ ವಜ್ರದ ಹರಳನ್ನು ಈ ದಿನ ಸಾಯಂಕಾಲ ಮಾರುತ್ತಿದ್ದನೆಂದು ಸಮಾಚಾರ ಬಂದಿದೆ...."

ಶೆಟ್ಟರು ನಡುವೆ ಬಾಯಿಹಾಕಿ "ಅವರ ಒಡವೆ. ಅವರು ಬೇಕಾದ್ದು ಮಾಡಿಕೊಳ್ಳಬಹುದು." ಎಂದರು.

ಸಾಹೇಬರು "ಹಾಗೆ ಹೇಳುವುದಾದರೆ ನನ್ನ ಅಭ್ಯಂತರವೇನೂ ಇಲ್ಲ. ಆದರೆ ಆತ ಆ ವಜ್ರದ ಹರಳನ್ನು ನಾಲ್ಕು ಸಾವಿರ ರೂಪಾಯಿಗಳಿಗೆ ಮಾರಿದನಂತೆ." ಎಂದರು.

ರಾಜರತ್ನಂ ಶೆಟ್ಟರಿಗೆ ಆಗ ವಿಷಯ ಸ್ವಲ್ಪ ಚೋದ್ಯವಾಗಿ ಕಂಡಿತು. ಮಧ್ಯಾಹ್ನ ತಾನೇ ಐದು ಸಾವಿರ ರೂಪಾಯಿಗಳಿಗೆ ಕೊಂಡ ವಜ್ರವನ್ನು ಸಂಜೆಯ ವೇಳೆಗೆ ನಾಲ್ಕು ಸಾವಿರ ರೂಪಾಯಿಗಳಿಗೇಕೆ ಮಾರಿದನೆಂದು. ರೇಸ್‌ನ ಜನ ವಿಚಿತ್ರವಾದ ವ್ಯವಹಾರಗಳನ್ನು ಮಾಡುತ್ತಾರೆಂದು ಮನಸ್ಸಿಗೆ

ಸಮಾಧಾನವನ್ನು ತಂದುಕೊಳ್ಳಲು ಪ್ರಯತ್ನ ಮಾಡಿದರೂ ಅದು ಸೋಜಿಗ ವಾಗಿಯೇ ಕಂಡಿತು.

ರಾಜಶೇಖರಪ್ಪನಿಗೆ ಸಹ ವಿಷಯ ಅರ್ಥವಾಗಲಿಲ್ಲ ಈ ಹೆಂಗಸಿನ ಮಾತು ಕೇಳಿಕೊಂಡು ನಮ್ಮ ಸಾಹೇಬರು ಅವಳು ಹೇಳಿದಂತೆ ಕುಣಿಯು ತ್ತಿದ್ದಾರೆಯಲ್ಲಾ – ಎಂದುಕೊಂಡು ಹೇಳಿದ.

"ಕ್ಷಮಿಸಬೇಕು ಸಾರ್. ಇದರಲ್ಲಿ ಏನಿದೆಯೆಂಬುದು ನನಗೆ ಅರ್ಥ ವಾಗಿಲ್ಲ. ಇಸ್ಮಾಯಿಲ್ ಎಂಬಾತನು ಐದು ಸಾವಿರ ರೂಪಾಯಿಗಳಿಗೆ ಒಂದು ವಜ್ರವನ್ನು ತೆಗೆದುಕೊಂಡ. ಅದನ್ನು ಅದೇ ದಿನ ಸಾಯಂಕಾಲ ನಾಲ್ಕು ಸಾವಿರ ರೂಪಾಯಿಗಳಿಗೆ ಮಾರಿದ. ಆ ಮನುಷ್ಯ ಕುದುರೆ ಜೂಜಿನ ಖಯಾಲಿನವನು. ಆ ಖಯಾಲಿಯಿರುವವರು ಹಣ ಬೇಕಾಗಿದ್ದರೆ ತಮ್ಮ ಲ್ಲಿರುವ ಸಾಮಾನುಗಳನ್ನು ಅತ್ಯಂತ ಕಡಿಮೆ ಬೆಲೆಗೆ ಸಹ ಮಾರಿಬಿಡುತ್ತಾರೆ. ಇದರಲ್ಲಿ ಏನು ದೋಷವಿದೆ ?"

ಇಬ್ರಾಹಿಂ ಸಾಹೇಬರು ವರ್ಷಾಂತರಗಳಿಂದ ಪೋಲೀಸ್ ಉದ್ಯೋಗ ದಲ್ಲಿಯೇ ಪಳಗಿದವರು. ಸಣ್ಣ ಕೆಲಸದಿಂದ ಇನ್ಸ್ಪೆಕ್ಟರ್ ಹಂತಕ್ಕೇರಿ ದವರು. ಈ ಕೇಸಿನ ಜಾಡು ಏನು ಎಂಬುದು ಅಂಗೈ ಹುಣ್ಣಿನಂತೆ ಅವರಿಗೆ ಅರ್ಥವಾಗಿತ್ತು.

"ಏನು ದೋಷವಾಗಿದೆ ಎನ್ನುತ್ತೀರಾ, ರಾಜಶೇಖರಪ್ಪ ದೊಡ್ಡ ಧಗಾಬಾಜಿ ನಡೆದಿದೆ."

ರಾಜಶೇಖರಪ್ಪ ವಿಸ್ಮಯದಿಂದ ನೋಡತೊಡಗಿದ ಶೆಟ್ಟರ ಮುಖ ಭಯದಿಂದ ಬಿಳಿಚಿಕೊಂಡಿತು. ಶೆಟ್ಟರ ಮುಖದಲ್ಲಿ ಗಳಿಗೆ ಗಳಿಗೆಗೂ ಯಾಕೆ ಹೀಗೆ ಬಣ್ಣ ಬದಲಾಯಿಸಲ್ಪಡುತ್ತಿದೆ ಎಂಬುದು ಸಾಹೇಬರಿಗೆ ಅರ್ಥ ವಾಗಲಲ್ಲ.

ಮಹಿದೆಯು "ರಾಜರತ್ನಂ ಶೆಟ್ಟರು ಜಿಗೋನಾರ್ ಇಸ್ಮಾಯಿಲ್‌ನನ್ನು ಬುಕ್ಕಿ ಇಸ್ಮಾಯಿಲ್ ಸೇಟ್ ಎಂದುಕೊಂಡಿದ್ದಾರೆ. ಅಲ್ಲಿಯೇ ಈ ವ್ಯತ್ಯಾಸ ವೆಲ್ಲಾ ಬಂದಿರುವುದು. ಈ ಶೆಟ್ಟರನ್ನು ಮೋಸ ಮಾಡಲು ಇಸ್ಮಾಯಿಲ್ ಒಳ್ಳೆಯ ಒಲೆ ಹಾಕಿದ್ದಾನೆ. ಒಂದು ಸಲ ತಾನೇ ಹೋಗಿ ವ್ಯಾಪಾರ ಮಾಡಿದ್ದಾನೆ. ಇನ್ನೆರಡು ಬಾರಿ ತನ್ನ ಸ್ನೇಹಿತರನ್ನು ಕರೆದುಕೊಂಡು ಹೋಗಿ

ವ್ಯಾಪಾರ ಮಾಡಿಸಿದ್ದಾನೆ. ತಾನು ಶ್ರೀಮಂತನೆಂದೂ, ತನ್ನ ಹೆಸರು ಇಸ್ಮಾಯಿಲ್ ಸೇಟ್ ಎಂದೂ, ತಾನು ಬುಕ್ಕಿ ಎಂದೂ ಇವರು ನಂಬುವಂತೆ ಮಾಡಿದ್ದಾನೆ. ಇದಿಷ್ಟು ಪೂರ್ವ ಸಿದ್ಧತೆಗಳನ್ನು ಮಾಡಿಕೊಂಡು ಈ ದಿವ ಇವರ ಅಂಗಡಿಗೆ ಹೋಗಿದ್ದಾನೆ. ಉದ್ದೇಶಪೂರ್ವಕವಾಗಿಯೇ ಬ್ಯಾಂಕು ಮುಚ್ಚುವ ವೇಳೆಗೆ ಹೋಗಿದ್ದಾನೆ. ಇವರು ಬ್ಯಾಂಕಿನಲ್ಲಿ ವಿಚಾರಿಸಿದ್ದಾರೆ. ಅವರು ಹೇಳಿದುದು ನ್ಯಾಯವಾಗಿಯೇ ಇದೆ. ಇಸ್ಮಾಯಿಲ್ ಸೇಟ್ ಸರಿಯಾದ ಕುಳ. ಅದರಲ್ಲಿ ಸಂದೇಹವೇನು? ಹೀಗೆ ಬೆಲೆ ಬಾಳುದ ವಜ್ರದ ಹರಳನ್ನು ಇಟ್ಟುಕೊಂಡು ಇಸ್ಮಾಯಿಲ್ ಏನು ಮಾಡುತ್ತಾನೆ? ಅವನಿಗೇಕೆ ಅದು? ಸಾಯಂಕಾಲವಾಗುತ್ತಿದ್ದಂತೆಯೇ ಅದನ್ನು ನಾಲ್ಕು ಸಾವಿರ ರೂಪಾಯಿಗಳಿಗೆ ಮಾರಿ ಹಣವನ್ನು ಜೇಬಿಗೆ ಬಿಟ್ಟುಕೊಂಡ. ಬುಕ್ಕೀ ಇಸ್ಮಾಯಿಲ್ ಸೇಟ್ ಬೇರೇ. ಇಸ್ಮಾಯಿಲ್ ಬೇರೇ. ಬೇಕಾದರೆ ವಿಚಾಸಿಕೊಳ್ಳಿ ಇಸ್ಮಾಯಿಲ್ ಸೇಟ್ ನಾನಿರುವ ಪಿಂಕ್ಸ್ ಹೋಟಲಿನಲ್ಲಿಯೇ ಇಳಿದುಕೊಂಡಿದ್ದಾರೆ. ಇಸ್ಮಾಯಿಲ್ ವಸಂತ ವಿಹಾರದಲ್ಲಿ ಇದ್ದಾನೆ." ಎಂದಳು.

ಶೆಟ್ಟರ ತಲೆಯ ಮೇಲಿದ್ದ ದೊಡ್ಡದೊಂದು ಬಂಡೆಯು ಇಳಿದಂತಾದರೂ ಅವರು "ಅಯ್ಯೋ! ಹಾಗಾದರೆ ನಾನು ಮುಳುಗಿಹೋದೆ." ಎಂದರು.

"ಹೌದು. ಅದರಿಂದಲೇ ನಾನು ನಿಮ್ಮನ್ನು ಫೋನ್ ಮಾಡಿ ಕರೆಯಿಸಿದ್ದು. ಇಸ್ಮಾಯಿಲ್ ನಿಮಗೆ ಸುಳ್ಳು ಚೆಕ್ ಕೊಟ್ಟು ಮೋಸ ಮಾಡಿದ್ದಾನೆ."

ಆ ಮಾತು ಹೇಳಿ ಇಬ್ರಾಹಿಂ ಸಾಹೇಬರು ಸುಮ್ಮನೆ ಕುಳಿತುಕೊಂಡರು. ಶೆಟ್ಟರು ಏನಾದರೂ ಹೇಳಬಹುದೆಂದು ನಿರೀಕ್ಷಿಸಿದರು. ಅವರು ಏನೂ ಹೇಳದಿರಲು ಸಾಹೇಬರೇ ಹೇಳಿದರು

"ನೋಡಿ, ರಾಜರತ್ನಂ ಶೆಟ್ಟರೇ. ವಿಷಯ ಇಷ್ಟು. ಇದರ ಮೇಲೆ ನೀವೇನು ಮಾಡುತ್ತೀರೋ ಮಾಡಿರಿ."

"ನಾನೇನು ಮಾಡಲಾಗುತ್ತದೆ, ಸಾರ್. ನಂಬಿಸಿ ಮೋಸ ಮಾಡಿದ್ದಾನೆ. ದೊಡ್ಡ ಮನಸ್ಸು ಮಾಡಿ ನೀವು ನನ್ನ ಒಡವೆಯನ್ನು ಕೊಡಿಸಿಕೊಡಬೇಕು."

ಆ ಮಾತು ಶೆಟ್ಟರ ಬಾಯಿಂದ ಬರಬೇಕೆಂದೇ ಇಬ್ರಾಹಿಂ ಸಾಹೇಬರು ಕಾಯುತ್ತಿದ್ದರು.

ಅದು ಕಿವಿಗೆ ಬಿದ್ದದ್ದೇ ತಡ "ರಾಜಶೇಖರಪ್ಪ, ಶೆಟ್ಟರಿಂದ ಕಂಪ್ಲೈಂಟು ತೆಗೆದುಕೊಳ್ಳಿ." ಎಂದರು.

ರಾಜಶೇಖರಪ್ಪ ಕಾಗದ ತೆಗೆದು ಶೆಟ್ಟರು ಹೇಳಿದ್ದೆಲ್ಲವನ್ನೂ ಚಾಚೂ ತಪ್ಪದೇ ಬರೆದುಕೊಂಡ. ಅವರಿಗೆ ಓದಿ ಹೇಳಿದರು. ರಾಜರತ್ನಂ ಶೆಟ್ಟರು ಅದಕ್ಕೆ ರುಜು ಮಾಡಿದರು.

೪

ಇದಿಷ್ಟೂ ಆದನಂತರ ಇಬ್ರಾಹಿಂ ಸಾಹೇಬರು ಪಿಂಕ್ಸ್ ಹೋಟೆಲಿಗೆ ಫೋನ್ ಮಾಡಿ ಇಸ್ಮಾಯಿಲ್ ಸೇಟರ ವಿಷಯ ವಿಚಾರಿಸಿದರು.

ಅಲ್ಲಿಯ ಮ್ಯಾನೇಜರು "ಬೆಂಗಳೂರಿನ ರೇಸ್ ಸೀರ್ಸ್ ಆರಂಭವಾಗುತ್ತಿದ್ದಂತೆಯೇ ಇಸ್ಮಾಯಿಲ್ ಸೇಟ್ ಎಂಬುವವರು ಬಂದು ನಮ್ಮ ಹೋಟೆಲಿನಲ್ಲಿ ಇಳಿದುಕೊಂಡಿದ್ದಾರೆ. ನನಗೆ ತಿಳಿದಿರುವ ಮಟ್ಟಿಗೆ ಅವರು ಒಬ್ಬ ದೊಡ್ಡ ಬುಕ್ಕಿ." ಎಂದು ಹೇಳಿದರು.

ಅನಂತರ ಸಾಹೇಬರು ಸಿಟಿ ಬ್ಯಾಂಕಿಗೆ ರಿಂಗ್ ಮಾಡಿ "ಇಸ್ಮಾಯಿಲ್ ಸೇಟ್ ಎಂಬುವವರ ಅಕೌಂಟ್ ನಿಮ್ಮಲ್ಲಿದೆಯೇ ?" ಎಂದು ಕೇಳಿದರು.

ಫೋನ್ ಮಾಡಿದವರು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇನ್ಸ್ಪೆಕ್ಟರೆಂಬುದನ್ನು ಅರಿತ ಬ್ಯಾಂಕ್ ಮ್ಯಾನೇಜರು "ಸಾಧಾರಣವಾಗಿ ನಾವು ಒಬ್ಬರ ಅಕೌಂಟಿನ ವಿಷಯವನ್ನು ಮತ್ತೊಬ್ಬರೊಡನೆ ಹೇಳಬಾರದು. ಆದರೂ ನೀವು ಪೋಲೀಸಿನವರು ಕೇಳುವಾಗ ನಾನು ಹೇಳುವುದಕ್ಕೆ ಆಗುವುದಿಲ್ಲವೆಂದು ಹೇಳಲಾಗುವುದಿಲ್ಲ. ನೀವು ನಾಡಿದ್ದು ಬಂದರೆ ಎಲ್ಲಾ ವಿಷಯಗಳನ್ನೂ ಸಾವಧಾನವಾಗಿ ಮಾತನಾಡಬಹುದು." ಎಂದರು.

ಇನ್ಸ್ಪೆಕ್ಟರಿಗೆ ಕೋಪ ಬಂದಿತು. ಆದರೂ ಸಮಾಧಾನದಿಂದ "ಈಗ ವಿಷಯ ಬಹಳ ತುರುತಾಗಿದೆ. ಇಸ್ಮಾಯಿಲ್ ಸೇಟ್ ಎಂಬುವವರದೊಂದು

ಅಕೌಂಟ್ ನಿಮ್ಮಲ್ಲಿದೆ ಎಂದೂ, ಅಕೌಂಟ್‌ನಲ್ಲಿ ಬೇಕಾದಷ್ಟು ಹಣವಿದೆ ಎಂದೂ ನಾನು ಬಲ್ಲೆ. ಆದರೆಇಸ್ಮಾಯಿಲ್ ಸೇಟ್ ಎಂಬ ಹೆಸರಿನಲ್ಲಿ ಇನ್ನೊಂದುಅಕೌಂಟ್ ಇದೆಯೋ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ಮತ್ತೂ ಒಂದು ವಿಷಯವೇನೆಂದರೆ...." ಎಂದರು.

ಬ್ಯಾಂಕ್ ಮ್ಯಾನೇಜರು ಅತ್ಯಂತ ವಿನಯದಿಂದ "ತಾವು ಹೇಳುವುದು ಸರಿ. ಸಾಧ್ಯವಿದ್ದಿದ್ದರೆ ನಿಮ್ಮೊಡನೆ ಸಹಕರಿಸುವುದಕ್ಕೆ ನಾನು ಸಿದ್ಧವಾಗಿರುತ್ತಿದೆ. ಈ ದಿನ ಶನಿವಾರ. ನಮ್ಮ ಬ್ಯಾಂಕಿನ ಕೆಲಸ ಬೇಗ ಮುಗಿದು ಹೋಯಿತು. ಬ್ಯಾಂಕಿಗೆ ಬೀಗ ಹಾಕಿದೆ. ನಾನು ಮನೆಯಲ್ಲಿದ್ದೇನೆ. ತಾವು ಸೋಮವಾರ ದಯಮಾಡಿಸಿದರೆ ಏನು ಕೆಲಸವಿದ್ದರೂ ಮಾಡಿಕೊಡುತ್ತೇನೆ. ಈಗ ನಾವು ಬೀಗ ತೆಗೆದು ಎಲ್ಲವನ್ನೂ ನೋಡತೊಡಗಿದರೆ ನನಗೆ ಆಕ್ಷೇಪಣೆ ಬರಬಹುದು. ತಾವು ದಯಮಾಡಿ ಕ್ಷಮಿಸಬೇಕು. ಅನ್ಯಥಾ ಭಾವನೆ ಮಾಡಬಾರದು." ಎಂದು ಹೇಳಿದರು.

ಕಡೆಗೆ ಇಬ್ರಾಹಿಂ ಸಾಹೇಬರು ವಹಿದೆಯ ಕಡೆ ನೋಡಿ "ಈಗ ಇಸ್ಮಾಯಿಲ್ ಎಲ್ಲಿರಬಹುದೆಂದು ಹೇಳಬಲ್ಲಿರಾ ?" ಎಂದರು.

"ಐದು ಗಂಟೆಯ ಸಮಯದಲ್ಲಿ ಅವನು ವಸಂತ ವಿಹಾರ ಹೋಟಲಿನಲ್ಲಿದ್ದ. ಈಗ ಎಲ್ಲಿದ್ದಾನೆಂದು ಹೇಳಲಿ."

"ಸರಿ, ರಾಜಶೇಖರಪ್ಪ. ನೀವು ನಾಲ್ಕು ಮಂದಿ ಕಾನ್‌ಸ್ಟೇಬಲ್ಲುಗಳನ್ನು ಕರೆದುಕೊಂಡು ವಸಂತ ವಿಹಾರ ಹೋಟಲಿಗೆ ಹೋಗಿ. ಅಲ್ಲಿ ಹದಿನಾಲ್ಕನೆಯ ನಂಬರು ಕೋಣೆಯಲ್ಲಿ ಇಸ್ಮಾಯಿಲ್ ಇರುತ್ತಾನೆ. ಅವನನ್ನು ದಸ್ತಗಿರಿ ಮಾಡಿಕೊಂಡು ಬಾ. ಅವನು ಬಹಳ ಕದೀಮ. ಲೋಡ್ ಮಾಡಿದ ರಿವಾಲ್ವಾರ್ ತೆಗೆದುಕೊಂಡು ಹೋಗಿರಿ. ಜೀಪ್‌ನಲ್ಲಿ ಹೋಗಿ. ಒಂದು ವೇಳೆ ಅವನಲ್ಲಿರದಿದ್ದರೆ ಇಬ್ಬರು ಕಾನ್‌ಸ್ಟೇಬಲ್ಲುಗಳನ್ನು ಅಲ್ಲಿಯೇ ಬಿಟ್ಟು ಬನ್ನಿ. ಅನಂತರ ಅವನನ್ನು ಹೇಗೆ ಹಿಡಿಯಬೇಕೆಂಬುದನ್ನು ಯೋಚನೆ ಮಾಡೋಣ"

ರಾಜಶೇಖರಪ್ಪ ಹೊರಡುವುದರಲ್ಲಿದ್ದಾಗ "ಸಬ್ ಇನ್‌ಸ್ಪೆಕ್ಟರ್ ಸಾಹೇಬ

ರಿಗೆ ಇಸ್ಮಾಯಿಲ್ ಯಾರೆಂಬುದು ತಿಳಿಯುತ್ತದೆಯೇ?" ಎಂದು ವಹಿದೆ ಕೇಳಿದಳು.

"ಗೊತ್ತಾಗುತ್ತದೆ. ರಾಜಶೇಖರಪ್ಪನವರು ಅವನನ್ನು ನೋಡಿದ್ದಾರೆ."

ಜೀಪು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಆವರಣದಿಂದ ಹೊರಟ ಮೇಲೆ ಇಬ್ರಾಹಿಂ ಸಾಹೇಬರ ಮನಸ್ಸಿಗೆ ಸಮಾಧಾನವಾಯಿತು. ಆಗವರು ಹೇಳಿದರು.

"ವಹಿದಾ ಬೇಗಂ, ನಿನ್ನೆಯ ದಿನ ರಾತ್ರಿ ರಾಜಶೇಖರಪ್ಪ ವಸಂತ ವಿಹಾರ ಹೋಟಲಿಗೆ ಹೋಗಿ ಇಸ್ಮಾಯಿಲ್‌ನನ್ನು ನೋಡಿಕೊಂಡು ಬಂದರು.

"ಯಾರನ್ನೂ ಕಳಿಸಬಾರದೆಂದು ನಾನು ಹೇಳಿದರೂ ನೀವು ಕಳಿಸಿಯೇ ಕಳಿಸಿದಿರಿ."

ಸಾಹೇಬರು ಸಣ್ಣ ನಗುವನ್ನು ನಗುತ್ತಾ "ಜಿಗೋಮಾರ್ ಒಬ್ಬ ಬಂದಿದ್ದಾನೆಂದು ಗೊತ್ತಾದ ಮೇಲೆ ನಾವು ಅದನ್ನು ಗಮನಿಸದಿರುವುದು ಹೇಗೆ ಹೇಳಿ. ಅದರೂ ರಾಜಶೇಖರಪ್ಪ ಬಹಳ ಹುಷಾರಾಗಿ ಕೆಲಸಮಾಡಿಕೊಂಡು ಬಂದಿದ್ದಾರೆ. ಇವರು ಹೋಗಿದ್ದ ಸುಳಿವು ಇಸ್ಮಾಯಿಲ್‌ಗೆ ಸಹ ಸಿಕ್ಕಿಲ್ಲ. ಒಂದು ವೇಳೆ ರಾಜಶೇಖರಪ್ಪ ಹೋಗಿ ನೋಡಿಕೊಂಡು ಬರದಿದ್ದರೆ ಅವನು ಹದಿನಾಲ್ಕನೆಯ ನಂಬರು ರೂಮಿನಲ್ಲಿದ್ದಾನೆಂಬುದು ನನಗೆ ಹೇಗೆ ಗೊತ್ತಾಗುತ್ತಿದ್ದಿತು?" ಎಂದರು.

"ಅವನಿರುವ ರೂಂ ನಂಬರು ನಿಮ್ಮ ಬಾಯಿಂದ ಬರುತ್ತಲೇ ನೀವು ಯಾರನ್ನೋ ಕಳಿಸಿ ತಿಳಿದುಕೊಂಡಿದ್ದೀರಿ, ಅಥವಾ ನೀವೇ ಹೋಗಿ ತಿಳಿದು ಕೊಂಡು ಬಂದಿದ್ದೀರಿ ಎಂದು ಅರ್ಥಮಾಡಿಕೊಂಡೆ."

"ಆಯಿತಲ್ಲ. ಅದರಿಂದ ಏನೂ ಕೆಡುಕಾಗಲಿಲ್ಲ. ಅದು ಮುಖ್ಯ"

"ಹುಂ. ಆದರೆ ಇಸ್ಮಾಯಿಲ್ ನಿಮ್ಮ ಕೈಗೆ ಸಿಕ್ಕುವವರೆವಿಗೆ ನನ್ನ ಮನಸ್ಸಿಗೆ ಸಮಾಧಾನವಿಲ್ಲ."

ಸಾಹೇಬರು ವಿಜಯದ ನಗುವನ್ನು ನಕ್ಕು "ಬೇಗಂ ಸಾಬೇಬಾ, ನೀವು ಆ ವಿಷಯವನ್ನು ಯೋಚನೆ ಮಾಡಬೇಡಿರಿ. ಅವನು ನನ್ನ ಕೈಗೆ ಸಿಕ್ಕಿಬಿದ್ದಿದ್ದಾನೆಂದು ನಿಶ್ಚಿಂತರಾಗಿರಿ. ಅವನು ಹೋಟೆಲಿನಲ್ಲಿಲ್ಲದಿದ್ದರೆ ಏನು ಮಾಡಬೇಕು? ಯಾವುದಾದರೂ ಊರಿಗೆ ಪರಾರಿಯಾಗಬೇಕು. ಒಂದು ವೇಳೆ

ಅವನಾ ಹೋಟಲಿನಲ್ಲಿಲ್ಲವೆಂದು ರಾಜಶೇಖರಪ್ಪ ಬಂದು ಹೇಳಿದರೆ ರೈಲು ಗಳು, ಬಸ್ಸುಗಳ ಬಳಿಯಲ್ಲೆಲ್ಲಾ ಕಾವಲು ಹಾಕುತ್ತೇನೆ. ಯಾವುದಾದರೂ ಟ್ಯಾಕ್ಸಿಯಲ್ಲಿ ಹೋಗಿದ್ದರೆ ಸಿಕ್ಕಿದಂತೆಯೇ ಆಯಿತು. ಇನ್ನೆಲ್ಲಿ ಹೋಗ ಬೇಕು? ಇಲ್ಲಿಯೇ ಬೆಂಗಳೂರಿನಲ್ಲಿ ಅಡಗಿ ಕುಳಿತಿರಬೇಕು. ಜಾಲಿಸಿ ಹಿಡಿದುಕೊಂಡು ಬರುತ್ತೇನೆ. ಅವನ ಮೇಲೆ ಕಂಪ್ಲೈಂಟು ಇಲ್ಲದಾಗ, ಪ್ರತ್ಯಕ್ಷವಾದ ಸಾಕ್ಷ್ಯವಿಲ್ಲದಾಗ ಆ ಮಾತು ಬೇರೇ. ಇಂತಹ ಮೋಕಾ ಸಿಕ್ಕಿರುವಾಗ ಅವನನ್ನು ಹಿಡಿದು ಒಳಗೆ ಹಾಕದಿದ್ದರೆ ನನ್ನ ಹೆಸರು ಇಬ್ರಾಹಿಂ ಸಾಬ್ ಅಲ್ಲವೇ ಅಲ್ಲ." ಎಂದರು.

ಸ್ವಲ್ಪ ಹೊತ್ತು ಹಾಗೆಯೇ ಕಳೆಯಿತು. ಇಸ್ಮಾಯಿಲ್‌ನನ್ನು ದಸ್ತಗಿರಿ ಮಾಡಿಕೊಂಡು ಬರಲು ಹೋಗಿದ್ದ ರಾಜಶೇಖರಪ್ಪ ಇನ್ನೂ ಬಂದಿರಲಿಲ್ಲ. ಅವನು ವಸಂತ ವಿಹಾರಕ್ಕೆ ಹೋಗಿ ಅಲ್ಲಿಂದ ಬರುವ ಹೊತ್ತು ಇನ್ನೂ ಆಗಿರಲಿಲ್ಲ. ಆದರೂ ಸಾಹೇಬರ ಮನಸ್ಸು ತವಕಪಡುತ್ತಲೇ ಇತ್ತು.

ಈ ಪ್ರಸಂಗವನ್ನು ಅವರು ಮೊದಲಿನಿಂದಲೂ ಮೆಲುಕುಹಾಕತೊಡಗಿದರು. ವಹಿದೆಯ ಕಡೆಗೊಮ್ಮೆ ನೋಡಿದರು. ರಾಜರತ್ನಂ ಶೆಟ್ಟರ ಕಡೆಗೆ ನೋಡಿದರು. ಶೆಟ್ಟರ ಕಡೆಗೆ ನೋಡಿದಾಗ ಅವರ ಮನಸ್ಸಿನಲ್ಲಿ ಒಂದು ಆಲೋಚನೆಯು ಬಂದಿತು.

ರಾಜರತ್ನಂ ಶೆಟ್ಟರೊಂದಿಗೆ ಈ ವಿಷಯ ಪ್ರಸ್ತಾಪ ಮಾಡಿದಾಗ ಆತ ಭಯಪಟ್ಟಿದ್ದು ಸಾಹೇಬರ ಗಮನಕ್ಕೆ ಬಂದಿತ್ತು. ಅನಂತರ ಆತನಿಗೆ ಒಂದು ಬಗೆಯ ಧೈರ್ಯ ಬಂದಿದ್ದುದೂ ಇನ್ಸ್‌ಪೆಕ್ಟರವರ ಸೂಕ್ಷ್ಮ ದೃಷ್ಟಿಗೆ ಗೋಚರವಾಗಿತ್ತು. ಎಷ್ಟೇ ಐಶ್ವರ್ಯವಂತರಾದರೂ ಐದು ಸಾವಿರ ರೂಪಾಯಿಗಳು ನಷ್ಟವಾದ ಸಂದರ್ಭದಲ್ಲಿ ಕಂಗಾಲಾಗುವುದು ಸಹಜ. ಆದರೆ ಅಂತಹ ಸಮಯದಲ್ಲಿ ಅವನು ಹೆದರುವುದು ಮಾತ್ರ ಸಾಹೇಬರಿಗೆ ಅರ್ಥವಾಗಲಿಲ್ಲ.

ಇದರಿಂದ ಅವರ ಮನಸ್ಸಿಗೆ ಬಗೆಬಗೆಯಾದ ಸಂದೇಹಗಳು ತಲೆದೋರಿ ಕೇಳಿದರು.

"ಈ ವಜ್ರದ ಹರಳು ನಿಮ್ಮ ಬಳಿ ಬಂದುದು ಹೇಗೆ ಶೆಟ್ಟರೇ?"

ಶೆಟ್ಟರ ಮನಸ್ಸು ಮತ್ತೊಂದು ಬಾರಿ ಅಳುಕಿತು ಆದರೂ ಇಲ್ಲದ ಧೈರ್ಯ ತಂದುಕೊಂಡು ಅಂದರು.

"ಅದನ್ನು ಹೇಗೆ ಹೇಳುವುದಕ್ಕಾಗುತ್ತದೆ ಸ್ವಾಮಿ. ಅಂಗಡಿಯಿಟ್ಟು ವ್ಯಾಪಾರ ಮಾಡುತ್ತಿರುವಾಗ ಎಷ್ಟೋ ಒಡವೆಗಳು ಬರುತ್ತವೆ, ಎಷ್ಟೋ ಒಡವೆಗಳು ಹೋಗುತ್ತವೆ. ಪ್ರತಿಯೊಂದೂ ಎಲ್ಲಿಂದ ಬಂದಿತು, ಎಲ್ಲಿಗೆ ಹೋಯಿತು ಎಂದು ಲೆಕ್ಕವಿಡುವುದಕ್ಕೆ ಆಗುತ್ತದೆಯೇ ?"

"ಅದು ನಿಜ ಎನ್ನಿ. ಆದರೂ ಐದು ಸಾವಿರ ರೂಪಾಯಿ ಬೆಲೆ ಬಾಳು ವಂತಹ ವಜ್ರದ ಹರಳು ಎಲ್ಲಿಂದ ಬಂದಿತೆಂಬುದು ಸ್ವಲ್ಪ ಮಟ್ಟಿಗಾದರೂ ಜ್ಞಾಪಕವಿರುತ್ತದೆ ..."

ಶೆಟ್ಟರು ಅದಕ್ಕೇನೂ ಹೇಳಲಿಲ್ಲ.

ಯಾವುದೋ ಕಾರಣದಿಂದ ಈ ವ್ಯಾಪಾರಿ ಮಾತನಾಡಲು ಹಿಂತೆಗೆ ಯುತ್ತಿದ್ದಾನೆಂಬುದನ್ನು ಸಾಹೇಬರು ಗಮನಿಸಿ ಅದೇ ಪ್ರಸ್ತಾಪವನ್ನು ಬೇರೊಂದು ವಿಧವಾಗಿ ಮಾಡಿದರು.

"ನೋಡಿ, ಶೆಟ್ಟರೇ. ಪೋಲೀಸಿಗೆ ಕಂಪ್ಲೈಂಟು ಬಂದಮೇಲೆ ಅವನ ಬಳಿ ವಜ್ರವಿದೆಯೋ, ಅಥವಾ ಮತ್ತಾರ ಬಳಿ ಹೋಗಿದೆಯೋ ನಾವು ಬಿಟ್ಟು ಕೊಟ್ಟುಬರುವುದಕ್ಕಾಗುವುದಿಲ್ಲ. ಈ ಕೇಸು ಕೋರ್ಟಿಗೆ ಹೋಗಲೇ ಬೇಕಾ ಗುತ್ತದೆ. ಆಗ "ಆ ವಜ್ರ ನಿಮ್ಮದು. ಇಸ್ಮಾಯಿಲ್ ನಿಮ್ಮ ಅಂಗಡಿಗೆ ಬಂದು ಕೊಂಡುಕೊಂಡ." ಎಂಬುದನ್ನೂ ಸಾಬೀತು ಮಾಡಬೇಕಾಗು ತ್ತದೆ. ಅದರಿಂದ ಇಂದಲ್ಲ ನಾಳೆಯ ದಿನವಾದರೂ ನೀವು ಲೆಕ್ಕವನ್ನು ನೋಡಿಯೋ ಅಥವಾ ಹಾಗೆಯೇ ಜ್ಞಾಪಿಸಿಕೊಂಡೋ ಆ ವಜ್ರವನ್ನು ಯಾವಾಗ ತೆಗೆದುಕೊಂಡುದು, ಯಾರಿಂದ ತೆಗೆದುಕೊಂಡುದು ಮುಂತಾದ ವಿವರಗಳನ್ನು ನನಗೆ ತಿಳಿಸಬೇಕು."

"ಆಗಲಿ ಸ್ವಾಮಿ ಲೆಕ್ಕ ನೋಡಿ ಜ್ಞಾಪಕ ಮಾಡಿಕೊಳ್ಳಲು ಪ್ರಯತ್ನ ಪಡುತ್ತೇನೆ."

ಈ ವಜ್ರದ ವಿಷಯ ಹೇಳಲು ಈಗ ಯಾಕೆ ಸಂಕೋಚಿಸುತ್ತಿದ್ದಾ ನೆಂಬುದು ಸಾಹೇಬರಿಗೆ ಮತ್ತೂ ಆಶ್ಚರ್ಯವಾಯಿತು.

"ರಾಜರತ್ನಂ ಶೆಟ್ಟರೇ! ನಿಮ್ಮ ಅಂಗಡಿಯಲ್ಲಿ ಆ ವಜ್ರವಿರುವುದು ಇಸ್ಮಾಯಿಲ್‌ಗೆ ಗೊತ್ತಿದ್ದಿತಾದರೂ ನೀವು ಅದರ ವಿಷಯ ಜ್ಞಾಪಕವಿಲ್ಲವೆಂದು ಹೇಳುವುದು ಆಶ್ಚರ್ಯಕರವಾಗಿದೆ."

"ನಮ್ಮ ಅಂಗಡಿಯಲ್ಲಿ ಆ ವಜ್ರವಿರುವುದು ಆತನಿಗೆ ಗೊತ್ತಿರುವುದಕ್ಕೆ ಕಾರಣವೇನಿದೆ, ಸಾರ್. ಎಷ್ಟೋ ಹರಳುಗಳನ್ನು ತೋರಿಸಿದೆ. ಅದರಲ್ಲಿ ಆ ಹರಳನ್ನು ಆರಿಸಿಕೊಂಡ ಅದರಲ್ಲಿ ಏನು ಆಶ್ಚರ್ಯವಿದೆ ಎನ್ನುತ್ತೀರಿ?"

"ನೀವು ಮೊದಲು ಹೇಳಿದ ರೀತಿಯನ್ನು ನೆನೆಸಿಕೊಳ್ಳಿರಿ. ಹೊರಗೆ ಅಂಗಡಿಯಲ್ಲಿದ್ದ ಕಲ್ಲುಗಳನ್ನೆಲ್ಲಾ ತೋರಿಸಿದಿರಿ. ಅವನು ಅದೊಂದನ್ನೂ ಒಪ್ಪಲಿಲ್ಲ. ಅನಂತರ ಒಳಗೆ ಕರೆದುಕೊಂಡು ಹೋಗಿ ಕಬ್ಬಿಣದ ಪೆಟ್ಟಿಗೆಯಲ್ಲಿದ್ದ ಈ ಹರಳನ್ನು ತೋರಿಸಿದಿರಿ. ಕೂಡಲೇ ಅದನ್ನು ತೆಗೆದುಕೊಳ್ಳಲು ಒಪ್ಪಿದ ಎಂದು ಹೇಳಿದಿರಿ. ಅದರಿಂದ ಇಸ್ಮಾಯಿಲ್‌ಗೆ ಬೇಕಾಗಿದ್ದುದು ಇದೇ ಹರಳು. ಅದು ನಿಮ್ಮಂಗಡಿಯಲ್ಲಿರುವುದು ಅವನಿಗೆ ಗೊತ್ತಿದ್ದಿತು – ಎಂದು ಅರ್ಥವಾಗುವುದಿಲ್ಲವೇ?"

"ನಮಗೆ ಇಷ್ಟೆಲ್ಲಾ ತೋರುವುದಿಲ್ಲ ಸ್ವಾಮಿ. ನಾವು ವ್ಯಾಪಾರಗಾರರು. ಸರಕು ತೆಗೆದು ತೋರಿಸುತ್ತೇವೆ ಸರಕು ಒಪ್ಪಿ ಬೆಲೆ ಕುದುರಿದರೆ ಕೊಡುತ್ತೇವೆ, ಅಷ್ಟೇ."

ವಹಿದೆಯು ಆ ಮಾತುಗಳನ್ನು ಕೇಳಿ ನಗುತ್ತಾ ಸಾಹೇಬರ ಕಡೆಗೆ ನೋಡಿದಳು.

ಅವರು "ಯಾಕೆ ವಹಿದಾ ಬೇಗಂ. ಹಾಗೆ ನಗುತ್ತೀರಿ?" ಎಂದರು.

"ಶೆಟ್ಟರ ಬಳಿ ಈ ವಜ್ರದ ಹರಳು ಇದ್ದುದೂ, ಅದು ಅವರ ಅಂಗಡಿಗೆ ಬಂದ ತರಹವೂ ಊರಿಗೇ ಗೊತ್ತಿರುವ ವಿಷಯ. ಆದರೆ ಇಷ್ಟು ಬೇಗ ಈ ವಿಷಯ ಶೆಟ್ಟರಿಗೆ ಮರೆತುಹೋಗುವುದು ಸೋಜಿಗವಾಗಿದೆ."

ಪ್ರಸಂಗ ಸ್ವಾರಸ್ಯವಾಗುತ್ತಿದೆ ಎಂದುಕೊಂಡ ಇಬ್ರಾಹಿಂ ಸಾಹೇಬರು "ಅದೇನು ವಿಷಯ, ಸ್ವಲ್ಪ ಹೇಳಿರಿ, ಬೇಗಂ." ಎಂದರು.

ರಾಜರತ್ನಂ ಶೆಟ್ಟರು ಕಕ್ಕಾಬಿಕ್ಕಿಯಾಗಿ ನೋಡುತ್ತಿರಲು ವಹಿದಾ ಹೇಳಿದಳು.

"ರಾಜಾ ವೆಂಕಟರಾಂ ಎಂಬುವವನೊಬ್ಬನಿದ್ದಾನೆ. ಈತ ಮದರಾಸ್ ಕಡೆ ಯಾವುದೋ ಜಮೀನ್ದಾರಿಯ ರಾಜ. ಅವನಿಗೆ ವಿಪರೀತ ರೇಸ್ ಖಯಾಲಿ. ಪ್ರತಿಯೊಂದ ಸೀರ್ಸಗೂ ಬರುತ್ತಾನೆ. ಈ ಬಾರಿ ಬೆಂಗಳೂರಿಗೂ ಬಂದ. ಬಹಳ ಹಣವನ್ನು ತಂದಿದ್ದ. ದುರದೃಷ್ಟವಶಾತ್ ಅದಷ್ಟು ಹಣವೂ ಹೋಯಿತು. ಇಳಿದುಕೊಂಡಿದ್ದ ಹೋಟಲಿಗೆ ದುಡ್ಡು ಕೊಟ್ಟು ಊರಿಗೆ ಹೋಗುವುದೇ ಅವನಿಗೆ ಕಷ್ಟವಾಯಿತು. ಅವನ ಕೈಲೊಂದು ಉಂಗುರ ವಿತ್ತು. ಅದನ್ನು ಮಾರಲು ಪ್ರಯತ್ನ ಮಾಡಿದ. ಆ ಉಂಗುರದಲ್ಲಿದ್ದ ಚಿನ್ನಕ್ಕಿಂತಲೂ ಹರಳಿಗೇ ಬಹಳ ಬೆಲೆ. ಹಿಂದಿನ ಕಾಲದಲ್ಲಿ ಸಾಣೆ ಹಿಡಿದದ್ದು. ಮೂರು ನಾಲ್ಕು ಅಂಗಡಿಗಳಲ್ಲಿ ಅದನ್ನು ತೆಗೆದುಕೊಳ್ಳಲು ಹಿಂದೆ ಮುಂದೆ ನೋಡಿದರು. ಅದು ರಾಜರತ್ನಂ ಶೆಟ್ಟರ ಅಂಗಡಿಗೂ ಬಂದಿತು. ಇವರು ಧೈರ್ಯಮಾಡಿ ಎರಡು ಸಾವಿರ ರೂಪಾಯಿಗಳಿಗೆ ಕೊಂಡರು. ಆ ವಜ್ರದ ಹರಳು ಹೆಚ್ಚು ಬೆಲೆ ಬಾಳುವುದಿಲ್ಲವೆಂದಾಗಲೀ, ಅದರ ನಿಜವಾದ ಬೆಲೆಯು ರಾಜಾ ವೆಂಕಟರಾಂಗೆ ಗೊತ್ತಿರಲಿಲ್ಲವೆಂದಾಗಲೀ ಅದನ್ನವರು ಎರಡು ಸಾವಿರಕ್ಕೆ ಮಾರಲಿಲ್ಲ. ರೇಸ್‌ನಲ್ಲಿ ಬಹಳ ದುಡ್ಡು ಹೋದುದರಿಂದ ಮನಸ್ಸು ಮುರಿದಿತ್ತು. ಎರಡು ಮೂರು ಕಡೆ ವಿಚಾರಿಸಿ ವ್ಯಾಪಾರ ಕುದುರದೇ ಬೇಜಾರಾಗಿತ್ತು. ಹಣದ ತುರುತು ಬಹಳವಾಗಿತ್ತು. ಆದರಿಂದ ಅಷ್ಟಕ್ಕೆ ಕೊಟ್ಟರು. ಈ ವಿಷಯ ರೇಸ್ ಕೋರ್ಸ್‌ನಲ್ಲಿ ಎಲ್ಲರೂ ಮಾತನಾಡಿಕೊಳ್ಳುತ್ತಾರೆ.

ಸಾಹೇಬರು "ಇದು ನಿಜವೇ? ಶೆಟ್ಟರೇ." ಎಂದು ಕೇಳಿದರು.

ಯಾರೋ ಒಬ್ಬರು ರೇಸ್‌ನಲ್ಲಿ ಹಣ ಕಳೆದುಕೊಂಡವರು ಬಂದು ಒಂದು ಉಂಗರವನ್ನು ಮಾರಿದ್ದ ನೆನಪಿದೆ. ಆದರೆ ಈ ಹರಳು ಆ ಉಂಗರದ್ದೇ ಅಲ್ಲವೇ ಎಂಬುದನ್ನು ಈಗಲೇ ಖಚಿತವಾಗಿ ಹೇಳಲಾರೆ. ನೀವು ಹೇಳಿದಂತೆ ನಿದಾನವಾಗಿ ಕುಳಿತುಕೊಂಡು ಲೆಕ್ಕ ನೋಡಿದರೆ ಗೊತ್ತಾಗುತ್ತದೆ."

ಇನ್ಸ್ಪೆಕ್ಟರು ನಗುತ್ತಾ "ನೋಡಿ, ನೋಡಿ. ಲೆಕ್ಕ ನೋಡಿ ಜ್ಞಾಪಿಸಿಕೊಳ್ಳಿ." ಎಂದರು.

ಅರ್ಧಗಂಟೆಯೊಳಗಾಗಿ ರಾಜಶೇಖರಪ್ಪ ಪುನಃ ಸ್ಟೇಷನ್ನಿಗೆ ವಾಪ್ಸ

ಬಂದ. ಬರುತ್ತಾ ಅತ್ಯಂತ ಗೌರವಾಸ್ಪದನಂತೆ ಕಂಡುಬರುತ್ತಿದ್ದ ವ್ಯಕ್ತಿಯೊಬ್ಬನನ್ನು ಹಿಡಿದುಕೊಂಡು ಬಂದ.

ಹಿಡಿದುಕೊಂಡು ಬರಲ್ಪಟ್ಟವನು ಇಸ್ಮಾಯಿಲ್ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇನ್ಸ್ಪೆಕ್ಟರ ಕೋಣೆಯಲ್ಲಿ ಕುಳಿತಿದ್ದ ಪಹಿದಾಳನ್ನು ಕಾಣುತ್ತಲೇ ಅವನ ಹುಬ್ಬುಗಳು ಗಂಟಾದವು. ಮುಖದಲ್ಲಿ ಕ್ರೋಧವು ಉಮ್ಮಳಿಸಿ ಬಂದಿತು. ಅವಳನ್ನು ದುರದುರನೆ ನೋಡಿದನು.

ಇದು ಕೇವಲ ಒಂದು ಕ್ಷಣ ಮಾತ್ರ. ಮರುಕ್ಷಣದಲ್ಲಿಯೇ ಅದನು ಸರಿತಡಿಸಿಕೊಂಡ. ಗೌರವಾಸ್ಪದವಾಗಿ ಕಂಡುಬರುತ್ತಿದ್ದಂತೆಯೇ ಗಂಭೀರವಾದ ಧ್ವನಿಯಿಂದ ಇಬ್ರಾಹಿಂ ಸಾಹೇಬರನ್ನು ಉದ್ದೇಶಿಸಿ ಕೇಳಿದ.

"ನನ್ನನ್ನು ಇಲ್ಲಿಗೆ ಕರೆಕಳುಹಿಸಿದ ಕಾರಣವೇನು ಹಜರತ್."

ಅವನನ್ನು ನೋಡುತ್ತಲೇ ಇಬ್ರಾಹಿಂ ಸಾಹೇಬರಿಗೆ ಕೋಪವು ಬಂದಿತ್ತು. ಈಗ ಅವನ ವಿನಯ ಭಾಷಣವನ್ನು ಕೇಳಿ ಅದು ಮತ್ತಷ್ಟು ಹೆಚ್ಚಾಯಿತು

"ನಿನ್ನನ್ನು ಕರೆಕಳುಹಿಸಲಿಲ್ಲ, ಇಸ್ಮಾಯಿಲ್. ಹಿಡಿತರಿಸಿದ್ದೇನೆ."

ಅವನು ನಸುನಗುತ್ತಾ "ಹೇಗಾದರೂ ಇಟ್ಟುಕೊಳ್ಳಿರಿ. ನೀವು ನನ್ನನ್ನು ಇಲ್ಲಿಗೆ ಬರಮಾಡಿದ ಕಾರಣವೇನು ?" ಎಂದ.

"ಈ ದಿನ ಮಧ್ಯಾನ್ಹ ನೀನು ಈ ರಾಜರತ್ನಂ ಶೆಟ್ಟರ ಅಂಗಡಿಯಿಂದ ವಜ್ರದ ಹರಳೊಂದನ್ನು ಹೊಡೆದುಕೊಂಡು ಬಂದೆ. ಆ ಅಪರಾಧಕ್ಕಾಗಿ ನಿನ್ನನ್ನು ದಸ್ತಗಿರಿ ಮಾಡಲಾಗಿದೆ."

"ಇದರಲ್ಲಿ ಅಪರಾಧವೇನು ಬಂದಿತು, ಹಜರತ್. ವ್ಯಾಪಾರ. ವಜ್ರದ ಹರಳನ್ನು ನೋಡಿದೆ. ಮನಸ್ಸಿಗೊಪ್ಪಿತು. ಇವರು ಹೇಳಿದ ಬೆಲೆಯನ್ನು ಕೊಟ್ಟು ತೆಗೆದುಕೊಂಡು ಬಂದೆ."

"ಅಲ್ಲಿಯೇ ವ್ಯತ್ಯಾಸವಾಗಿರುವುದು. ನೀನು ಹಣ ಕೊಟ್ಟು ತಂದಿದ್ದರೆ ನಾನು ನಿನ್ನನ್ನಿಲ್ಲಿಗೆ ಕರೆಯಿಸಬೇಕಾದ ಕಾರಣವೇ ಇರಲಿಲ್ಲ. ನೀನು ಸುಳ್ಳು ಚಕ್ ಕೊಟ್ಟು ಕೊಟ್ಟು ವಜ್ರವನ್ನು ಹೊಡೆದುಕೊಂಡು ಬಂದಿದ್ದೀಯೆ ?"

"ಬ್ಯಾಂಕಿನಲ್ಲಿ ನನ್ನ ಅಕೌಂಟ್ ಇಲ್ಲದಿದ್ದರಾಗಲೀ ಅಥವಾ ನಾನು

ಕೊಟ್ಟಿರುವ ಚೆಕ್‌ಗೆ ಸಾಕಷ್ಟು ಹಣ ಬ್ಯಾಂಕಿನಲ್ಲಿ ಇಲ್ಲದಿದ್ದರಾಗಲೀ ನನ್ನ ಮೇಲೆ ಆಕ್ಷೇಪಣೆ ಮಾಡಬಹುದು. ಅದೊಂದೂ ಇಲ್ಲದೇ...."

"ಇಸ್ಮಾಯಿಲ್, ನಿನ್ನ ವಿಷಯ ನನಗೆ ಗೊತ್ತಿಲ್ಲವೆಂದುಕೊಂಡು ಮಾತನಾಡುತ್ತಿದ್ದೀಯೇನು? ಬ್ಯಾಂಕಿಗೆ ಹೋಗಿ ನಿನ್ನ ಅಕೌಂಟ್ ಇದೆಯೋ ಇಲ್ಲವೋ, ಹಣ ಇದೆಯೋ ಇಲ್ಲವೋ ನೋಡುವುದಕ್ಕೆ ಅವಕಾಶವಿಲ್ಲದಂತೆ ಬ್ಯಾಂಕ್ ಮುಚ್ಚುವ ಸಮಯಕ್ಕೆ ಸರಿಯಾಗಿ ಶೆಟ್ಟರ ಅಂಗಡಿಗೆ ಹೋಗಿದ್ದೀಯೇ? ಪುನಃ ಬ್ಯಾಂಕು ತೆಗೆದು ಅವರದನ್ನು ವಿಚಾರಿಸಿ ತೆಗೆದುಕೊಳ್ಳುವುದರೊಳಗಾಗಿ ಊರು ಬಿಟ್ಟು ನಿಕರಾಯಿಸಿಬಿಡುತ್ತಿದ್ದೆ."

ಅವನು ಏನೋ ಹೇಳಲು ಹೊರಟಿದ್ದ. ಅಷ್ಟರಲ್ಲಿ ರಾಜಶೇಖರಪ್ಪ ಹೇಳಿದ.

"ನಾನು ವಸಂತ ವಿಹಾರ ಹೋಟಲಿಗೆ ಹೋಗುವ ವೇಳೆಗೆ ಈ ಇಸ್ಮಾಯಿಲ್ ಟ್ಯಾಕ್ಸೀ ತರಿಸಿಕೊಂಡಿದ್ದ. ಹೋಟಲಿನ ಬಿಲ್ ಚುಕ್ತಾ ಮಾಡಿದ್ದ. ಇವನು ಸಾಮಾನುಗಳನ್ನೆಲ್ಲಾ ಕಟ್ಟುವ ವೇಳೆಗೆ ಸರಿಯಾಗಿ ನಾನು ಹೋದೆ.

"ನೋಡಿದೆಯೋ ನಿನ್ನ ಯೋಗ್ಯತೆ. . ."

ಇಸ್ಮಾಯಿಲ್‌ಗೆ ಸಹ ಸಹನೆ ಮೀರಿರಬೇಕು

ಅವನು ಅಸಮಾಧಾನಯುಕ್ತವಾದ ಧ್ವನಿಯಿಂದ "ನೀವುಗಳಿಬ್ಬರೂ ಜವಾಬ್ದಾರೀಯುತರಾದ ಪೋಲೀಸ್ ಅಧಿಕಾರಿಗಳು. ಒಬ್ಬ ಸ್ವತಂತ್ರ ನಾಗರಿಕನ ಮೇಲೆ ಇಂತಹ ಬೇಜವಾಬ್ದಾರೀಯುತರಾದ ಆರೋಪಣೆಗಳನ್ನು ಮಾಡುವುದು ಸರಿಯಾಗಿ ಕಂಡುಬರ್‌ವುದಿಲ್ಲ. ನಾನು ರಾಜರತ್ನಂ ಶೆಟ್ಟರಿಗೆ ಕೊಟ್ಟಿರುವ ಚೆಕ್ ಡಿಸಾನರ್ ಆಗುವವರೆವಿಗೆ ನಿಮಗಾರಿಗೇ ಆಗಲೀ ನನ್ನನ್ನು ಮಾತನಾಡಿಸುವ ಅಧಿಕಾರವಿಲ್ಲ," ಎಂದ.

ಇಬ್ರಾಹಿಂ ಸಾಹೇಬರೇ ಕೋಪದಿಂದ "ಬದ್ಮಾಷ್, ಬಾಯಿ ಮುಚ್ಚು. ಏಷ್ಟು ಮಾತುಗಳನ್ನಾಡುತ್ತೀಯೆ? ಬೇಜವಾಬ್ದಾರಿಯಂತೆ, ಅಧಿಕಾರವಿಲ್ಲವಂತೆ. ಯಾರೆದುರಿಗೆ ನಿಂತು ಮಾತನಾಡುತ್ತಿದ್ದೀ ಎಂಬ ಪರಿಜ್ಞಾನವಿದೆಯೋ ಇಲ್ಲವೋ? ನೀನು ನ್ಯಾಯವಾದ ಮನುಷ್ಯನಾಗಿದ್ದಿದ್ದರೆ ಈ ದಿನ ಮಧ್ಯಾಹ್ನ ಐದು ಸಾವಿರ ರೂಪಾಯಿಗಳಿಗೆ ಕೊಂಡುಕೊಂಡ ವಜ್ರದ ಹರಳನ್ನು ಸಾಯಂಕಾಲ ನಾಲ್ಕು ಸಾವಿರಗಳಿಗೇಕೆ ಮಾರಿದೆ?" ಎಂದರು.

ಆ ಮಾತು ಕೇಳಿದ ಇಸ್ಮಾಯಿಲ್ ಉಳುಕಿಬಿದ್ದು, ಕಣ್ಣುಗಳಿಂದಲೇ ಸುಟ್ಟುಬಿಡುವಂತೆ ವಹಿದೆಯ ಕಡೆ ನೋಡಿದ.

"ನನ್ನ ಒಡವೆಯನ್ನು ನಾನು ಏನುಬೇಕಾದರೂ ಮಾಡಿಕೊಳ್ಳುತ್ತೇನೆ? ಅದಕ್ಕೆ ಅಡ್ಡಿಯೇನಿದೆ?"

"ನಿನ್ನ ಒಡವೆ. ಶೆಟ್ಟರಿಗೆ ಅದರ ಹಣ ತಲುಪುವವರೆವಿಗೆ ಅದು ನಿನ್ನ ಒಡವೆ ಹೇಗಾಗುತ್ತದೆ."

ಇಸ್ಮಾಯಿಲ್ ಬೇಜಾರುಪಟ್ಟುಕೊಂಡು "ಸರಿ, ಹಜರತ್. ನಾನಿನ್ನು ಹೋಗುತ್ತೇನೆ. ಶೆಟ್ಟರ ಚಕ್ ಕ್ಯಾಷಾಗದಿದ್ದರೆ ಆಗ ಹೇಳಿಕಳಿಸಿ, ಬರುತ್ತೇನೆ. . ." ಎಂದ.

"ನೀನು ಪುನಃ ಬರುವುದೆಲ್ಲಿ? ನಿನ್ನನ್ನು ಲಾಕಪ್ಪಿನಲ್ಲಿ ಹಾಕುತ್ತೇನೆ."

"ಯಾವ ಅಪರಾಧಕ್ಕಾಗಿ. . .?"

"ಪರವ್ಯಕ್ತಿತ್ವಾರೋಪಣ ಮತ್ತು ವಂಚನೆಗಳಿಗಾಗಿ. . ."

ಇಸ್ಮಾಯಿಲ್ ಸುಮ್ಮನೆ ನಿಂತಿದ್ದ.

ಇಬ್ರಾಹಿಂ ಸಾಹೇಬರು "ಇಸ್ಮಾಯಿಲ್, ಈ ಸಂಬಂಧವಾಗಿ ನೀನು ಹೇಳಬೇಕಾದುದೇನಾದರೂ ಇದೆಯೋ. . . ?" ಎಂದರು.

ಅವನು ವಿನಯದಿಂದದಲೇ "ಇಲ್ಲ, ಹಜರತ್. ನಮ್ಮ ಲಾಯರೊಂದಿಗೆ ಮಾತನಾಡುವವರೆವಿಗೆ ನಾನು ಹೇಳಬೇಕಾದುದೇನೂ ಇಲ್ಲ." ಎಂದ.

ಸಾಹೇಬರು "ಲಾಯರು. ನಿನಗೆ ಅದೊಂದು ಕೇಡು." ಎಂದು ಹೇಳಿ ರಾಜರತ್ನಂ ಶೆಟ್ಟರ ಕಡೆಗೆ ತಿರುಗಿ "ಶೆಟ್ಟರೇ, ನೀವಿನ್ನು ಹೊರಡಬಹುದು. ತನಿಖೆ ಕ್ರಮಗಳನ್ನು ನಡೆಯಿಸಿ ಅನಂತರ ನಿಮಗೆ ಹೇಳಿಕಳಿಸುತ್ತೇನೆ." ಎಂದರು.

ಶೆಟ್ಟರು ಕೈಮುಗಿದುಕೊಂಡು "ಮಹಾಸ್ವಾಮಿ, ಎಷ್ಟಾದರೂ ರೇಸ್ ಜನದ ಸಹವಾಸ. ಯಾರನ್ನು ನಂಬುವುದು, ಯಾರನ್ನು ನಂಬದಿರುವುದು ಎಂದು ಹೇಳುವುದೇ ಕಷ್ಟವಾಗಿದೆ. ದಯಮಾಡಿ ತಾವು ಗುಲಾಬ್‌ಚಂದರ ಹತ್ತಿರ ಇರುವ ನನ್ನ ವಜ್ರದ ಹರಳನ್ನು ತರಿಸಿಬಿಟ್ಟರೆ ಮಹೋಪಕಾರವಾಗುತ್ತದೆ." ಎಂದರು.

ಇನ್ಸ್‌ಪೆಕ್ಟರು "ಅದೂ ನಿಜ, ರಾಜಶೇಖರಪ್ಪ. ಗುಲಾಬ್‌ಚಂದ್ ಪಿಂಕ್ಸ್‌ನಲ್ಲಿರುತ್ತಾನೆ. ಅಲ್ಲಿಗೆ ಹೋಗಿ ಆ ವಜ್ರದ ಹರಳು ಕಳ್ಳತನದ ಮಾಲೆಂದು ಕಂಪ್ಲೈಂಟ್ ಬಂದಿದೆ ಕೇಸ್ ಇತ್ಯರ್ಥವಾಗುವವರೆವಿಗೂ ಅದು ನಮ್ಮಲ್ಲಿ ಇರಬೇಕೆಂದು ಹೇಳಿ ತೆಗೆದುಕೊಂಡು ಬನ್ನಿ." ಎಂದರು.

ಇದಿಷ್ಟೂ ಹೇಳಿದನಂತರ ಪೆಚ್ಚುಮೋರೆ ಹಾಕಿ ನಿಂತುಕೊಂಡಿದ್ದ ಇಸ್ಮಾಯಿಲ್‌ನ ಕಡೆ ಅವರ ಗಮನವು ಹೋಯಿತು.

ದಫೇದಾರ್ ಕಾಳಯ್ಯನನ್ನು ಕರೆಯಿಸಿ ಇಸ್ಮಾಯಿಲ್‌ನನ್ನು ಕರೆದುಕೊಂಡು ಹೋಗಿ ಲಾಕಪ್ಪಿನಲ್ಲಿ ಹಾಕುವಂತೆ ಅಪ್ಪಣೆ ಮಾಡಿದರು.

ಅನಂತರ ನಸುನಗುವನ್ನು ಬೀರುತ್ತಾ ಸಾಹೇಬರು ವಹಿದಳ ಕಡೆಗೆ ನೋಡಿದರು. ಅವಳು ಹಸನ್ಮುಖಿಯಾಗಿದ್ದಳು.

೫

ಚಲಂನ ಆಫೀಸಿಗೆ ಬಂದ ಇಬ್ರಾಹಿಂ ಸಾಹೇಬರು "ಚಲಂ ಸ್ವಾಮಿ. ಈ ದಿನ ಒಂದು ಮಹತ್ಕಾರ್ಯವನ್ನು ಮಾಡಿದೆ." ಎಂದು ಹೇಳಿದರು.

ಇಬ್ರಾಹಿಂ ಸಾಹೇಬರು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಕ್ರೈಂ ಇನ್ಸ್‌ಪೆಕ್ಟರು. ಬೆಂಗಳೂರು ನಗರದಲ್ಲಿ ನಡೆಯುವ ಗುರುತರವಾದ ಅಪರಾಧಗಳ ತನಿಖೆ ಕ್ರಮ ಸಾಧಾರಣವಾಗಿ ಅವರ ಪಾಲಿಗೆ ಕಟ್ಟಿಟ್ಟಂತೆ ಇರುತ್ತಿದ್ದವು. ಇಲ್ಲವೇ ಅವರು ಗಮನಿಸಬೇಕಾಗಿಬರುತ್ತಿದ್ದಿತು. ಯಾವ ಕೆಲಸವೇ ಆಗಲಿ ಕರಾರುವಾಕ್ಕಾಗಿಯೇ ನಡೆಯಬೇಕು. ಇಲ್ಲದಿದ್ದರೆ ಅವರಿಗೆ ಅಸಮಾಧಾನವಾಗುತ್ತಿತ್ತು. ಆದರೆ ಕಾಲಧರ್ಮದಿಂದ ಕೆಲವು ಕೆಲಸಗಳು ವ್ಯತ್ಯಸ್ತವಾಗಿಯೇ ನಡೆಯುತ್ತಿದ್ದವು. ಬಹುಮಟ್ಟಿಗೆ ಸಾಹೇಬರು ಅಂತಹ ಸಂದರ್ಭಗಳಲ್ಲಿ ಸರಿಮಾಡಿಕೊಂಡು ಹೋಗುತ್ತಿದ್ದರು.

ಚಲಂ ಮತ್ತು ಇಬ್ರಾಹಿಂ ಸಾಹೇಬರ ಸಂಬಂಧವು ಇಂತಹ ಒಂದು ಸರಿಹೊಂದಿಸಿಕೊಂಡೇ ಹೋಗಬೇಕಾದ ವಿಷಯವಾಗಿತ್ತು. ಪತ್ತೇದಾರನೂ ಇನ್ಸ್‌ಪೆಕ್ಟರೂ ಕೆಲಸಮಾಡುವಂತಹ ಮಾರ್ಗಗಳು ಭಿನ್ನವಾಗಿದ್ದವು. ಆಗೆಲ್ಲಾ

ಅವರವರಿಗೆ ಪರಸ್ಪರ ಘರ್ಷಣೆಯು ಬರುತ್ತಿದ್ದಿತು. ಆದರೆ ಅವರವರು ಸಹ ಕರಿಸದೇ ಇರುವುದು ಸಾಧ್ಯವೇ ಇರಲಿಲ್ಲ. ಅದರಿಂದ ಸ್ನೇಹವಾಗಿಯೂ ಇರ ಬೇಕಾಗಿದ್ದಿತು.

ಇಷ್ಟಾದರೂ ಇಬ್ರಾಹಿಂ ಸಾಹೇಬರಿಗೆ ಚಲಂನ ಮೇಲೆ ಅಸಮಾಧಾನ ವಿದ್ದಿತು. ಅದಕ್ಕೆ ಸಾಹೇಬರ ವಿಚಿತ್ರವಾದ ಪ್ರವೃತ್ತಿಯೇ ಕಾರಣ.

ಇಬ್ರಾಹಿಂ ಸಾಹೇಬರು ಹಳೆಯ ಕಾಲದ ಮನುಷ್ಯರು. ಕಳ್ಳರು, ಅಪರಾಧಿಗಳು, ಕೊಲೆಗಾರರು ಎಂದರೆ ಅವರನ್ನು ಪತ್ತೇ ಹಚ್ಚಿ ಶಿಕ್ಷೆಗೆ ಗುರಿ ಪಡಿಸುವುದು ಪೋಲೀಸಿನವರ ಕೆಲಸವೆಂಬುದು ಅವರ ಭಾವನೆಯಾಗಿತ್ತು. ಒಂದು ಕೇಸನ್ನು ಒಬ್ಬ ಪೋಲೀಸ್ ಉದ್ಯೋಗಿಯು ತನಿಖೆ ಮಾಡುತ್ತಿದ್ದರೆ ಮತ್ತೊಬ್ಬ ಅದರಲ್ಲಿ ತಲೆಹಾಕುವುದು ಅವರಿಗೆ ಸರಿಬೀಳುತ್ತಿರಲಿಲ್ಲ. ಕೆಲಸ ಅರ್ಧಂಬರ್ಧ ಆಗಿರುವಾಗ ಮೇಲಧಿಕಾರಿಗಳು ಪ್ರವೇಶಮಾಡಿದರೂ ಸಾಹೇ ಬರು ಅಸಮಾಧಾನಪಟ್ಟುಕೊಳ್ಳುತ್ತಿದ್ದರು. ಅಂತಹ ಸಂದರ್ಭಗಳಲ್ಲವರು "ನಮ್ಮ ಇಂಡಿಯನ್ ಜನ ಇಂಗ್ಲಿಷ್‌ನವರ ದುರ್ಗುಣಗಳನ್ನು ಕಲಿತರೇ ವಿನಾ ಅವರ ಸದ್ಗುಣಗಳನ್ನು ಕಲಿಯಲಿಲ್ಲ. ಆ ಬಿಳಿಯ ಜನ ಎಂಥವರೆಂದು ಹೇಳಲಿ. ಪೋಲೀಸ್ ಸಾರ್ಜೆಂಟ್ ಯಾವುದಾದರೂ ಕೇಸ್ ಇನ್‌ವೆಸ್ಟಿಗೇಟ್ ಮಾಡುತ್ತಿದ್ದರೆ – ಐ. ಜಿ. ಸಾಹೇಬರು ಸಹ ಪ್ರವೇಶಿಸುತ್ತಿರಲಿಲ್ಲ. ಸಾರ್ಜೆಂಟ್ ತಪ್ಪುಮಾಡಿದರೆ ಕಡೆಯವರೆವಿಗೆ ಸುಮ್ಮನಿದ್ದು ರಿಮಾರ್ಕ್ ಬರೆಯುತ್ತಿದ್ದರು. ನಮ್ಮ ಕರೀ ಜನಕ್ಕೆ ಅಂತಹ ಡಿಸಿಪ್ಲಿನ್ ಎಲ್ಲಿಂದ ಬರಬೇಕು? ಎನ್ನುತ್ತಿ ದ್ದರು. ಅಂತಹ ಇಬ್ರಾಹಿಂ ಸಾಹೇಬರಿಗೆ ಅತ್ಯಾಧುನಿಕ ಖಾಸಗೀ ಪತ್ತೇ ದಾರನ ಕಾರ್ಯಾಚರಣೆ ಹೇಗೆ ಸರಿಬೀಳಬೇಕು? ಭಾರತಕ್ಕೆ ಸ್ವರಾಜ್ಯ ಬಂದು ಕಾಲ ಕೆಟ್ಟುಹೋಗಿರುವಾಗ ಇವುಗಳನ್ನೆಲ್ಲಾ ಅನುಭವಿ ಸಿಯೇ ತೀರಬೇಕೆಂದು ಸಮಾಧಾನ ಮಾಡಿಕೊಳ್ಳುತ್ತಿದ್ದರು.

ಅದರಿಂದ ಇಬ್ರಾಹಿಂ ಸಾಹೇಬರು ಖಾಸಗೀ ಪತ್ತೇದಾರನಾದ ಚಲಂ ನಿಂದ ಸ್ವಲ್ಪ ಸ್ವಲ್ಪ ದೂರವಾಗಿಯೇ ಇರುತ್ತಿದ್ದರು. ಅಂದರೆ ಅವರು ಅವ ನೊಡನೆ ಸಹಕರಿಸುತ್ತಿರಲಿಲ್ಲವೆಂದಲ್ಲ. ಅವನೇ ತಮ್ಮನ್ನು ಕಂಡು ಏನಾ ದರೂ ಕೇಳಿದರೆ ಎಷ್ಟು ಹೇಳಬಹುದೋ ಅಷ್ಟು ಹೇಳುತ್ತಿದ್ದರು. ತಾವು

ತಿಳಿದುಕೊಳ್ಳಬೇಕಾದುದೇನಾದರೂ ಇದ್ದರೆ ಫೋನ್ ಮಾಡಿ ಕೇಳುತ್ತಿದ್ದರು. ಅತ್ಯಗತ್ಯವಾದ ಕೆಲಸ ಬಿದ್ದರೆ ಸಂಬಳ ತೆಗೆದುಕೊಳ್ಳುತ್ತಿದ್ದ ತಪ್ಪಿಗೆ ಅವನ ಆಫೀಸಿಗೂ ಹೋಗುತ್ತಿದ್ದರು.

ಸ್ನೇಹಾಚಾರದಲ್ಲಿ ಮತ್ತೆ ಮತ್ತೆ ಚಲಂ ಆಫೀಸಿಗೆ ಹೋಗಿ ಅವನನ್ನು ನೋಡುವ ಪದ್ಧತಿಯಿರಲಿಲ್ಲ. ಏನಾದರೂ ದೊಡ್ಡ ಕೆಲಸಮಾಡಿದರೆ ಅದನ್ನು ಯಾರೊಂದಿಗಾದರೂ ಹೇಳಿಕೊಳ್ಳಬೇಕೆಂಬುದೊಂದು ಚಪಲವು ವ್ಯಕ್ತಿಗೆ ಇರುತ್ತದೆಯಷ್ಟೇ. ಪ್ರಾಂತಾಂತರ ಜಿಗೋವಾರ್‌ನನ್ನು ಹಿಡಿದು ಲಾಕಪ್ಪಿನಲ್ಲಿ ಹಾಕಿದಾಗ ಅಂತಹ ಚಪಲ ಸಾಹೇಬರಿಗೆ ಬಂದಿತ್ತು.

ಚಲಂಗೆ ಸಾಹೇಬರ ತರಹ ಚೆನ್ನಾಗಿ ಅರ್ಥವಾಗಿತ್ತು. ಅವರು ಆಫೀಸಿನೊಳಗೆ ಬರುತ್ತಿದ್ದಂತೆಯೇ "ಏನೋ ಕೆಲಸ ಬಿದ್ದಿದೆ. ಅದರಿಂದಲೇ ಸಾಹೇಬರು ಬಂದಿದ್ದಾರೆ." ಎಂದುಕೊಂಡ. ಆದರೆ ಬಂದವರು "ಈ ದಿನ ದೊಡ್ಡದೊಂದು ಕೆಲಸ ಮಾಡಿದ್ದೇನೆ." ಎಂದು ಹೇಳಿದ ಕೂಡಲೇ ಅವನಿಗೆ ಆಶ್ಚರ್ಯವಾಯಿತು.

ಸಾಹೇಬರು ವಾಸ್ತವವಾಗಿಯೂ ಯಾವುದೋ ಅಸಾಧಾರಣವಾದ ಕೆಲಸವನ್ನು ಮಾಡಿದ್ದಾರೆ. ಅದನ್ನು ಹೇಳಿಕೊಳ್ಳುವುದಕ್ಕಾಗಿ ಬಂದಿದ್ದಾರೆ–ಎಂದುಕೊಂಡವನು ಕೇಳಿದ.

"ಏನು ಸಾಹೇಬರೇ. ಏನೋ ವಿಶೇಷವಿರುವಂತಿದೆ...."

"ಹುಂ. ಅದೇ ಹೇಳುವುದಕ್ಕೆ ಬಂದೆ. ನೀವು ಇಸ್ಮಾಯಿಲ್‌ನನ್ನು ಬಲ್ಲಿರಲ್ಲ. ಬಹಳ ದಿನಗಳಿಂದಲೂ ಅವನ ಮೇಲೆ ಕಣ್ಣಿಟ್ಟಿದ್ದೆ. ಈ ಬಾರಿ ನನ್ನ ಕೈಗೆ ಸಿಕ್ಕಿದ. ಈಗ ಸ್ವಲ್ಪ ಹೊತ್ತಿನ ಮೊದಲು ಅವನನ್ನು ಲಾಕಪ್ಪಿನಲ್ಲಿ ಹಾಕಿದೆ."

ಆ ವಿಷಯ ಕೇಳಿ ಚಲಂ ಸಹ ಚಕಿತನಾದ. ಎಂದೂ ಯಾರ ಕೈಗೂ ಸಿಕ್ಕಿಹಾಕಿಕೊಳ್ಳದೇ ಓಡಿಯಾಡುತ್ತಿದ್ದ ಇಸ್ಮಾಯಿಲ್ ಸಿಕ್ಕಿಕೊಂಡನೆಂಬುದನ್ನು ನಂಬುವುದು ಸಹ ಕಷ್ಟವಾಯಿತು. ಆದರೂ ಜವಾಬ್ದಾರಿಯುಳ್ಳ ಇನ್ಸ್‌ಪೆಕ್ಟರು "ಈಗ ತಾನೇ ಲಾಕಪ್ಪಿನಲ್ಲಿ ಹಾಕಿದೆ." ಎಂದರೆ ಅದನ್ನು ನಂಬದಿರುವುದು ಹೇಗೆ?"

ಚಲವಮ್ಮ "ನಿಜವಾಗಿಯೂ ಅದು ಮಹತ್ಕಾರ್ಯ. ಎಲ್ಲರೂ ಬೆರಗಾಗುದ ಕೆಲಸ ಮಾಡಿದ್ದೀರಿ. ಇನ್ನೊಂದು ವಿಷಯವಿದೆ. ತಾವೇ ಸ್ವಯಂ ಆಗಿ ಇಲ್ಲಿಗೆ ದಯಮಾಡಿಸಿ ಈ ವಿಷಯವನ್ನು ನನ್ನೊಂದಿಗೆ ಹೇಳಿದುದು ನನಗೆ ವಿಪರೀತ ಗೌರವವನ್ನು ತೋರಿಸಿದಂತೆ ಆಗಿದೆ." ಎಂದ.

ಅವನಾ ಮಾತು ಹೇಳುತ್ತಿದ್ದಂತೆಯೇ ಕುಪ್ಪುಸ್ವಾಮಿಯು ಟ್ರೇಯಲ್ಲಿ ಮೂರು ಚೈನಾ ಕಪ್ಪುಗಳನ್ನಿಟ್ಟುಕೊಂಡು ಬಂದ. ಅವುಗಳಲ್ಲಿ ಚಹಾ ಯಿದ್ದಿತು.

ಸಾಹೇಬರು "ಇದೇನು ಕುಪ್ಪುಸ್ವಾಮಿ. ಚಲಂ ಅವರು ನನ್ನ ವಿಷಯವಾಗಿ ಒಳ್ಳೆಯ ಮಾತುಗಳನ್ನು ಹೇಳುತ್ತಿರುವಂತೆಯೇ ನೀವು ಚಹಾ ತಂದಿದ್ದೀರಿ. ಇಸ್ಮಾಯಿಲ್‌ನ ವಿಷಯ ಹೇಳಿದುದಕ್ಕೆ ಇದು ಕಿತಾಬೋ ?" ಎಂದರು."

"ಚೆನ್ನಾಯಿತು, ಚೆನ್ನಾಯಿತು. ಹಾಗೆ ಹೇಳಬೇಡಿ. ಒಳ್ಳೇ ಟೀ ಕೊಟ್ಟರೆ ನಿಮಗೆ ಸಂತೋಷವಾಗುತ್ತದೆಂದು ನಿಮ್ಮ ಮುಖ ನೋಡಿದ ಕೂಡಲೇ ಚಹಾ ಮಾಡಿಸಿಕೊಂಡು ತಂದಿದ್ದಾನೆ."

ಕುಪ್ಪುಸ್ವಾಮಿಯು ಸಹ ಸಮಯೋಚಿತವಾಗಿ "ನಾನು ನಿಮಗೆ ಕಿತಾಬ್ ಕೊಡುವುದೆಂದರೇನು ? ನೀವು ಏನಾದರೂ ಕೊಟ್ಟರೆ ತೆಗೆದುಕೊಳ್ಳೋಣವೆಂದು ಕಾದಿದ್ದೇನೆ." ಎಂದ.

ಮೂವರೂ ಚಹಾ ಕುಡಿಯತೊಡಗಿದರು. ಅದು ಚೆನ್ನಾಗಿಯೇ ಇದ್ದಿತು.

"ಸಾಹೇಬರು ಬಹಳ ಚೆನ್ನಾಗಿದೆ. ಇಲ್ಲಿಗೆ ಬಂದಾಗಲೆಲ್ಲಾ ಕುಪ್ಪುಸ್ವಾಮಿಯವರು ಇಂತಹ ಒಳ್ಳೆಯ ಚಹಾ ಕೊಡುವುದಾದರೆ ದಿನಕ್ಕೆ ಆರೇಳು ಸಲ ಬರುತ್ತೇನೆ." ಎಂದು ಹೇಳಿ, ತಾವು ಹೇಳಲು ಹೊರಟಿದ್ದ ವಿಷಯವನ್ನು ಜ್ಞಾಪಿಸಿಕೊಂಡು "ಇಸ್ಮಾಯಿಲ್‌ನನ್ನು ಹಿಡಿದ ವಿಷಯ ಮೊಟ್ಟಮೊದಲು ಹೇಳುತ್ತಿರುವುದು ನಿಮಗೇ ಚಲಂ ಸ್ವಾಮಿ. ದಫೇದಾರನನ್ನು ಕರೆದು ಅವನನ್ನು ಲಾಕಪ್ಪಿನಲ್ಲಿ ಹಾಕುವಂತೆ ಹೇಳಿದೆ. ಅನಂತರ ತೋರಿತು. ಇಸ್ಮಾಯಿಲ್ ಸಾಧಾರಣನಲ್ಲ. ಅವನೆಲ್ಲಿಯಾದರೂ ಚಕ್ಕರ್ ಕೊಟ್ಟು ಪರಾರಿಯಾಗುತ್ತಾನೆಯೇನೋ ಎಂದೆನಿಸಿತು. ನಾನೇ ಹೋದೆ. ನಾನೇ

ಅವನನ್ನು ಒಳಗೆ ತಳ್ಳಿ ಲಾಕಪ್ಪಿನ ಬೀಗವನ್ನು ಹಾಕಿದೆ ಎನ್ನಿ. ಹಾಕುತ್ತಿರು ವಾಗ ಮೊದಲು ಹೋಗಿ ಈ ವಿಷಯ ಚಲಂ ಸ್ವಾಮಿಗೆ ಹೇಳಬೇಕು ಅಂತ ಮನಸ್ಸಾಯಿತು. ಆದರಿಂದ ಕೂಡಲೇ ಇಲ್ಲಿಗೆ ಬಂದುಬಿಟ್ಟೆ. ಈ ಕಾಲ ದಲ್ಲಿ ಯಾವುದಾದರೂ ಒಳ್ಳೆಯ ಕೆಲಸ ಮಾಡಿದರೆ ಅದಕ್ಕೆ ಬೆಲೆಯಿಲ್ಲ. ಕೆಲಸದ ಯೋಗ್ಯತೆಯನ್ನು ಕಾಣದವರು ಏನು ಮಹಾ ದೊಡ್ಡ ಕೆಲಸ ಎಂದು ತಾತ್ಸಾರ ಮಾಡುತ್ತಾರೆ. ಅದರ ಯೋಗ್ಯತೆ ತಿಳಿದವರು ಅಸೂಯೆ ಪಡುತ್ತಾರೆ. ನೋಡಿ ಚಲಂ ಸ್ವಾಮಿ. ನಿಮ್ಮೊಂದಿಗೆ ಹೇಳಿಕೊಂಡರೆ ನೀವು ಈ ಕೆಲಸ ಎಷ್ಟು ದೊಡ್ಡದು – ಎಂದು ಅರ್ಥಮಾಡಿಕೊಳ್ಳಬಲ್ಲಿರಿ. "ಪಾಪ. ಈ ಮುದುಕ ಈ ವಯಸ್ಸಿನಲ್ಲ ಎಷ್ಟು ಕಷ್ಟಪಟ್ಟು ಕೆಲಸ ಮಾಡಿ ದ್ದಾನೆ – ಎಂದು ಸಂತೋಷ ಪಡುತ್ತೀರಿ." ಎಂದರು.

ಚಲಂ "ಯಾರು ಏನೇ ಹೇಳಲಿ, ಇದು ಅಸಾಧಾರಣವಾದ ಕೆಲಸ." ಎಂದ.

"ನಮ್ಮ ಪೋಲೀಸಿನವರಿಗಿರುವ ಕಷ್ಟ ಅಷ್ಟಿಷ್ಟಲ್ಲ. ಕೆಲಸ ಮಾಡಿದರೆ ಪ್ರೋತ್ಸಾಹವಿಲ್ಲ. ಮಾಡದಿದ್ದರೆ ಆಕ್ಷೇಪಣೆ. ಹೀಗಿದೆ ನಮ್ಮ ಕತೆ. ಈ ಅಂಶವನ್ನೇ ತೆಗೆದುಕೊಳ್ಳಿ. ಇನ್ನು ಮೇಲಧಿಕಾರಿಗಳಿಗೆ ತಿಳಿಸಲೇ ಬೇಕಲ್ಲ. ತಿಳಿಸಿದರೆ, "ಇಂತಹ ದೊಡ್ಡ ಕೇಡಿಯನ್ನು ಹಿಡಿದೆವು." ಎಂದು ಅವರೇ ಕಿತಾಬ್ ತೆಗೆದುಕೊಳ್ಳುತ್ತಾರೆ. ಜನಗಳೊಂದಿಗೆ ಹೇಳಿದೆವು ಎನ್ನಿ. "ಏನು ಮಹಾ. ತೆಗೆದುಕೊಳ್ಳುವ ಸಂಬಳಕ್ಕೆ ಕೆಲಸ ಮಾಡಿದ್ದಾನೆ." ಎನ್ನು ತ್ತಾರೆ. ಏನೋ ಧರ್ಮದ ಮೇಲೆ ದೃಷ್ಟಿಯಿಟ್ಟು ಕೆಲಸ ಮಾಡುವುದು ಅಷ್ಟೇ. ನಾನು ಚೆನ್ನಾಗಿ ತಿಳಿದುಕೊಂಡಿದ್ದೇನೆ. ಕಷ್ಟಪಟ್ಟು ಕೆಲಸ ಮಾಡುವವರನ್ನು ಈ ಕಾಲದಲ್ಲಿ ಕೇಳುವವರೇ ಇಲ್ಲ. ಸೂಟು ಬೂಟು ಗಳನ್ನು ಹಾಕಿಕೊಂಡು, ಹುಡುಗಿಯರಂತೆ ಮುಖ ಮೂತಿಗಳಿಗೆಲ್ಲಾ ಪೌಡರ್ ಸ್ನೋ ಹಾಕಿಕೊಂಡು ತಿರುಗುವವರಿಗೇ ಈಗ ಭರಕತ್ತು."

ಚಲಂ ಸೇದುತ್ತಿದ್ದ ತುಂಡು ಸಿಗರೇಟನ್ನು ಬಿಸಾಡಿ, ಬೇರೊಂದು ಹಚ್ಚಿ ಕೊಂಡು, ಅತ್ಯಾಸಕ್ತಿಯಿಂದ ವಿಷಯವೇನೆಂದು ವಿಚಾರಿಸಿದ. ಇಬ್ರಾಹಿಂ ಸಾಹೇಬರು ವಿಶದವಾಗಿ ಎಲ್ಲವನ್ನೂ ಹೇಳಿದರು.

ಕುಪ್ಪುಸ್ವಾಮಿಯು ಬಹಳ ಸ್ವಾರಸ್ಯವಾಗಿದೆ. ಇಂತಹ ದೊಡ್ಡ ಕದೀಮರು ಸಿಕ್ಕಿಬೀಳುವುದು ಅವರ ರಖಾವುದಾರರಾದ ಹೆಂಗಸ ರಿಂದಲೇ. ಅಂತೂ ದೊಡ್ಡದೊಂದು ಆನೆಯನ್ನು ಹಳ್ಳಕ್ಕೆ ಕೆಡವಿದಿರಿ." ಎಂದ.

"ಹುಂ. ಅದೊಂದು ಅದೃಷ್ಟವೇ ಎಂದು ಹೇಳಬೇಕು. ನಿನ್ನೆಯ ದಿನ ಸಾಯಂಕಾಲ ಅವಳು ಬಂದ ವೇಳೆಗೆ ನಾನು ಸ್ಟೇಷನ್ನಿನಲ್ಲಿಯೇ ಇದ್ದುದು ಪುಣ್ಯ."

ಚಲಂ ಏನೂ ಹೇಳಲಿಲ್ಲ. ಅಷ್ಟು ಹೊತ್ತೂ ಇಬ್ರಾಹಿಂ ಸಾಹೇಬರು ಹೇಳಿದ ವಿಷಯವನ್ನೇ ಆಲೋಚನೆ ಮಾಡುತ್ತಿದ್ದ.

ಸಾಹೇಬರು "ಏನು ಚಲಂ ಸ್ವಾಮಿ. ನೀವು ನಿಮ್ಮ ಅಭಿಪ್ರಾಯ ವನ್ನೇ ಹೇಳಲಿಲ್ಲ." ಎಂದರು.

ಅವನು ನಗುತ್ತಾ "ನಾನೇನು ಹೇಳಲಿ. ಎಲ್ಲಾ ಸಾಂಗೋಪಾಂಗ ವಾಗಿ ನಡೆದಿದೆ. ಅಪರಾಧಿಯೂ ಸಿಕ್ಕಿಕೊಂಡಿದ್ದಾನೆ. ಈ ಪ್ರಸಂಗದಲ್ಲಿ ಹೇಳಬಹುದಾದುದು ಒಂದು ಮಾತು. ಒಂದಾದ ಮೇಲೆ ಒಂದು ಅದೃಷ್ಟವು ಕೂಡಿಬಂದಿದೆ." ಎಂದ.

"ಇನ್ನೂ ಒಂದು ಅದೃಷ್ಟವು ಬರುವುದರಲ್ಲಿತ್ತು. ಆದರೆ ಅಷ್ಟರಲ್ಲಿಯೇ ಅದು ತಪ್ಪಿಸಿಕೊಂಡಿತು."

ಅದೇನು ಎಂದು ಚಲಂ ವಿಚಾರಿಸಿದ.

"ರಾಜರತ್ನಂ ಶೆಟ್ಟಿಯನ್ನು ಸ್ಟೇಷನ್ನಿಗೆ ಕರೆಸಿದೆನಷ್ಟೇ. ಎಲ್ಲಾ ಮಾತು ಕತೆಗಳು ಮುಗಿದು ಇಸ್ಮಾಯಿಲ್‌ನನ್ನು ಹಿಡಿದುಕೊಂಡು ಬರಲು ರಾಜ ಶೇಖರಪ್ಪನನ್ನು ಕಳಿಸಿದೆ. ಸುಮ್ಮನೆ ಕುಳಿತಿದ್ದಾಗ ಮನಸ್ಸಿಗೊಂದು ಯೋಚನೆ ಬಂದಿತು. ಆ ವಜ್ರದ ಹರಳಿನ ವಿಷಯವಾಗಿ ಮಾತನಾಡಿದಾಗ ಶೆಟ್ಟಿ ನಡೆದುಕೊಂಡ ತರಹ ನನಗೆ ಸರಿತೋರಲಿಲ್ಲ. ಅದರಿಂದ ಈ ವಜ್ರದ ಹರಳು ಕಳ್ಳಮಾಲೇನೋ ಎಂಬ ಸಂದೇಹ ಬಂದಿತು. ಅದೂ ಆಗಿದ್ದಿದ್ದರೆ ಇನ್ನೂ ಸ್ವಾರಸ್ಯವಾಗಿರುತ್ತಿತ್ತು."

"ಸ್ವಯಂ ರಾಜಾ ವೆಂಕಟರಾಮನೇ ಈ ಶೆಟ್ಟಿಯ ಅಂಗಡಿಗೆ ಬಂದು ಆ

ಉಂಗುರವನ್ನು ಕೊಟ್ಟನಲ್ಲವೇ? ಹಾಗಿರುವಾಗ ಅದು ಕಳ್ಳಮಾಲು ಆಗುವುದು ಹೇಗೆ?"

"ಉಹುಂ. ಅದು ಕಳ್ಳಮಾಲು ಅಲ್ಲ. ನಾನು ಈ ಮಾತು ಯಾಕೆ ಆಡುತ್ತಿದ್ದೇನೆಂಬುದು ನಿಮಗೆ ಅರ್ಥವಾಗಲಿಲ್ಲ. ವಿಷಯವೇನೆಂದರೆ ಶೆಟ್ಟಿಯು ಪೋಲೀಸ್ ಸ್ಟೇಷನ್ನಿನಲ್ಲಿದ್ದಾಗ ಈ ವಜ್ರದ ವಿಷಯವನ್ನು ಮಾತನಾಡಿದೆ. ಇಸ್ಮಾಯಿಲ್ ಎಂತಹ ದಗಾ ಮಾಡಿದ್ದಾನೆಂಬ ವಿಷಯ ಆಗಿನ್ನೂ ಹೇಳಿರಲಿಲ್ಲ. ಆ ಸಮಯದಲ್ಲಿ ಶೆಟ್ಟಿಯ ಮುಖ ಹೇಗಾಯಿತು]– ಎನ್ನುತ್ತೀರಿ. ಯಾರಾದರೂ ಆ ವಜ್ರದ ಉಂಗುರವನ್ನು ಕಳ್ಳತನ ಮಾಡಿಕೊಂಡು ಬಂದು ಶೆಟ್ಟಿಗೆ ಮಾರಿದ್ದು ನಾನು ಅವರ ಸಂಬಂಧವಾಗಿ ಮಾತನಾಡಿದ್ದರೆ ಹೇಗಾಡಬೇಕೋ ಹಾಗೆ ಆಡಿದ. ಅ ಉಂಗುರ ಕಡಿಮೆ ಬೆಲೆಗೆ ಮಾರಲ್ಪಟ್ಟಿದ್ದುದರಿಂದ ಅದರ ವಾಸ್ತವವಾದ ಮಾಲೀಕನಾದ ರಾಜಾ ವೆಂಕಟರಾಮನ ಮೇಲೆ ಸಹ ಅವನಿಗೆ ಸಂದೇಹ ಬಂದಿತೆಂದು ಕಾಣುತ್ತದೆ."

ಕುಪ್ಪುಸ್ವಾಮಿಯು ನಗುತ್ತಾ "ನಿಜ, ಯಾರಿಗಾದರೂ ಹಾಗೆಯೇ ಆಗಬೇಕು. ಉಂಗುರ ಕಡಿಮೆ ಬೆಲೆಗೆ ಕೊಂಡುಕೊಳ್ಳಲ್ಪಟ್ಟಿದೆ. ನೀವು ವಿವರ ಹೇಳದೇ ಅದರ ವಿಷಯವಾಗಿ ಮಾತನಾಡುತ್ತೀರಿ. ಹಾಗಿರುವಾಗ ಇನ್ನೇನಾಗುತ್ತದೆ– ಹೇಳಿರಿ?" ಎಂದು ಕೇಳಿದ.

ಅವರುಗಳು ಹಾಗೆಯೇ ಮಾತನಾಡುತ್ತಾ ಕುಳಿತಿದ್ದರು.

ಟೆಲಿಫೋನ್ ರಿಂಗ್ ಆಯಿತು. ಕುಪ್ಪುಸ್ವಾಮಿಯು ತೆಗೆದು ನೋಡಿದ. ಅದು ಬಂದಿದ್ದುದು ಇಬ್ರಾಹಿಂ ಸಾಹೇಬರಿಗೆ. ಅವರ ಕೈಲಿ ರಿಸೀವರ್ ಕೊಟ್ಟ.

ಮಾತನಾಡಿದ ಧ್ವನಿಯು ಅಪರಿಚಿತವಾದುದರಿಂದ ತಾವು ಇಲ್ಲಿಗೆ ಬಂದಿರುವುದು ಹೊಸಬರಿಗೆ ಹೇಗೆ ಗೊತ್ತಾಯಿತು– ಎಂದು ಯೋಚಿಸುತ್ತಿದ್ದಂತೆಯೇ ರಿಂಗ್ ಮಾಡಿದವರು ಹೇಳಿದರು.

"ನಾನು ಈಗ ತಾನೇ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ರಿಂಗ್ ಮಾಡಿದ್ದೆ. ತಾವು ಅಲ್ಲಿರಲಿಲ್ಲ. ಬಹಳ ಜರೂರಾದ ಕೆಲಸವೆಂದೂ ನೀವು ಎಲ್ಲಿ ಸಿಗುತ್ತೀರೆಂಬುದನ್ನು ದಯಮಾಡಿ ಹೇಳಬೇಕೆಂದೂ ಪ್ರಾರ್ಥಿಸಿದೆ.

ನೀವು ಚಲಂರವರ ಆಫೀಸಿನಲ್ಲಿದ್ದೀರೇನೋ ನೋಡುವಂತೆ ಹೇಳಿದರು. ಅದ ರಿಂದ ಅಲ್ಲಿಗೇ ಫೋನ್ ಮಾಡುತ್ತಿದ್ದೇನೆ. ಅನ್ಯಥಾ ಭಾವಿಸಬಾರದು...."

"ಏನು ವಿಷಯ ಹೇಳಿರಿ...."

"ನಮ್ಮ ಬ್ಯಾಂಕಿನಲ್ಲಿ ಮೂವತ್ತಾರು ಸಾವಿರ ರೂಪಾಯಿಗಳು ನಾಪತ್ತೆ ಯಾಗಿವೆ. ದಯಮಾಡಿ ನೀವು ಬರಬೇಕು ?"

"ಯಾವ ಬ್ಯಾಂಕಿನಿಂದ ಮಾತನಾಡುತ್ತೀರಿ...."

"ಟರ್ವ ಬ್ಯಾಂಕಿನಿಂದ...."

ಅತ್ತ ಕಡೆಯಿಂದ ಆಡಲ್ಪಡುತ್ತಿದ್ದ ಮಾತು ಸಷ್ಟವಾಗಿ ಕೇಳಿಸುತ್ತಿ ದ್ದರೂ ಭ್ರಾಂತಿಯಿಂದ "ಸಿಟಿ ಬ್ಯಾಂಕಿನಿಂದಲೇ...." ಎಂದು ಸಾಹೇಬರು ವಿಚಾರಿಸಿದರು.

"ಅಲ್ಲ, ಟರ್ವ ಬ್ಯಾಂಕಿನಿಂದ. ಮ್ಯಾನೇಜರು ಆನಂದರಾವ್ ಮಾತ ನಾಡುತ್ತಿರುವುದು. ನಾನೇ ಬರಬೇಕೆಂದರೂ ಬರುತ್ತೇನೆ. ಆದರೆ ತಾವೇ ಇಲ್ಲಿಯವರೆವಿಗೆ ದಯಮಾಡಿಸಿದರೆ ಆವಶ್ಯಕವಾದ ಕಾಗದ ಪತ್ರಗಳನ್ನೂ, ಲೆಡ್ಜರುಗಳನ್ನೂ ನೋಡಲು ಅನುಕೂಲವಾಗುತ್ತದೆ."

"ಆಗಲಿ. ಯಾರು ಹಣ ಅಪಹರಿಸಿದ್ದಾರೆಂಬುದರ ಸುಳಿವು ಸಿಕ್ಕಿದೆ ಯೇನು ?"

"ನಮ್ಮಲ್ಲಿ ಪ್ರಕಾಶ್ ಅಂತ ಒಬ್ಬರಿದ್ದಾರೆ. ಅವರು ಹಣ ದುರುಪ ಯೋಗಪಡಿಸಿಕೊಂಡಿರಬಹುದೆಂಬ ಸಂದೇಹ ಬಂದಿದೆ. ತಾವು ಸ್ವಲ್ಪ ದಯ ಮಾಡಿಸುತ್ತೀರಾ ?"

"ಹುಂ. ಬರುತ್ತೇನೆ...." ಎಂದು ಹೇಳಿ ಸಾಹೇಬರು ಫೋನ್ ಡಿಸ್ ಕನೆಕ್ಟ್ ಮಾಡಿದರು.

ಚಲಮ್ಮು "ಏನು ಸಾಹೇಬರೇ, ಪುನಃ ಯಾವುದೋ ಒಂದು ಕೇಸು ತಗುಲಿಕೊಂಡಹಾಗಿದೆ." ಎಂದ.

ಸಾಹೇಬರು ವಿವರವನ್ನೆಲ್ಲಾ ಹೇಳಿದರು.

ಚಲಂ ಗಾಢವಾಗಿ ಯೋಚನೆ ಮಾಡತೊಡಗಿದ.

"ಯಾಕೆ ಹಾಗೆ ಯೋಚಿಸುತ್ತಿದ್ದೀರಿ, ಚಲಂ."

"ನನ್ನ ಅಕೌಂಟ್ ಸಹ ಟರ್ವ ಬ್ಯಾಂಕಿನಲ್ಲಿಯೇ ಇರುವುದು...."

ಅವನು ಮುಂದೆ ಮಾತನಾಡುವುದರಲ್ಲಿಯೇ ಸಾಹೇಬರು "ಆ ಬ್ಯಾಂಕಿನಲ್ಲಿ ಹಣ ದುರುಪಯೋಗವಾದರೆ ನಿಮ್ಮ ಹಣ ಎಲ್ಲಿ ಹೋಗುತ್ತದೆಯೋ ಎಂದು ದಿಗಿಲಾಯಿತೇನು ?" ಎಂದರು ನಗುತ್ತಾ.

"ಹಾಗಲ್ಲ. ಪ್ರಕಾಶ್ ಎಂಬುವವರು ಹಣವನ್ನು ದುರುಪಯೋಗ ಮಾಡಿರಬಹುದೆಂದು ಮ್ಯಾನೇಜರ್ ಆನಂದರಾವ್ ಹೇಳಿದರಲ್ಲ. ಆ ಪ್ರಕಾಶ್ ಎಂಬಾತನನ್ನು ಬಹುಮಟ್ಟಿಗೆ ನಾನು ಬಲ್ಲೆ ಅವನು ಇಂತಹ ಹೀನಕೃತ್ಯವನ್ನು ಮಾಡುವಂತಹವನಲ್ಲ. ಇವರು ಹೇಳುವುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ.

ಆ ವಿಷಯವನ್ನೇ ಬಿಟ್ಟು ಇಬ್ರಾಹಿಂ ಸಾಹೇಬರು "ಆ ಬ್ಯಾಂಕಿನವನು ಟೆಲಿಫೋನ್ ಮಾಡಿ ವಿಷಯ ತಿಳಿಸಿದಾಗ ಏನು ಹೇಳಬೇಕೆಂದು ನನ್ನ ಮನಸ್ಸಿಗೆ ತೋರಿತು ಗೊತ್ತೇ ಚಲಂ ಸ್ವಾಮಿ ?" ಎಂದರು.

ಅದೇನೆಂದು ಚಲಂ ವಿಚಾರಿಸಿದ.

"ಬ್ಯಾಂಕು ಶನಿವಾರದ ದಿನ ಹನ್ನೆರಡೂವರೆಗೇ ಮುಚ್ಚುತ್ತದೆ. ಈ ಹೊತ್ತು ಅರ್ಧ ದಿನ, ನಾಳೆ ಪೂರಾ ದಿನ. ಇನ್ನು ತೆಗೆಯುವುದು ಸೋಮವಾರ ಹತ್ತೂವರೆ ಗಂಟೆಗೆ. ಆಗ ಏನಾಗಿದೆಯೋ ನೋಡೋಣವೆಂದು ಹೇಳಬೇಕು ಅಂತ ತೋರಿತು."

"ಯಾಕೆ ಸಾಹೇಬರೇ ? ಏನೋ ಗರಂ ಆಗಿರುವಂತೆ ಕಂಡುಬರುತ್ತಿದೆಯಲ್ಲಾ."

"ಅಲ್ಲದೇ ಏನು ಸ್ವಾಮಿ. ಜಿಗೋನೂರ್ ಇಸ್ಮಾಯಿಲ್ ರಾಜರತ್ನಂ ಶೆಟ್ಟಿಗೆ ಒಂದು ಚೆಕ್ ಕೊಟ್ಟನಲ್ಲ. ಅದರ ವಿಷಯ ವಿಚಾರಿಸೋಣವೆಂದು ಸಿಟಿ ಬ್ಯಾಂಗಗೆ ಫೋನ್ ಮಾಡಿದ್ದೆ. ಈ ದಿನ ಮತ್ತು ನಾಳೆ ರಜಾಗಳು. ನಾಡಿದ್ದು ಬಂದು ಮಾತನಾಡು ಎಂದರು. ಈಗ ಮಾತ್ರ ರಜಾ ಅಲ್ಲವೋ? ನಾಡಿದ್ದು ಬ್ಯಾಂಕ್ ಆರಂಭವಾದ ಮೇಲೆಯೇ ನೋಡಿಕೊಂಡರಾಗುವುದಿಲ್ಲವೇ ""

ಚಲಮ್ಮ ನಗುತ್ತಾ "ಬಹಳ ಚೆನ್ನಾಗಿ ಹೇಳುತ್ತೀರಿ ಸಾಹೇಬರೇ. ಪೋಲೀಸಿನವರು ಕ್ಲೈಂಟುಗಳ ವಿಷಯ ಕೇಳಿದರೆ, ಅದರಲ್ಲಿಯೂ ಟೆಲಿಫೋನಿನಲ್ಲಿ ಕೇಳಿದರೆ ಬ್ಯಾಂಕಿನವರು ಹೇಳುವುದು ಹೇಗೆ ? ಏನಾದರೂ ಹೆಚ್ಚು

ಕಡಿಮೆಯಾದರೆ ತಲೆಗೆ ಬರುವುದಿಲ್ಲವೇ ? ಆದರಿಂದ ನೀವು ಅವರ ಮೇಲೆ ಕೋಪಮಾಡಿಕೊಳ್ಳುವುದು ಸರಿಯಲ್ಲ. ಇನ್ನೂ ಒಂದು ವಿಷಯವಿದೆ. ಒಂದು ವೇಳೆ ಸಿಟಿ ಬ್ಯಾಂಕಿನವರು ನಿಮ್ಮೊಂದಿಗೆ ಸರಿಯಾಗಿ ಮಾತನಾಡಲಿಲ್ಲ ವೆಂದೇ ಇಟ್ಟುಕೊಳ್ಳಿರಿ. ಆದಕ್ಕಾಗಿ ಟರ್ನ ಬ್ಯಾಂಕಿನವರ ಮೇಲೇಕೆ ಕೋಪಮಾಡುತ್ತೀರಿ ?" ಎಂದ.

ಇಬ್ರಾಹಿಂ ಸಾಹೇಬರು "ಇರುವ ವಿಷಯ ಹೇಳಿದೆ. ನನಗೆ ಯಾರ ಮೇಲೆಯೂ ಕೋಪವಿಲ್ಲ. ಒಂದು ವೇಳೆ ಕೋಪಮಾಡಿಕೊಂಡರೂ ನಮ್ಮದು ಏನು ನಡೆಯುತ್ತದೆ ? ಈಗ ನೋಡಿ. ಟರ್ನ ಬ್ಯಾಂಕಿನವರು ತಮ್ಮ ಬ್ಯಾಂಕಿ ನಲ್ಲಿ ಛಪಾವಣೆಯಾಗಿದೆ – ಎಂದು ಟೆಲಿಫೋನ್ ಮಾಡಿದರು. ಅದರ ತನಿಖೆ ಕ್ರಮ ನಡೆಯಿಸಲು ನನಗೆ ಇಷ್ಟವಿಲ್ಲವೆಂದೇ ಇಟ್ಟುಕೊಳ್ಳಿ. ನಾನೇನು ನಿಮ್ಮ ಹಾಗೆ ಸ್ವತಂತ್ರನೇ. ತನಿಖೆ ಕ್ರಮ ನಡೆಯಿಸುವುದಿಲ್ಲ ಎಂದು ನಿರಾ ಕರಿಸುವುದಕ್ಕಾಗುತ್ತದೆಯೇ ? ತಾಪೇದಾರಿ. ಯಾರು ಏನೆಂದರೂ ನಮ್ಮ ಕೆಲಸ ನಾವು ಮಾಡಿಕೊಂಡೇ ಹೋಗಬೇಕು." ಎಂದರು.

"ಈಗ ನೀವು ಟರ್ನ ಬ್ಯಾಂಕಿಗೆ ಹೋಗುತ್ತೀರಾ ?"

"ಹುಂ. ಹೋಗಲೇಬೇಕಲ್ಲ...."

"ನಿಮಗೆ ಆಕ್ಷೇಪಣೆಯಿಲ್ಲದಿದ್ದರೆ ನಾನೂ ಬರುತ್ತೇನೆ."

ಆಶ್ಚರ್ಯದಿಂದ ಸಾಹೇಬರು "ಇದರಲ್ಲಿ ನಿಮಗೇನು ಆಸಕ್ತಿ ಚಲಂ ಸ್ವಾಮಿ." ಎಂದು ಕೇಳಿದರು.

"ಇನ್ನೂ ಯಾವ ಬಗೆಯಾದ ಆಸಕ್ತಿಯೂ ಉಂಟಾಗಿಲ್ಲ, ಸಾಹೇ ಬರೇ. ಆ ಪ್ರಕಾಶ್ ಛಪಾವಣೆ ಮಾಡುವಂತಹ ಮನುಷ್ಯನಲ್ಲ. ಅವನ ಮೇಲೆ ಅಪವಾದ ಬಂದಿರುವುದರಿಂದ ಈ ಕೇಸಿನಲ್ಲಿ ನನಗೆ ಕುತೂಹಲ ವುಂಟಾಗಿದೆ."

"ಆಗತ್ಯವಾಗಿ ಬನ್ನಿ. ನೀವಿದ್ದರೆ ನನಗೆ ಅನುಕೂಲವೇ ?"

ಸಾಹೇಬರೊಂದಿಗೆ ಚಲಂ ಸಹ ಹೊರಟ. ಕುಪ್ಪುಸ್ವಾಮಿಯೂ ಅವರನ್ನು ಅನುಸರಿಸಿದ. ಮೂರು ಮಂದಿಯೂ ಗಾಂಧೀ ಬಜಾರಿನ ಕೊನೆ ಯಲ್ಲಿ ಟ್ಯಾಕ್ಸೀ ಮಾಡಿಕೊಂಡು ಹೊರಟರು.

೬

ಮಧ್ಯಾಹ್ನ ಕೋರ್ಟಿಗೆ ಹಾಕಿಕೊಂಡು ಹೋಗಿದ್ದ ಯೂನಿಫಾರಂ ಬದಲಾಯಿಸುವುದಕ್ಕೆ ಇಬ್ರಾಹಿಂ ಸಾಹೇಬರಿಗೆ ಅವಕಾಶವೇ ಆಗಿರಲಿಲ್ಲ. ಪೋಲೀಸ್ ದಿರಸುಗಳನ್ನು ಹಾಕಿಕೊಂಡು ಅವರು ಟರ್ವ ಬ್ಯಾಂಕಿಗೆ ಪ್ರವೇಶಿಸುತ್ತಲೇ ಮ್ಯಾನೇಜರಿಗೂ, ನೌಕರರಿಗೂ ಬಂದವರು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇನ್ಸ್‌ಪೆಕ್ಟರ್ ಇಬ್ರಾಹಿಂ ಸಾಹೇಬರೆಂಬುದು ಸುಲಭವಾಗಿ ಗೊತ್ತಾಯಿತು.

ಗೌರವದಿಂದ ಸ್ವಾಗತಿಸಿ ಒಳಗೆ ಕರೆದುಕೊಂಡು ಹೋಗಿ ಕೂರಿಸಿದರು.

ಮೊಟ್ಟಮೊದಲು ಸಾಹೇಬರು ತಮ್ಮ ಜೊತೆಯಲ್ಲಿ ಬಂದಿದ್ದ ಚಲಂ, ಕುಪ್ಪುಸ್ವಾಮಿಗಳನ್ನು ಪರಿಚಯ ಮಾಡಿಸಿದರು.

ಆನಂದರಾಯರು "ತಮ್ಮ ಹೆಸರು ಕೇಳಿದ್ದೆ. ಆದರೆ ಇದುವರೆಗೆ ನಿಮ್ಮನ್ನು ನೋಡುವ ಅವಕಾಶವಾಗಲಿಲ್ಲ. ತಾವು ಬಂದದ್ದು ಬಹಳ ಸಂತೋಷಕರ." ಎಂದು ಉಪಚಾರೋಕ್ತಿಗಳನ್ನು ಹೇಳಿದರು.

ಪರಸ್ಪರ ಪರಿಚಯಗಳಾದೊಡನೆಯೇ ಛಪಾಣೆಯ ಪ್ರಸಂಗ ಬಂದಿತು. ಆಗ ಆನಂದರಾಯರು ಈ ರೀತಿಯಾಗಿ ಹೇಳತೊಡಗಿದರು.

"ಈ ದಿನ ಸುಮಾರು ಐದು ಗಂಟೆಗಳ ಹೊತ್ತಿನಲ್ಲಿ ನಾನು ಈ ಆಫೀಸಿನಲ್ಲಿ ಕುಳಿತಿದ್ದೆ. ನಮ್ಮ ಅಕೌಂಟೆಂಟರಾದ ಶ್ರೀಧರ ಅವರು ಬಂದು ಹಣದಲ್ಲಿ ಮೂವತ್ತಾರು ಸಾವಿರ ರೂಪಾಯಿ ಕಡಿಮೆ ಬಂದಿದೆ – ಎಂಬುದಾಗಿ ಹೇಳಿದರು. ಕೂಡಲೇ ನನಗೆ ನಂಬಿಕೆಯಾಗಲಿಲ್ಲ. ಲೆಕ್ಕಾಚಾರಗಳಲ್ಲಿ ತಪ್ಪಾಗಿದೆ ಎಂದು ಭಾವಿಸಿದೆ. ಶ್ರೀಧರ್‌ರೂ ಇತರರೂ ಎಲ್ಲಾ ಲೆಕ್ಕಗಳನ್ನೂ ನೋಡಿ ಛಪಾಣೆಯಾಗಿದೆ ಎಂಬ ನಿರ್ಧಾರಕ್ಕೆ ಬಂದರು. ಅವರು ಹೇಳುವುದು ಸರಿಯೆಂದು ನನಗೂ ತೋರಿತು. ಅನಂತರ ಉಡಿಪಿಯಲ್ಲಿ ಹೆಡ್ಡಾಫೀಸಿಗೆ ಟೆಲಿಫೋನ್ ಮಾಡಿ ಅವರ ಅಭಿಪ್ರಾಯಗಳನ್ನು ಕೇಳಿದೆ. ನಮ್ಮ ಜನರಲ್ ಮ್ಯಾನೇಜರ್‌ರು ಕಾನೂನು ಪ್ರಕಾರ ಏನು ಮಾಡಬೇಕೋ ಮಾಡುವಂತೆ

ಹೇಳಿದರು. ಆದರ ಮೇಲೆ ನಾನು ತಮಗೆ ಫೋನ್ ಮಾಡಿದೆ. ತಾವು ನನ್ನ ಕಂಪ್ಲೈಂಟ್ ತೆಗೆದುಕೊಂಡು ತನಿಖೆ ಕ್ರಮಗಳನ್ನು ನಡೆಯಿಸಬೇಕು."

"ನಿಮ್ಮಲ್ಲಿಗಿರುವ ಛಪಾವಣೆಯನ್ನು ವಿವರಿಸಿ ಆನಂದರಾಯರೇ?" ಎಂದು ಸಾಹೇಬರು ಕೇಳಿದರು.

ಆನಂದರಾಯರು ಶ್ರೀಧರನ ಕಡೆ ನೋಡಲು ಆತ ಹೇಳಿದ.

"ಕ್ಯಾಷ್ ತಾಳೆಯನ್ನು ನೋಡಿದಾಗ ಮೂವತ್ತಾರು ಸಾವಿರ ರೂಪಾಯಿಗಳು ಕಡಿಮೆ ಬಂದಿದ್ದವು. ನಮ್ಮ ಮ್ಯಾನೇಜರಿಗೆ ಹೇಳಿದೆ. ಲೆಕ್ಕಗಳನ್ನು ಪುನಃ ನೋಡುವುದಕ್ಕೆ ಹೇಳಿದರು. ಅವುಗಳಲ್ಲಿಯೇ ಹೆಚ್ಚು ಕಡಿಮೆಯಾಗಿದೆ ಎಂದೂ, ಹಣ ಗೈರುವಿಲೆಯಾಗಿಲ್ಲವೆಂದೂ ಅವರ ಭಾವನೆಯಾಗಿತ್ತು. ನಾನೂ ಇನ್ನಿಬ್ಬರೂ ಆ ದಿನ ಜಮಾ ಖರ್ಚಾಗಿದ್ದ ಎಲ್ಲರ ಖಾತೆಗಳನ್ನೂ ನೋಡಿದೆವು. ಲೆಡ್ಜರ್ ಕ್ಲಾರ್ಕ್ ಕಳಿಸಿದ ಚೆಕ್ಕುಗಳನ್ನು ನಮ್ಮ ಮ್ಯಾನೇಜರೇ ಪ್ಯಾಸು ಮಾಡುತ್ತಾರೆ. ಹಾಗೆ ಪ್ಯಾಸು ಮಾಡುವ ಮೊದಲು ಯಾರ ಚಕ್ಕು, ಯಾರ ಹೆಸರಿಗೆ ಕೊಡಲ್ಪಟ್ಟಿವೆ, ಎಷ್ಟು ಹಣಕ್ಕೆ ಮುಂತಾದ ವಿವರಗಳನ್ನು ಬರೆದುಕೊಳ್ಳುತ್ತಾರೆ. ಅದನ್ನೆಲ್ಲಾ ಕೂಡಿ ನೋಡಿದೆವು. ಈ ದಿನ ಬೆಳಗಾಗ ನಮ್ಮ ಬಳಿ ಇದ್ದ ಹಣ, ಅನಂತರ ಜಮಾ ಬಂದ ಹಣಗಳನ್ನು ಕೂಡಿದೆವು. ಆಗಲೂ ಮೂವತ್ತಾರು ಸಾವಿರ ರೂಪಾಯಿಗಳು ಖೋತಾ ಆದವು. ಕ್ಯಾಷ್ ಕೌಂಟರಿನ ಲೆಡ್ಜರ್ ನೋಡುವಲ್ಲಿ ಲೆಕ್ಕ ಸರಿಯಾಗಿದ್ದಿತು. ಪ್ರತಿಯೊಂದನ್ನೂ ಐಟಂವಾರಿಯಾಗಿ ನೋಡುತ್ತಿರುವಾಗ ಒಂದು ದೋಷವು ಕಂಡುಬಂದಿತು."

ಶ್ರೀಧರ ಮುಂದೆ ಮಾತನಾಡುವ ಮೊದಲು ಒಂದು ಗಳಿಗೆ ತಡೆದ. ಇನ್ಸ್ಪೆಕ್ಟರೂ ಪತ್ತೇದಾರರೂ ಆಸಕ್ತಿಯಿಂದ ಅವನ ಕಡೆಗೆ ನೋಡಿದರು.

"ನಮ್ಮ ಬ್ಯಾಂಕಿನಲ್ಲಿ ಮಹಮುದಾಲಿ ಎಂಬುವವರು ಹೊಸದಾಗಿ ಒಂದು ಕರೆಂಟ್ ಅಕೌಂಟ್ ತೆಗೆದಿದ್ದಾರೆ. ಅವರ ಖಾತೆಯಲ್ಲಿ ಐದಾರು ಲಕ್ಷ ರೂಪಾಯಿಗಳಿವೆ. ಅವರೊಬ್ಬರು ಬುಕ್ಕಿ. ಅವರು ಕೊಟ್ಟಿದ್ದ ನಾಲ್ಕು ಸಾವಿರಗಳ ಚೆಕ್ ಈ ದಿನ ಕ್ಯಾಷ್‌ಗೆ ಬಂದಿತ್ತು. ಆ ಚಕ್‌ನ ಮೇಲೆ ನಲವತ್ತು ಸಾವಿರ ರೂಪಾಯಿಗಳನ್ನು ಕೊಟ್ಟಹಾಗೆ ಕ್ಯಾಷ್ ಲೆಡ್ಜರಿ

ನಲ್ಲಿ ಲೆಕ್ಕವಿದೆ. ಇದರಿಂದಲೇ ಮೂವತ್ತಾರು ಸಾವಿರ ರೂಪಾಯಿಗಳು ಖೋತಾ ಬಂದುದು."

ಇಬ್ರಾಹಿಂ ಸಾಹೇಬರು "ಕ್ಯಾಷ್‌ನ ಮೇಲೆ ಕುಳಿತಿದ್ದವರು ಯಾರು?" ಎಂದು ಕೇಳಿದರು.

"ಪ್ರಕಾಶ್ ಎಂಬುವವರು ಕುಳಿತಿದ್ದರು. ಅದರಿಂದ ಈ ಖೋತಾಗೆ ಅವರೇ ಜವಾಬ್ದಾರರೆಂದು ತೀರ್ಮಾನಿಸಿದ್ದೇವೆ."

ಚಲಂ "ನಾಲ್ಕು ಸಾವಿರ ರೂಪಾಯಿಗಳ ಚೆಕ್‌ನ ಮೇಲೆ ಪ್ರಕಾಶರು ನಲವತ್ತು ಸಾವಿರ ರೂಪಾಯಿಗಳನ್ನು ಹೇಗೆ ಕೊಟ್ಟರು? ಇದು ಬಹಳ ಆಶ್ಚರ್ಯಕರವಾಗಿದೆಯಲ್ಲಾ." ಎಂದ.

ಶ್ರೀಧರನು "ನಮಗೂ ಅದೇ ಗೊತ್ತಾಗದಿರುವ ಅಂಶ, ಸಾರ್. ಮಹಮದಾಲಿಯವರು ಘಾಜೀಖಾ ಈರಾನಿ ಎಂಬುವವರಿಗೆ ನಾಲ್ಕು ಸಾವಿರ ರೂಪಾಯಿಗಳಿಗೆ ಚಕ್ ಕೊಟ್ಟಿದ್ದಾರೆ. ನಾಲ್ಕು ಸಾವಿರಗಳು ಮಾತ್ರ. ಎಂದು ಸ್ಪಷ್ಟವಾಗ ಇಂಗ್ಲಿಷ್‌ನಲ್ಲಿ ಅದರ ಮೇಲೆ ಬರೆದಿದೆ. ಮೊದಲು ಈ ಚಕ್ ಲೆಡ್ಜರ್ ಕ್ಲಾರ್ಕ್ ಬಳಿ ಹೋಯಿತು. ಅವರು ಮಹಮದಾಲಿಯವರ ಖಾತೆಯಲ್ಲಿ ನಾಲ್ಕು ಸಾವಿರಗಳನ್ನು ಖರ್ಚುಹಾಕಿ ಮ್ಯಾನೇಜರಿಗೆ ಕಳಿಸಿ ಕಳಿಸಿದ್ದಾರೆ. ಮ್ಯಾನೇಜರು ತಮ್ಮ ರಿಜಿಸ್ಟರಿನಲ್ಲಿ ಅದರ ವಿವರಗಳನ್ನು ಬರೆದುಕೊಂಡು ನಾಲ್ಕು ಸಾವಿರಗಳಿಗೆ ಚಕ್ ಪ್ಯಾಸು ಮಾಡಿದ್ದಾರೆ. ಆದರೆ ಪ್ರಕಾಶರು ಮಾತ್ರ ಇದರ ಮೇಲೆ ನಲವತ್ತು ಸಾವಿರಗಳನ್ನು ಕೊಟ್ಟಿರುವಂತೆ ಬರೆದಿದ್ದಾರೆ. ಕ್ಯಾಷ್ ರಿಜಸ್ಟರಿನಲ್ಲಿ ಹಾಗೆ ಬರೆದಿರುವುದಲ್ಲದೇ ಚಕ್‌ನ ಹಿಂದೆಯೂ ನೂರು, ನಾನೂರು ಎಂದು ಬರೆದಿದೆ. ಅಂದರೆ ನೂರು ರೂಪಾಯಿಗಳ ನಾನೂರು ನೋಟುಗಳನ್ನು ಕೊಟ್ಟರು ಎಂದು ಅದಕ್ಕೆ ಅರ್ಥ ವಾಗುತ್ತದೆ." ಎಂದ.

ಚಲಂ ಆ ರಿಜಿಸ್ಟರುಗಳನ್ನೂ ಮತ್ತು ಚಕ್ಕನ್ನೂ ನೋಡಲಪೇಕ್ಷಿಸಲು ಅವುಗಳನ್ನು ತೆಗೆದು ತೋರಿಸಲಾಯಿತು. ಅವುಗಳೆಲ್ಲಾ ಶ್ರೀಧರ್ ಹೇಳಿ ದಂತೆಯೇ ಇದ್ದವು.

"ಯಾಕೆ ಹೀಗಾಯಿತೆಂಬುದನ್ನು ನೀವು ಪ್ರಕಾಶರೊಂದಿಗೆ ಕೇಳಿದಿರೋ?"

ಚಲಂ ಕೇಳಿದ ಪ್ರಶ್ನೆಗೆ ಶ್ರೀಧರ "ಅವರು ಎರಡು ಗಂಟೆಗೇ ಬ್ಯಾಂಕ್‌ದಿಂದ ಹೊರಟುಹೋದರು. ಅದರಿಂದ ಅವರನ್ನು ಕೇಳಲು ಅವಕಾಶವಾಗಲಿಲ್ಲ." ಎಂದು ಹೇಳಿದ.

ಇಬ್ರಾಹಿಂ ಸಾಹೇಬರು "ನೀವುಗಳೆಲ್ಲರೂ ಇದ್ದುಕೊಂಡು ಪ್ರಕಾಶರು ಮಾತ್ರ ಹೊರಟು ಹೋಗಿರುವುದು ಆಶ್ಚರ್ಯವಾಗುತ್ತದೆ. ಪ್ರತಿದಿನದ ಲೆಕ್ಕಗಳನ್ನು ಮುಗಿಸಿಕೊಂಡು ಬ್ಯಾಂಕ್ ನೌಕರರು ಹೊರಗೆ ಹೋಗುತ್ತಾರೆಂಬುದನ್ನು ಕೇಳಿ ಬಲ್ಲೆ ನಾನು ತಿಳಿದುಕೊಂಡಿರುವಂತೆ ಎಲ್ಲರಿಗಿಂತಲೂ ಕ್ಯಾಷಿಯರ್ ಜವಾಬ್ದಾರಿಯು ಮುಖ್ಯ. ಕಡೆಯುವರೆವಿಪೂ ಇದ್ದು ಲೆಕ್ಕಗಳಿಗೆ ಸಮಜಾಯಿಷಿ ಕೊಟ್ಟು ಹೋಗುವುದು ಅವರ ಕರ್ತವ್ಯವಲ್ಲವೇ? ಇರಲಿ, ಅವರು ಎಲ್ಲಿ ಹೋದರು? ಹೋಗುವಾಗ ಏನು ಹೇಳಿ ಹೋದರು?" ಎಂದರು.

ಶ್ರೀಧರ ಮಾತನಾಡಲಿಲ್ಲ. ಆದರೆ ಸಾಹೇಬರು ಒತ್ತಾಯ ಮಾಡಿದ ನಂತರ ಅವನು ಮಾತನಾಡಬೇಕಾಯಿತು.

"ಪ್ರಕಾಶರು ನಮ್ಮಂತೆ ಬ್ಯಾಂಕ್ ನೌಕರರಲ್ಲ. ಅವರು ನಮ್ಮ ಬ್ಯಾಂಕಿನ ಡೈರೆಕ್ಟರ್ ರಮಾನಂದ ಪೈರವರ ಮಕ್ಕಳು. ಬ್ಯಾಂಕಿಂಗ್‌ನ ಆಡಳಿತವನ್ನು ತಿಳಿದುಕೊಳ್ಳಲು ಪ್ರತಿಯೊಂದು ಬಾಬಿನಲ್ಲಿಯೂ ಕೆಲಕೆಲ ದಿನಗಳು ಕೆಲಸ ಮಾಡುತ್ತಿದ್ದಾಗೆ. ಹಾಗೆ ಈಗ ಕೆಲವು ದಿನಗಳಿಂದಲೂ ಕ್ಯಾಷ್ ನೋಡಿಕೊಳ್ಳುತ್ತಿದ್ದಾರೆ."

"ಓಹೋ! ಸರಿ. ಆದರೂ ಒಬ್ಬರು ಒಂದು ಕೆಲಸದ ಮೇಲಿದ್ದಾಗ ಆ ಕೆಲಸ ಮಾಡುವವರು ಹೇಗೆ ನಡೆದುಕೊಳ್ಳಬೇಕೋ ಹಾಗೇ ನಡೆದುಕೊಳ್ಳಬೇಕು. ಅವರು ಎರಡು ಗಂಟೆಗೇ ಹೊರಡಲು ಕಾರಣವೇನು?"

ಆನಂದರಾಯರು ನನ್ನನ್ನು ಕೇಳಿಕೊಂಡು ಅವರು ಹೋದರು." ಎಂದು ಹೇಳಿದರು.

ಬ್ಯಾಂಕು ನೌಕರರೂ, ಮ್ಯಾನೇಜರೂ ಯಾವುದೋ ವಿಷಯವನ್ನು ಹೇಳಲು ಸಂಕೋಚಪಡುತ್ತಿದ್ದಾರೆಂದು ಚಲಂಗೆ ಸಂದೇಹ ಬಂದಿತು.

ಅವನು "ನೀವು ಯಾವುದೋ ವಿಷಯ ಹೇಳಲು ಸಂಕೋಚಪಡುತ್ತಿದ್ದೀರೆಂದು ತೋರುತ್ತದೆ. ಅವೆಲ್ಲಾ ಪ್ರಯೋಜನವಿಲ್ಲ. ಪ್ರಕಾಶ್

ಎಲ್ಲಿ ಹೋದರು,, ಯಾಕೆ ಹೋದರು ? ಎಂಬುದು ನಿಮಗೆಲ್ಲರಿಗೂ ಗೊತ್ತಿದೆ. ಅವನ್ನು ಮುಚ್ಚಿಡುವುದು ಸ್ವಲ್ಪವೂ ಸರಿಯಲ್ಲ. ಅದರಿಂದ ನಿಮಗಾಗಲೀ, ಪ್ರಕಾಶರಿಗಾಗಲೀ ಒಳ್ಳೆಯದಾಗುವುದಿಲ್ಲ. ಇರುವ ವಿಷಯ ಹೇಳಿರಿ." ಎಂದ.

ಶ್ರೀಧರನು ಮ್ಯಾನೇಜರ ಮುಖ ನೋಡಿದ. ಅವರು ಹೇಳಬಹುದೆಂದು ತಮ್ಮ ಮುಖಭಾವದಲ್ಲಿಯೇ ತೋರಲು ಹೇಳಿದ.

"ಅದು ಅವರಿಗೂ ಮತ್ತು ನಮಗೂ ಗೌರವ ತರುವಂತಿಲ್ಲ ಸಾರ್. ಈಚೆಗೆ ಬೆಂಗಳೂರಿನಲ್ಲಿ ರೇಸಿಂಗ್ ಸೀರ್ಸ್ ಆರಂಭವಾದ ಮೇಲೆ ಅವರ ನಡವಳಿಕೆಗಳೇ ಬದಲಾಯಿಸಲ್ಪಟ್ಟಿವೆ. ಅವರು ಯಾವಾಗಲೂ ಕುದುರೆ ಜೂಜಿಗೆ ಸಂಬಂಧಪಟ್ಟ ಜನಗಳೊಂದಿಗೆ ತಿರುಗುತ್ತಿರುತ್ತಾರೆ. ಬ್ಯಾಂಕಿನಲ್ಲಿರುವ ಕಾಲವನ್ನು ಬಿಟ್ಟರೆ ಯಾವಾಗಲೂ ಅವರ ಜೊತೆಯಲ್ಲಿ ಕುದುರೆ ಮಾಲೀಕರೂ ಮತ್ತು ಜಾಕಿಗಳೂ ಇರುತ್ತಾರೆ. ಪ್ರತಿಯೊಂದು ದಿನವೂ ರೇಸ್ ಕೋರ್ಸ್‌ನಲ್ಲಿರುತ್ತಾರೆ. ಬುಧವಾರದ ದಿನ ರೇಸ್ ಇದ್ದರೆ ಯಾವುದಾದರೂ ಕಾರಣದಿಂದ ರಜಾ ತೆಗೆದುಕೊಳ್ಳುತ್ತಾರೆ. ಶನಿವಾರಗಳಲ್ಲಿ ಎರಡು ಗಂಟೆಗೇ ಕೇಳಿಕೊಂಡು ಹೊರಟು ಹೋಗುತ್ತಾರೆ. ಯಾರೋ ರೇಸ್ ಕುದುರೆಯ ಮಾಲೀಕನ ಮಗಳೆಂದು ಕಾಣುತ್ತದೆ. ಈ ದಿನ ಎರಡು ಗಂಟೆಯ ಸಮಯದಲ್ಲಿ ಬಂದು ಪ್ರಕಾಶರನ್ನು ಕರೆದುಕೊಂಡು ಹೋದಳು. ಈ ದಿನ ಮಹಮುದಾಲಿಯವರ ಚೆಕ್ ಕ್ಯಾಷ್ ಮಾಡಲು ಬಂದಿದ್ದ ಫೌಜೀಖಾ಼ ಈರಾನಿಯೂ ಸಹ ರೇಸ್‌ಗೆ ಸಂಬಂಧಪಟ್ಟವನ ಹಾಗೆಯೇ ಕಂಡುಬರುತ್ತಿದ್ದ. ನಮಗೆ ತೋರುವುದೇನೆಂದರೆ...."

"ಯಾಕೆ ನಿಲ್ಲಿಸುತ್ತೀರಿ. ನಿಮಗೆ ತೋರುವುದೇನು – ಅದನ್ನೂ ಹೇಳಿರಿ...."

"ನಮಗೆ ತೋರುವುದೇನೆಂದರೆ - ಫೌಜೀಖಾ಼ ಈರಾನಿಯು ರೇಸ್ ವ್ಯವಹಾರಕ್ಕೆ ಸಂಬಂಧಪಟ್ಟವನು. ಅವನೊಂದಿಗೆ ಪ್ರಕಾಶರು ನಲವತ್ತು ಸಾವಿರ ರೂಪಾಯಿ ಕಳುಹಿಸಿದರೋ ಅಥವಾ ಅವನಿಗೆ ಕೊಡಬೇಕಾದಷ್ಟನ್ನು ಮಾತ್ರ ಕೊಟ್ಟು ಉಳಿದ ಮೂವತ್ತಾರು ಸಾವಿರ ರೂಪಾಯಿಗಳನ್ನು ತಾವೇ ತೆಗೆದುಕೊಂಡು ಹೋದರೋ ಎರಡರಲ್ಲಿ ಯಾವುದಾದರೂ ಆಗಿರಬೇಕು."

ಚಲಂಗೆ ಈ ಪ್ರಕರಣವೇ ಬಹಳ ಚೋದ್ಯವಾಗಿ ಕಂಡಿತು. ಮೂರು ನಾಲ್ಕು ಬಾರಿ ಅವನು ಪ್ರಕಾಶನನ್ನು ನೋಡಿದ್ದ. ಅವನು ಮಾತನಾಡುತ್ತಿದ್ದ ರೀತಿ, ಅವನ ನಡವಳಿಕೆಗಳನ್ನು ಗಮನಿಸಿದ್ದರಲ್ಲಿ ಈ ಬಗೆಯ ಕೆಲಸಗಳನ್ನು ಮಾಡುವವನಲ್ಲವೆಂದು ತೋರುತ್ತಿತ್ತು. ಇದರಲ್ಲಿ ಇನ್ನೂ ಒಂದು ವಿಷಯವಿತ್ತು. ಮಹಮುದಾಲಿಯ ಚೆಕ್ಕು ನಾಲ್ಕು ಸಾವಿರಗಳದೆಂಬುದು ಸ್ಪಷ್ಟವಾಗಿದೆ. ಇಂತಹ ಚೆಕ್‌ಗೆ ನಲವತ್ತು ಸಾವಿರಗಳನ್ನು ಕೊಟ್ಟುದಾಗಿ ಯಾವ ಮೂರ್ಖನಾದರೂ ಲೆಕ್ಕ ಬರೆಯುತ್ತಾನೆಯೇ? ಏನೂ ಲೆಕ್ಕವನ್ನೇ ಬರೆಯದೇ ಒಬ್ಬ ಮನುಷ್ಯ ಹಣ ತೆಗೆದುಕೊಂಡು ಹೋಗಿರುವುದು ಚಲಂಗೆ ಸಂಭವನೀಯವಾಗಿ ಕಂಡುಬರುತ್ತಿದ್ದಿತೇ ವಿನಾ ಈ ರೀತಿ ಸ್ಪಷ್ಟವಾಗಿ ಕಂಡುರುತ್ತಿರುವಂತಹ ರೀತಿಯಲ್ಲಿ ಸುಳ್ಳು ಲೆಕ್ಕ ಬರೆಯುವುದು ಆಶ್ಚರ್ಯವಾಗಿ ಕಂಡುಬಂದಿತು. ಈ ಮೂವತ್ತಾರು ಸಾವಿರ ರೂಪಾಯಿಗಳ ಛಪಾವಣೆಯು ಹೇಗೆ ನಡೆದಿರಬೇಕೆಂದು ಮನಸ್ಸಿನಲ್ಲಿಯೇ ಯೋಚಿಸುತ್ತಿದ್ದ.

"ನೀವು ಹೇಳಿದ ರೀತಿಯಲ್ಲಿಯೇ ನಡೆದಿದೆ. ಅದರಲ್ಲಿ ಸಂದೇಹವೇ ಇಲ್ಲ" ಎಂದು ಹೇಳಿದ ಇಬ್ರಾಹಿಂ ಸಾಹೇಬರು "ಈ ಹಣ ಛಪಾವಣೆಯಾಯಿತೆಂಬುದು ನಿಮಗೆ ಎಷ್ಟು ಹೊತ್ತಿಗೆ ತಿಳಿಯಿತು?" ಎಂದರು.

ಶ್ರೀಧರನು "ಐದು ಗಂಟೆಗಳಿಗೆ ಗೊತ್ತಾಯಿತು" ಎಂದ

"ಹಾಗಾದರೆ ಪೋಲೀಸು ಕಂಪ್ಲೈಂಟು ಕೊಡಲು ಯಾಕೆ ಇಷ್ಟು ತಡಮಾಡಿದಿರಿ?"

ಆ ಪ್ರಶ್ನೆಗೆ ಆನಂದರಾಯರು ಉತ್ತರ ಹೇಳಿದರು.

"ಹೀಗಾಯಿತೆಂಬುದು ಗೊತ್ತಾದ ಕೂಡಲ್ಲೇ ನಿಮಗೆ ತಿಳಿಸುವುದು ನಮ್ಮ ಕರ್ತವ್ಯವಾಗಿದ್ದಿತು. ಆದರೆ ಇದರಲ್ಲಿ ಒಂದು ವಿಷಯವಾಯಿತು. ಛಪಾವಣೆಯಾಗಿರುವುದು ಸ್ವಲ್ಪ ಹಣವಲ್ಲ. ಮೂವತ್ತಾರು ಸಾವಿದ ರೂಪಾಯಿಗಳು. ನಾವು ಪೋಲೀಸಿಗೆ ಬಂದುಬಿಟ್ಟ ಮೇಲೆ ಸ್ವತಂತ್ರಿಸಿ ಏನೂ ಮಾಡುವುದಕ್ಕೆ ಆಗುವುದಿಲ್ಲ. ಆದರಿಂದ ಪ್ರಕಾಶರ ತಂದೆಯವರಾದ ರಮಾನಂದಪೈಗಳ ಜೊತೆಯಲ್ಲಿ ಮಾತನಾಡೋಣ ಎಂದುಕೊಂಡೆವು. ಅವರೇನಾದರೂ ತಕ್ಷಣ ಹಣವನ್ನು ತಂದುಕೊಟ್ಟರೆ ಜಮಾ ಮಾಡಿಕೊಳ್ಳುವುದು,

ಇನ್ನು ಮುಂದೆ ಪ್ರಕಾಶರನ್ನು ಬ್ಯಾಂಕಿಗೆ ಬರಬೇಡಿರೆಂದು ಖಚಿತವಾಗಿ ಹೇಳಿಬಿಡುವುದು. ಇಷ್ಟು ಮಾಡಿ ಹೆಡ್ಡಾಫೀಸಿಗೆ ವರದಿ ಮಾಡಿಬಿಡುವುದು. ಅವರು ಹೇಗೆಯಾದರೂ ಮಾಡಿಕೊಳ್ಳಲಿ – ಎಂದು ಯೋಚಿಸಿದೆವು. ರಮಾನಂದಪ್ಪೈಗಳಿಗಾಗಿ ಹೇಳಿಕಳುಹಿಸಿದೆ ಅವರು ಊರಿನಲ್ಲಿರಲಿಲ್ಲ. ಅನಂತರ ಉಡುಪಿ ಹೆಡ್ಡಾಫೀಸಿಗೆ ಫೋನ್ ಮಾಡಿದೆ. ಜನರಲ್ ಮ್ಯಾನೇಜರು ಪೋಲೀಸಿಗೆ ಕಂಪ್ಲೈಂಟ್ ಕೊಡಬಹುದೆಂದು ಹೇಳಿದರು. ಇಷ್ಟು ಮಾಡುವ ವೇಳೆಗೆ ಹೊತ್ತಾಗಿಹೋಯಿತು"

ಅವರು ಹೇಳಿದ್ದು ಇಬ್ರಾಹಿಂ ಸಾಹೇಬರಿಗೆ ಸೂಕ್ತವಾಗಿಯೇ ತೋರಿತು. ಅನಂತರ ಕಂಪ್ಲೈಂಟು ಬರೆಸಿ ತೆಗೆದುಕೊಂಡರು.

ಅದನ್ನು ತೆಗೆದು ಜೇಬಿನಲ್ಲಿಟ್ಟುಕೊಂಡು "ಸರಿ. ಇನ್ನು ಮುಂದೆ ನಾನು ನೋಡಿಕೊಳ್ಳುತ್ತೇನೆ. ನಾಳೆ ಬೆಳಗಾಗ ಹತ್ತು ಗಂಟೆಯ ವೇಳೆಗೆ ನೀವು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಬಂದರೆ ವಿವರ ತಿಳಿಸುತ್ತೇನೆ" ಎಂದು "ಇನ್ನೇನು ಚಲಂ ಸ್ವಾಮಿ. ನಾವು ದೊರಡೋಣವೇ ?" ಎಂದರು.

ಚಲಮ್ಮು "ಒಂದು ನಿಮಿಷ ಸಾಹೇಬರೇ, ನಾನು ಒಂದೆರಡು ಸಣ್ಣ ಅಂಶಗಳನ್ನು ಕೇಳಿ ತಿಳಿದುಕೊಳ್ಳುವುದು ನಿಮಗಾಗಲೀ ಅಥವಾ ಈ ಬ್ಯಾಂಕಿನವರಿಗಾಗಲೀ ಅಭ್ಯಂತರವಿಲ್ಲವಷ್ಟೇ" ಎಂದು ಪ್ರಶ್ನಿಸಿದ.

ಸಾಹೇಬರೂ, ಬ್ಯಾಂಕಿನ ಮ್ಯಾನೇಜರರೂ ಏನು ವಿಷಯಗಳನ್ನು ಬೇಕಾದರೂ ಕೇಳಬಹುದೆಂದು ಒಪ್ಪಿಕೊಂಡರು.

"ಘಾಜೀಖಾನ್ ಈರಾನಿ ಎಂಬಾತನು ಈ ದಿನ ಬ್ಯಾಂಕಿಗೆ ಬಂದಿದ್ದನೆಂದು ಹೇಳಿದಿರಲ್ಲಾ. ಅವನು ನೋಡುವುದಕ್ಕೆ ಹೇಗಿದ್ದ ?"

ಶ್ರೀಧರನು "ಆತ ಈರಾನ್ ದೇಶದವನಂತೆ ಇದ್ದ. ಇನ್ನೂ ತರುಣ. ಆದರೂ ಗಡ್ಡ ಮೀಸೆಗಳು ಕಂದು ಬಣ್ಣವಾಗಿದ್ದವು. ತಲೆಯ ಮೇಲೆ ಬಟ್ಟೆಯನ್ನು ಹಾಕಿಕೊಂಡು ಕಬ್ಬಿಣದ ಬಳೆಯಿಂದ ಅದನ್ನು ಭದ್ರಪಡಿಸಿದ್ದ. ಅವನು ಬೂದಿಯ ಬಣ್ಣದ ಸೂಟು ಹಾಕಿಕೊಂಡಿದ್ದ. ಅದು ಒಳ್ಳೆಯ ಸರ್ಜ್ ಬಟ್ಟೆಯಲ್ಲಿ ಹೊಲೆದಿದ್ದಿತಾದರೂ ಎಚ್ಚರಿಕೆಯಿಂದ ಉಪಯೋಗಿಸದೆ ಇದ್ದುದರಿಂದ ಅಂದಗೆಟ್ಟಿದ್ದಿತು. ಅವನು ಹಾಕಿಕೊಂಡಿದ್ದ ಬೂಡ್ಸು ಸಹ ಅದೇ ರೀತಿಯಗಿದ್ದಿತು."

"ಬೂಡ್ಸು ಅದೇ ರೀತಿಯಾಗಿದ್ದಿತು ಎಂದರೆ ?"

"ಅದನ್ನು ಸರಿಯಾಗಿ ಒರೆಸಿ ಬಣ್ಣ ಹಾಕಿರಲಿಲ್ಲ. ಅದನ್ನು ಸಿಕ್ಕಾಪಟ್ಟೆ ತುಳಿದು ಆಕಾರ ಕೆಟ್ಟಿದ್ದಿತು."

"ಅವನು ಪ್ರಕಾಶರೊಡನೆ ಮಾತನಾಡುತ್ತಿದ್ದುದಾಗಿ ಹೇಳಿದಿರಲ್ಲಾ. ಅವರಿಬ್ಬರು ಯಾವ ವಿಷಯವಾಗಿ ಮಾತನಾಡಿದರೆಂಬುದನ್ನು ಹೇಳಬಲ್ಲಿರಾ ?"

"ಇಲ್ಲ. ನಾನು ಅವರಿಗೆ ಸ್ವಲ್ಪ ದೂರವಾಗಿದ್ದೆ. ಆದರಿಂದ ಅವರ ಮಾತು ಕಿವಿಗೆ ಬೀಳಲಿಲ್ಲ. ಅದೂ ಅಲ್ಲದೇ ಆ ಸಮಯದಲ್ಲಿ ಅವರ ಮಾತುಗಳನ್ನು ಕೇಳಬೇಕೆಂಬ ಆಸಕ್ತಿ ನನಗಿರಲಿಲ್ಲ."

ಮಿ|| ಶ್ರೀಧರ್. ನೀವು ಈರಾನಿಯನ್ನು ಸೂಕ್ಷ್ಮವಾಗಿ ಗಮನಿಸಿದ್ದೀರಿ. ಅದು ಒಳ್ಳೆಯದೇ ಆಯಿತು. ಅವನು ಧರಿಸಿದ್ದ ಷೂನ ಆಕಾರ ಸಹ ಕೆಟ್ಟಿದ್ದಿತೆಂದು ಹೇಳುತ್ತೀರಲ್ಲಾ. ನೀವು ಅವನನ್ನು ಅಷ್ಟು ಸೂಕ್ಷ್ಮವಾಗಿ ಗಮನಿಸಲು ಕಾರಣವೇನು ?"

"ಅದಕ್ಕೆ ವಿಶೇಷ ಕಾರಣವೇನೂ ಇಲ್ಲ. ಅವನ ವೇಷಭೂಷಣಗಳೇ ಕಾರಣ. ಬೆಂಗಳೂರಿನಲ್ಲಿ ರೇಸ್ ಸೀಸರ್ ಆರಂಭವಾಗಿರುವ ಕಾಲದಲ್ಲಿ ಇಂತಹ ಜನಗಳು ಅಲ್ಲಲ್ಲಿ ಕಣ್ಣಿಗೆ ಬೀಳುತ್ತಾರೆ. ಆದರೂ ಅಂತಹ ವೇಷಭೂಷಣಗಳನ್ನು ಧರಿಸಿದವರು ಎದುರಿಗೆ ಬಂದಾಗ ಅವರನ್ನು ನೋಡುವ ಹಾಗಾಗುತ್ತದೆಂದೇ ನನ್ನ ಭಾವನೆ. ನಾನೊಬ್ಬನೇ ಅಲ್ಲ. ಅವನು ಒಳಗೆ ಬಂದಾಗ ನಮ್ಮ ಬ್ಯಾಂಕ್ ನೌಕರರೆಲ್ಲರೂ ಅವನ ಕಡೆ ನೋಡಿದರು"

"ಪ್ರಕಾಶರನ್ನು ಕರೆದುಕೊಂಡು ಹೋದ ತರುಣಿಯನ್ನೂ ಗಮನಿಸಿದಿರೋ ?"

ಶ್ರೀಧರನು ಮುಗುಳು ನಗೆಯನ್ನು ತಂದುಕೊಂಡು "ಅವಳೂ ಸಹ ಗಮನಿಸುವಂತೆಯೇ ಇದ್ದಳು. ಒಳಗೆ ಬಂದವಳು ಹೊರಗೆ ಹೊರಟು ಹೋಗುವವರೆವಿಗೆ ನಾನೊಬ್ಬನೇ ಏಕೆ, ಎಲ್ಲರೂ ಅವಳ ಕಡೆಗೆ ನೋಡುತ್ತಿದ್ದರೆಂದೇ ಹೇಳಬೇಕು. ಅವಳ ಹಿಂದೆಯೇ ಬಾಗಿಲವರೆವಿಗೆ ಹೋದ

ನಮ್ಮ ಜವಾನ ಒಳಗೆ ಬಂದು ಆಕೆ ಕೆಂಪು ಬಣ್ಣದ ಸ್ಪೋರ್ಟ್ಸ್ ಕಾರಿನಲ್ಲಿ ಬಂದಿದ್ದಳೆಂದು ಸಹ ಹೇಳಿದ." ಎಂದ.

"ಆಕೆ ನೋಡುವುದಕ್ಕೆ ಹೇಗಿದ್ದರೆಂದು ಹೇಳಿ ?"

"ಏನು ಹೇಳಲಿ? ಐದು ಅಡಿಗಳಿಗೆ ಕಮ್ಮಿಯಿಲ್ಲದಷ್ಟು ಉದ್ದವಾಗಿದ್ದರು. ನೀಳವಾದ ಕೈಕಾಲುಗಳು, ಬಾದಾಮಿ ಆಕಾರದ ಅಗಲವಾದ ಮುಖ. ತಲೆಗೂದಲನ್ನು ಕತ್ತರಿಸಿ ಬಾಬ್ ಮಾಡಿಕೊಂಡಿದ್ದರು. ಆದರೆ ಅವು ಗುಂಗುರು ಗುಂಗುರಾಗಿ ಹಾರಾಡುತ್ತಿದ್ದವು. ಕಣ್ಣುಗಳಿಗೆ ಕೂಲಿಂಗ್ ಗ್ಲಾಸನ್ನೂ, ಕಿವಿಗಳಿಗೆ ಚಿನ್ನದ ಬಳೆಗಳನ್ನೂ ಧರಿಸಿದ್ದರು. ಕೆನೆ ಬಣ್ಣದ ರವಿಕೆ ಹಾಕಿಕೊಂಡು ರೋಜಾ ಬಣ್ಣದ ಸೀರೆಯನ್ನು ಉಟ್ಟಿದ್ದರು. ಕಾಲುಗಳಲ್ಲಿ ಚಿತ್ತಾರದ ಕೆಲಸ ಮಾಡಿದ್ದ ಪಾದರಕ್ಷೆಗಳನ್ನು ಧರಿಸಿ, ಕೈಯಲ್ಲಿ ವ್ಯಾನಿಟೀ ಬ್ಯಾಗ್ ಹಿಡಿದಿದ್ದರು."

ಚಲಂ ನಗುತ್ತಾ "ನೀವೊಬ್ಬ ಕವಿಗಳು." ಎಂದ.

"ನಾನೆಲ್ಲಿಯ ಕವಿ ಸಾರ್. ಕವಿಯಾಗಿದ್ದರೆ ಕತೆಗಳನ್ನು ಬರೆಯುತ್ತಿದ್ದೆ. ಬ್ಯಾಂಕಿನಲ್ಲಿ ಲೆಕ್ಕಗಳನ್ನು ಬರೆಯುವ ಕೆಲಸವೇಕೆ ಮಾಡುತ್ತಿದ್ದೆ ?"

"ಅಂತೂ ನೀವು ಹೆಂಗಸರನ್ನು ಬಹಳ ಚೆನ್ನಾಗಿ ವರ್ಣಿಸುತ್ತೀರಿ ?"

ಅಲ್ಲಿದ್ದವರೆಲ್ಲಗೂ ಆ ಮಾತನ್ನು ಕೇಳಿ ನಕ್ಕರು.

ಚಲಂ ಎದುರಿಗಿದ್ದ ಚಕ್ ತೆಗೆದುಕೊಂಡು ತೋರಿಸಿ "ಇದರ ಹಿಂದೆ ಉರ್ದುವಿನಲ್ಲಿ ರುಜು ಮಾಡಲಾಗಿದೆ. ಪುನಃ ಇಂಗ್ಲಿಷ್‌ನಲ್ಲಿ ಘಾಜೀಖಾ ಈರಾನೀ ಎಂದು ಬರೆದಿದೆ. ಇವೆರಡನ್ನೂ ಬರೆದವನು ಈರಾ ದೇಶಸ್ಥನಂತೆ ಕಂಡುಬರುತ್ತಿದ್ದ ಮನುಷ್ಯನೋ ?" ಎಂದ.

ಅನಂತರಾಯರು "ಹೌದು ಸಾರ್. ಅದೊಂದು ಕೆಲಸವಾಯಿತು. ನನ್ನ ಬಳಿ ಚಕ್ ಬರುವಾಗ ಅದರ ಹಿಂದೆ ಉರ್ದುವಿನಲ್ಲಿಮಾತ್ರ ರುಜುವಿತ್ತು. ಕ್ಯಾಷ್‌ಗೆ ಕಳಿಸುವ ಮೊದಲು ಆ ಮನುಷ್ಯನಿಗೆ ಇಂಗ್ಲಿಷ್ ಬರುವ ಹಾಗಿದ್ದರೆ ಅದರಲ್ಲಿಯೂ ರುಜು ಮಾಡಿಸು – ಎಂದು ಹೇಳಿದೆ. ಅನಂತರ ಆತನೇ ಇಂಗ್ಲಿಷ್‌ನಲ್ಲಿ ರುಜು ಮಾಲಿದನೆಂದು ತೋರುತ್ತದೆ." ಎಂದರು.

ಚಕ್ ಈರಾನಿಯಿಂದ ರುಜು ಮಾಡಿಸಿದ ಜವಾನನರ ಹೆಸರು ಕೆಂಪಯ್ಯ. ಅವನೂ ಅಲ್ಲಿಯೇ ಇದ್ದ. ಚಲಂ ಪ್ರಶ್ನಿಸಲು ಅವನು ಹೇಳಿದ.

"ಆಗಾಗ ಮ್ಯಾನೇಜರ ಕೋಣೆಗೆ ಬಂದು ಅವರ ಮೇಜದ ಮೇಲೆ ಟ್ರೇಯಲ್ಲಿರುವ ಚಕ್‌ಗಳನ್ನು ತೆಗೆದುಕೊಂಡು ಹೋಗಿ ಕ್ಯಾಷ್‌ನಲ್ಲಿ ಕೊಡುತ್ತೇನೆ. ಅದೇ ರೀತಿ ಈ ದಿನ ಮಧ್ಯಾಹ್ನ ಬಂದು ತೆಗೆದುಕೊಂಡು ಹೋಗುವಾಗ ಮ್ಯಾನೇಜರು ನನ್ನ ಕೈಗೆ ಬಂದು ಚಕ್ ಕೊಟ್ಟು, ಆತನಿಗೆ ಇಂಗ್ಲಿಷ್‌ನಲ್ಲಿ ರುಜು ಮಾಡಲು ಬರುವುದಾದರೆ ಮಾಡುವಂತೆ ಹೇಳು, ಎಂದರು. ನಾನು ಹೊರಗೆ ಬಂದಾಗ ಆತ ಬೆಂಚಿನ ಮೇಲೆ ಕುಳಿತುಕೊಂಡಿದ್ದರು. ನಾನು ಕ್ಯಾಷ್ ಕೌಂಟರಿನ ಹಲಗೆಯ ಮೇಲೆ ಚಕ್ಕನ್ನಿಟ್ಟು ಇಂಗ್ಲಿಷ್‌ನಲ್ಲಿ ರುಜು ಮಾಡಬೇಕೆಂದು ಹೇಳಿದೆ. ಅವರು ರುಜು ಮಾಡಲು ಬಂದರು. ಆ ವೇಳೆಗೆ ಗಾಳಿ ಬಂದು ಚಕ್ ಕೆಳಗೆ ಬಿದ್ದಿತು. ಅವರೇ ಬಗ್ಗಿ ಚಕ್ ತೆಗೆದುಕೊಂಡು ರುಜು ಮಾಡಿದರು. ನಾನು ಚಕ್ ಕ್ಯಾಷ್ ಕೌಂಟರಿನೊಳಗೆ ಹಾಕಿಬಿಟ್ಟು ನನ್ನ ಕೆಲಸಕ್ಕೆ ಹೊರಟು ಹೋದೆ."

ಕುಪ್ಪುಸ್ವಾಮಿಯು ತಟ್ಟನೆ "ಗಾಳಿಗೆ ಚಕ್ ಕೆಳಗೆ ಬಿದ್ದಿತೆಂದು ಕೆಂಪಯ್ಯ ಹೇಳುತ್ತಾನೆಯಲ್ಲಾ. ಬಗ್ಗಿ ಅದನ್ನು ತಗಯುವಷ್ಟರಲ್ಲಿ ಈರಾನೀ ಚಕ್ಕನ್ನೇನಾದರೂ ಬದಲಾಯಿಸಿದನೋ ?" ಎಂದ.

ಚಲಮ್ಮು "ಕುಪ್ಪುಸ್ವಾಮಿ, ಹುಡುಗನಂತೆ ಮಾತನಾಡಬೇಡ. ಮಾತನಾಡುವ ಮೊದಲು ಸ್ವಲ್ಪ ಯೋಚನೆ ಮಾಡು. ನೀನು ಸಂದೇಹ ಪಡುವಂತೆ ಈರಾನಿಯು ಚಕ್ ಬದಲಾಯಿಸುವುದು ಸಾಧ್ಯವಿಲ್ಲ. ನೋಡು, ಇದರ ಮೇಲೆ ಲೆಡ್ಜರ್ ಕ್ಲಾರ್ಕ್ ಮಾಡಿರುವ ರುಜುವಿದೆ. ಮ್ಯಾನೇಜರ್ ಪಾಸುಮಾಡಿ ರುಜು ಮಾಡಿದ್ದಾರೆ. ಬ್ಯಾಂಕಿನ ಠಸ್ಸೆಯಿದೆ. ಇವಿಷ್ಟೂ ಚಕ್ ಕ್ಯಾಷ್ ಕೌಂಟರಿನ ಬಳಿ ಹೋಗುವುದಕ್ಕೆ ಮೊದಲೇ ಆದದ್ದು. ಆದ್ದರಿಂದ ಅದು ಬದಲಾವಣೆ ಹೊಂದುವುದು ಸಾಧ್ಯವೇ ಇಲ್ಲ. ಅದರ ಮೇಲೆ ತಾನು ಯಾವ ನೋಟುಗಳನ್ನು ಕೊಟ್ಟನೆಂಬುದನ್ನು ಬರೆದು ಪ್ರಕಾಶ್ ಹಣ ಪಾವತಿಯಾಗಿದೆ ಎಂಬ ಠಸ್ಸೆ ಹೊಡೆದಿದ್ದಾನೆ." ಎಂದ.

ಅನಂತರ ಚಲಂ ಕೆಂಪಯ್ಯನನ್ನು ಕುರಿತು "ಮ್ಯಾನೇಜರು ಚಕ್‌ನ ಹಿಂದುಗಡೆ ಇಂಗ್ಲಿಷ್‌ನಲ್ಲಿ ರುಜು ಮಾಡಿಸು – ಎಂದರಲ್ಲ. ಅದು ಈರಾನಿಯ ಚಕ್ ಎಂಬುದು ನಿನಗೆ ಹೇಗೆ ಗೊತ್ತಾಯಿತು ?" ಎಂದ.

ಅವನಿಗೆ ಕೂಡಲೇ ಉತ್ತರ ಹೇಳಲು ತೋರಲಿಲ್ಲ. ಆದರೆ ಸ್ವಲ್ಪ ತಡಬಡಾಯಿಸಿ "ನಾನು ಹೊರಗೆ ಬಂದು ನೋಡಿದೆ. ಅವರು ಬೆಂಚಿನ ಮೇಲೆ ಕುಳಿತಿದ್ದರು. ಅವರದೇ ಇರಬೇಕೆಂದು ತೋರಿತು ಸಾರ್, ಕರೆದೆ. ಅವರದೇ ಅಲ್ಲದಿದ್ದರೆ ಅವರೇಕೆ ರುಜು ಮಾಡುತ್ತಿದ್ದರು ?" ಎಂದ.

ಚಲಂ ಮುಂದೆ ಯಾರನ್ನೂ ಏನೂ ಕೇಳದೇ ಇದ್ದುದರಿಂದ, ಅವನು ಕೇಳಿದ್ದು ಮುಗಿಯಿತೆಂದು ಇಬ್ರಾಹಿಂ ಸಾಹೇಬರು ಭಾವಿಸಿದರು. ಅವನು ಕೇಳಿದ ಪ್ರಶ್ನೆಗಳೂ, ಅದಕ್ಕೆ ಪಡೆದ ಉತ್ತರಗಳೂ ನಿರುಪಯುಕ್ತವೆಂದು ಅವರು ಅಂದುಕೊಂಡರು.

"ನೀವು ಕೇಳಬೇಕಾದುದೆಲ್ಲವನ್ನೂ ಕೇಳಿ ಮುಗಿಯಿತೇ ಚಲಂ ಸ್ವಾಮಿ ?"

"ಮುಗಿಯಿತು. ಈ ಚೆಕ್ ಸ್ವಲ್ಪ ನಮ್ಮ ಹತ್ತಿರವಿದ್ದರೆ ಒಳ್ಳೆಯದೆಂದು ಕಾಣುತ್ತದೆ."

ಮ್ಯಾನೇಜರಿಗೆ ಹೇಳಿ ಇಬ್ರಾಹಿಂ ಸಾಹೇಬರು ಆ ಚೆಕ್ ತೆಗೆದು ತಮ್ಮ ಬಳಿ ಇಟ್ಟುಕೊಂಡರು.

## ೭

ಇನ್ಸ್‌ಪೆಕ್ಟರೂ ಪತ್ತೇದಾರರುಗಳೂ ಟರ್ವ ಬ್ಯಾಂಕ್ ಬಿಟ್ಟು ತೆರಳುವ ವೇಳೆಗೆ ಏಳೂವರೆ ಗಂಟೆಯ ಮೇಲಾಗಿದ್ದಿತು. ಹೇಗೆ ಹೊರಡುವುದೆಂದು ಯೋಚನೆ ಮಾಡುತ್ತಿರುವ ವೇಳೆಗೆ ಅವರು ಬರುತ್ತಾ ಬಂದ ಟ್ಯಾಕ್ಸಿಯ ಡ್ರೈವರ್ ಗಾಡಿಯನ್ನು ತಂದು ನಿಲ್ಲಿಸಿ ಬಾಗಿಲು ತೆಗೆದು ಸಲಾಂ ಹೊಡೆದು ನಿಂತ.

ಇಬ್ರಾಹಿಂ ಸಾಹೇಬರು ಟ್ಯಾಕ್ಸಿಯನ್ನು ಹತ್ತುತ್ತಾ "ಬರುವವರೆಗೆ ಇರಬೇಕೆಂದು ಅವರು ನಿನಗೆ ಹೇಳಿದ್ದರೇನು ?" ಎಂದು ವಿಚಾರಿಸಿದರು.

ಟ್ಯಾಕ್ಸೀ ಡ್ರೈವರ್ ರವೂಫ್ "ಸ್ವಾಮಿಯವರು ಟ್ಯಾಕ್ಸಿಯನ್ನು ಕರೆದರೆ ಅವರಾಗಿ ಹೋಗು ಎಂದು ಹೇಳುವವರಿಗೆ ಕಾಯುತ್ತಿರುವುದು ಪದ್ಧತಿ." ಎಂದ.

ಆ ವೇಳೆಗೆ ಪತ್ತೇದಾರರು ಸಹ ಗಾಡಿಯನ್ನು ಹತ್ತಿದ್ದರು. ಟ್ಯಾಕ್ಸೀ ಮುಂದೆ ಹೊರಟಿತು.

ಸಾಹೇಬರು ಚಲಂನನ್ನು ಉದ್ದೇಶಿಸಿ "ಒಂದು ವೇಳೆ ಒಳಗೆ ಹೋದವರು ನೀವು ಸಿಕ್ಕಿಹಾಕಿಕೊಂಡರೆ ಬೆಳಗಾ[illegible] ಟ್ಯಾಕ್ಸಿಯವನು ಕಾಯುತ್ತಿರಬೇಕಾದ್ದೇ." ಎಂದು ಹೇಳಿದರು.

ಚಲಂ "ಆದರೆ ಇದುವರೆವಿಗೆ ಹಾಗೆ ಎಂದೂ ಆಗಿಲ್ಲ. ಸಿಕ್ಕಿಹಾಕಿಕೊಳ್ಳುವಂತಹ ಸ್ಥಳಕ್ಕೆ ಹೋಗುವ ಮೊದಲು ಟ್ಯಾಕ್ಸಿಯನ್ನು ವಾಪ್ಸು ಕಳಿಸುತ್ತೇನೆ." ಎಂದ.

ರಫೂಫ್ ಟ್ಯಾಕ್ಸಿಯನ್ನು ಎಲ್ಲಿಗೆ ಬಿಡಬೇಕೆಂದು ಕೇಳುತ್ತಲೇ ಮುಂದೇನು ಮಾಡಬೇಕೆಂಬ ಚರ್ಚೆ ಬಂದಿತು.

ಇಬ್ರಾಹಿಂ ಸಾಹೇಬರು ಹೇಳಿದರು.

"ಯಾವುದು ಹೇಗೆ ಬೇಕಾದರೂ ಆಗಲಿ. ನಾನು ಈ ದಿನ ರಾತ್ರಿಯೇ ಆ ಪ್ರಕಾಶನನ್ನು ಹಿಡಿಯಬೇಕು. ಬ್ಯಾಂಕ್‌ನವರು ಹೇಳುವುದರಲ್ಲಿ ಹಣ ಹೊಡೆದುಕೊಂಡು ಹೋದವನು ಅವನೇ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ದಿನ ರೇಸ್ ಆಡುವುದಕ್ಕಾಗಿಯೇ ಅವನು ಬ್ಯಾಂಕ್‌ನಿಂದ ಹಣ ತೆಗೆದುಕೊಂಡು ಹೋಗಿದ್ದಾನೆ. ಏನೋ ಅದೃಷ್ಟವಶಾತ್ ಅವನೇನಾದರೂ ರೇಸ್‌ನಲ್ಲಿ ಹಣ ಮಾಡಿದ್ದರೆ, ಈಗಲೇ ಅದನ್ನನ್ನೂ ವಸೂಲು ಮಾಡಿಕೊಳ್ಳಬಹುದು. ಒಂದು ವೇಳೆ ಕಳೆದುಕೊಂಡಿದ್ದರೆ ಕಳೆದುಳಿದ ಹಣವಾದರೂ ಸಿಗುತ್ತದೆ. ಹಣ ಸಿಕ್ಕಬೇಕಾದರೆ ಅವನನ್ನು ಈಗಲೇ ಹಿಡಿಯಬೇಕು."

ಚಲಮ್ಮ್ "ಸರಿ, ನಡೆಯಿರಿ. ನಾನೂ ನಿಮ್ಮ ಜೊತೆಯಲ್ಲಿ ಬರುತ್ತೇನೆ. ನಾಲ್ಕು ಸಾವಿರ ರೂಪಾಯಿಗಳ ಚೆಕ್‌ಗೆ ನಲವತ್ತು ಸಾವಿರ ರೂಪಾಯಿಗಳನ್ನು ಅವನು ಹೇಗೆ ಕೊಟ್ಟನೆಂಬುದನ್ನು ತಿಳಿದುಕೊಳ್ಳುವುದರಲ್ಲಿ ನನಗೆ ಬಹಳ ಆಸಕ್ತಿಯಿದೆ." ಎಂದು ಹೇಳಿದ.

ಅನಂತರ ಚಲಂ ಟ್ಯಾಕ್ಸಿಯನ್ನು ರೇಸ್‌ಕೋರ್ಸ್‌ನ ಕಡೆ ಬಿಡುವುದಕ್ಕೆ ಹೇಳಿದ.

ಸಾಹೇಬರು "ಇದೇನು, ರೇಸ್‌ಕೋರ್ಸ್ ಕಡೆಗೆ ಬಿಡುವುದಕ್ಕೆ ಹೇಳು ತ್ತೀರಿ. ಈ ಹೊತ್ತಿನಲ್ಲಿ ಅಲ್ಲಿ ಯಾರು ಇರುತ್ತಾರೆ. ಈ ವೇಳೆಗೆ ಕುದುರೆ ಗಳ ಲದ್ದಿಯನ್ನು ಸಹ ಎತ್ತಿ ಚೊಕ್ಕಟ ಮಾಡಿರುತ್ತಾರೆಯಲ್ಲವೇ ?" ಎಂದರು.

ಆ ಮಾತು ಎಲ್ಲರಿಗೂ ನಗುವನ್ನು ತಂದಿತು.

"ಅದು ನಿಜ ಎನ್ನಿ. ಇದ್ದರೂ ಈ ಹಾಳು ಪತ್ತೆ ತರದೂದಿನ ಕೆಲಸವೇ ಹೀಗೆ. ಯಾವನಾದರೂ ವ್ಯಕ್ತಿ ಎಲ್ಲಿಯೋ ಬಂದು ಜಾಗದಲ್ಲಿ ಇದ್ದನೆಂಬುದನ್ನು ಕಿವಿಯಲ್ಲಿ ಕೇಳಿದರೆ ಅವನನ್ನು ಅಲ್ಲಿಂದಲೇ ಹುಡುಕ ಬೇಕು."

ರೇಸ್‌ಕೋರ್ಸ್‌ನ ಬಳಿ ಜನ ಜಂಗುಳಿ ಇಲ್ಲದಿದ್ದರೂ ಆ ಪ್ರದೇಶ ನಿರ್ಜನವಾಗಿರಲಿಲ್ಲ. ಟ್ಯಾಕ್ಸಿಯು ರೇಸ್‌ಕೋರ್ಸ್ ರೋಡಿನಲ್ಲಿ ಹೋಗು ತ್ತಿರುವಾಗ ಗೇಟಿನೊಳಗಿನಿಂದ ಇಬ್ಬರು ಪೋಲೀಸ್ ಪೇದೆಗಳು ಹೊರಗೆ ಬರುತ್ತಿರುವುದು ಕಂಡಿತು.

ಆಗ ಸಾಹೇಬರು "ನಾವಿಲ್ಲಿ ಬಂದುದೇ ಒಳ್ಳೆಯದಾಯಿತು ಡ್ಯೂಟೀ ಪೋಲೀಸಿನವರು ಈಗ ತಾನೇ ಬರುತ್ತಿದ್ದಾರೆ. ಮೊನ್ನೆ ಶೇಷಾಚಲಂ ನಾಯಿಡು ಸಿಕ್ಕಿದ್ದವನು ತನ್ನನ್ನು ರೇಸ್‌ಕೋರ್ಸ್ ಡ್ಯೂಟಿಗೆ ಹಾಕಿರುವು ದಾಗಿ ಹೇಳಿದ. ಇಲ್ಲಿಯೇ ಇದ್ದು ಬಂದು ಹೋಗುವವರ ಮೇಲೆಯೂ, ಆಡುವವರ ಮೇಲೆಯೂ ನಿಗಾ ಮಾಡುವುದು ಅವನ ಕೆಲಸವಾದುದರಿಂದ ಅವನು ಪ್ರಕಾಶನನ್ನಿಲ್ಲಿ ನೋಡಿದ್ದರೂ ನೋಡಿರಬಹುದು. ಅವನನ್ನು ವಿಚಾರಿಸೋಣ." ಎಂದು ಹೇಳಿದರು.

ಹಾಗೆ ಹೇಳಿದವರೇ "ನಿಮ್ಮ ಸಬ್ ಇನ್ಸ್‌ಪೆಕ್ಟರು ಇನ್ನೂ ಇಲ್ಲಿದ್ದಾ ರೆಯೇ ?" ಎಂದು ವಿಚಾರಿಸಿದರು.

ಆ ಪೇದೆಗಳು ಒಳಗೆ ಯಾರೊಂದಿಗೋ ಆತ ಮಾತನಾಡುತ್ತಿದ್ದಾ ರೆಂದು ಹೇಳಿ, ಇಬ್ರಾಹಿಂ ಸಾಹೇಬರ ಅಪ್ಪಣೆಯಂತೆ ನಾಯಿಡುವನ್ನು ಕರೆ ತರಲು ಪುನಃ ಒಳಗೆ ಹೋದರು.

ಸ್ವಲ್ಪ ಹೊತ್ತಿನಲ್ಲಿಯೇ ಶೇಷಾಚಲಂ ನಾಯಿಡು ಬಂದು ಸಾಹೇಬ

ರನ್ನು ನೋಡಿದ. ಸಾಹೇಬರು ತಾವೊಬ್ಬ ಆಸಾಮಿಯನ್ನು ಹುಡುಕಿಕೊಂಡು ಬಂದುದಾಗಿ ಹೇಳಿದರು. ಅವರ ಹೆಸರು ಪ್ರಕಾಶ್ ಎಂದೂ ತಿಳಿಸಿದರು.

"ನನಗೆ ಆವನ ಹೆಸರೇ ತಿಳಿಯದಿರುವಾಗ ನಾನು ಹೇಗೆ ಹೇಳಲಿ? ಆವನ ಚಹರೆಯನ್ನಾದರೂ ಹೇಳಿದರೆ. ಆವನನ್ನು ಅಕಸ್ಮಾತ್ ನೋಡಿದ್ದೇನೆಯೋ ಎಂಬುದನ್ನು ಜ್ಞಾಪಕ ಮಾಡಿಕೊಳ್ಳುತ್ತೇನೆ."

ಇನ್ಸ್ಪೆಕ್ಟರು ಪ್ರಕಾಶನನ್ನು ನೋಡಿರಲಿಲ್ಲ. ಅದರಿಂದ ಕುಪ್ಪುಸ್ವಾಮಿ ಪ್ರಕಾಶನ ಚಹರೆಯನ್ನು ತಿಳಿಸಿದ.

"ಐದು ಅಡಿಗಳಿಗಿಂತಲೂ ಎತ್ತರವಾಗಿದ್ದಾನೆ. ಒಳ್ಳೆಯ ಬಿಳಿಯ ಬಣ್ಣ. ಸ್ಥೂಲಕಾಯನಲ್ಲದಿದ್ದರೂ ಕೃಶಾಂಗನಲ್ಲ. ವಾರೆಯಾಗಿ ಬೈತಲೆ ಬಾಚುತ್ತಾನೆ. ಸೂಟು ಹಾಕಿಕೊಳ್ಳುತ್ತಾನೆ. ನೋಡಿದರೆ ಶ್ರೀಮಂತನಂತೆ ಕಂಡುಬರುತ್ತಾನೆ. ಹೆಚ್ಚಾಗಿ ಸಿಗರೇಟು ಸೇದುತ್ತಾನೆ."

ಯಾರಾದರೂ ಅಂತಹ ವ್ಯಕ್ತಿಯನ್ನು ತಾನು ನೋಡಿದ್ದುಂಟೇ – ಎಂದು ಶೇಷಾಚಲಂ ನಾಯಿಡು ನೆನೆಸಿಕೊಂಡ. ಇಲ್ಲವೆಂದು ಹೇಳುವ ಮೊದಲು ಅವನ ತಲೆ ಎಡದಿಂದ ಬಲಕ್ಕೆ ಆಡಿತು.

ಚಲಂ ಮುಗುಳು ನಗೆಯನ್ನು ನಗುತ್ತಾ "ಬಹಳ ಚೆನ್ನಾಗಿ ಚಹರೆ ಹೇಳುತ್ತೀಯೆ ನೀನೇ ರೇಸ್‌ಕೋರ್ಸ್‌ನಲ್ಲಿ ಆಡ್ತಾಡುತ್ತಿದ್ದು ಯಾರಾದರೂ ನಿನ್ನನ್ನು ಈ ಚಹರೆಯ ವ್ಯಕ್ತಿಯನ್ನು ನೋಡಿದ್ದೀಯಾ–ಎಂದು ಕೇಳಿದರೆ ಅದಕ್ಕೆ ಉತ್ತರ ಹೇಳಬಲ್ಲೆಯಾ?" ಎಂದು ಹೇಳಿ ಶೇಷಾಚಲಂನನ್ನು ಉದ್ದೇಶಿಸಿ, "ನಾಯಿಡುರವರೇ. ಪ್ರಕಾಶನು ರೂಪವತಿಯಾದ ಒಬ್ಬ ಹೆಂಗಸಿನೊಡನೆ ರೇಸ್‌ಕೋರ್ಸ್‌ಗೆ ಬಂದನೆಂದು ಕೇಳಿದ್ದೇವೆ. ಅವಳು ತಲೆ ಬಾಬ್ ಮಾಡಿಕೊಂಡಿದ್ದಾಳೆಂದೂ, ರೋಜಾ ಬಣ್ಣದ ಸಿಲ್ಕ್ ಸೀರೆಯನ್ನು ಉಟ್ಟಿದ್ದಳೆಂದೂ ಹೇಳಿದರು ಆ ತರುಣಿಯು ಯಾರೋ ಕುದುರೆ ಮಾಲೀಕನ ಮಗಳಂತೆ." ಎಂದ.

ಶೇಷಾಚಲಂ ನಾಯಿಡುವು "ಓಹೋ! ಹಾಗಾದರೆ ನಾನು ಆ ವ್ಯಕ್ತಿಯನ್ನು ನೋಡಿದ್ದೇನೆ. ಅವನು ನಮ್ಮ ದೇಶದವನಂತೆ ಕಂಡುಬಂದ. ಉತ್ತರ ಹಿಂದೂಸ್ಥಾನದವಳಂತೆ ಕಂಡುಬರುತ್ತಿದ್ದ ಆಧುನಿಕ ರಮಣಿಯೊಂದಿಗೆ ಅವನು ಓಡಿಯಾಡುತ್ತಿದ್ದುದರಿಂದ ಆಸಕ್ತಿಯುಂಟಾಗಿ ಅವರಿಬ್ಬ

ರನ್ನೂ ಗಮನಿಸಿದೆ. ಅವರುಗಳು ಯಾರೆಂಬುದನ್ನೂ ವಿಚಾರಿಸಿದೆ. ನೀವು ಹೇಳುವ ಪ್ರಕಾಶ್ ಎಂಬ ವ್ಯಕ್ತಿ ಯಾರೋ ಗೊತ್ತಾಗಲಿಲ್ಲ. ಅವನ ಹೆಸರು ಸಹ ಈ ಗಳಿಗೆಯುವರೆವಿಗೆ ನನಗೆ ತಿಳಿದಿರಲಿಲ್ಲ. ಆ ಹೆಂಗಸು ಯಾರೆಂಬುದು ಬಹಳ ಸುಲಭವಾಗಿ ಗೊತ್ತಾಯಿತು. ಅವಳು ರೇಸ್ ಕೋರ್ಸಿನಲ್ಲಿ ಚಿರಪರಿಚಿತಳು. ಅವಳ ಹೆಸರು ಲತಾ ಎಂದು. ಕುದುರೆಗಳ ಮಾಲೀಕ ಗುಲಾಬ್‌ಚಂದ್ ಎಂಬಾತನ ಮಗಳವಳು. ಈಗ್ಗೆ ಕೆಲವು ದಿನಗಳಿಂದ ಪ್ರಕಾಶ್ ಲತೆಯೊಂದಿಗೆ ಬಹಳವಾಗಿ ಓಡಿಯಾಡುತ್ತಿದ್ದಾನೆಂದು ಕೇಳಿದ್ದೇನೆ. ರೇಸುಗಳು ಮುಗಿದೊಡನೆಯೇ ಅವರಿಬ್ಬರೂ ಕೆಂಪು ಬಣ್ಣದ ಸ್ಪೋರ್ಟ್ಸ್ ಕಾರಿನಲ್ಲಿ ಹೊರಟುಹೋದರು-" ಎಂದು ಹೇಳಿದ.

ಅವನ ಮಾತು ಕೇಳಿ ಅಪರಾಧಿಯ ಓಡು ಸಿಕ್ಕಿತೆಂದು ಉತ್ಸಾಹಭರಿತರಾದ ಇಬ್ರಾಹಿಂ ಸಾಹೇಬರು "ಆ ಪ್ರಕಾಶನು ಈ ದಿನ ರೇಸ್ ಆಡುತ್ತಿದ್ದನೇ ನಾಯಿಡೂ" ಎಂದು ಕೇಳಿದರು.

"ಆತ ಸಂದೇಹಾಸ್ಪದನಾದ ವ್ಯಕ್ತಿ ಎಂಬ ಸುಳಿವು ಸಿಕ್ಕಿದ್ದರೆ ನಿಗಾ ಇಡುತ್ತಿದ್ದೆ. ವಾಸ್ತವವಾಗಿ ಹೇಳಬೇಕೆಂದರೆ ನಾನು ಅದನ್ನು ಗಮನಿಸಲಿಲ್ಲ. ಅಂತೂ ಪ್ರಕಾಶ್ ಆ ಹೆಂಗಸಿನೊಡನೆ ಬಹಳ ಓಡಿಯಾಡುತ್ತಿದ್ದ."

ಶೇಷಾಚಲಂ ನಾಯಿಡುವಿಗೆ ಧನ್ಯವಾದಗಳನ್ನು ಹೇಳಿ ಅಲ್ಲಿಂದ ಅವರುಗಳು ಹೊರಟರು.

ಪ್ರಕಾಶನನ್ನು ಹುಡುಕಿಕೊಂಡು ಮತ್ತೆಲ್ಲಿ ಹೋಗಬೇಕೆಂಬುದನ್ನು ಸಾಹೇಬರು ಸೂಚಿಸಿದರು.

"ಈ ದಿನ ಸಾಯಂಕಾಲ ಗುಲಾಬ್‌ಚಂದ್‌ನ ಮಾತು ಬಂದಿತ್ತು. ಅವನಿಗೆ ಇಸ್ಮಾಯಿಲ್ ವಜ್ರದ ಹರಳನ್ನು ನಾಲ್ಕು ಸಾವಿರ ರೂಪಾಯಿಗಳಿಗೆ ಮಾರಿದನೆಂದು ವಹಿದಾ ಹೇಳಿದಳು. ಆಗ ವಿಚಾರಿಸಿ ತಿಳಿದುಕೊಂಡೆ. ಗುಲಾಬ್‌ಚಂದ್ ಪಿಂಕ್ಸ್ ಹೋಟಲಿನ ರೂಂನಲ್ಲಿಯೇ ಇಳಿದುಕೊಂಡಿದ್ದಾನಂತೆ. ಅಲ್ಲಿಗೆ ಹೋದರೆ ಲತೆ ಎಲ್ಲಿದ್ದಾಳೆಂಬ ವಿಷಯ ಗೊತ್ತಾಗುತ್ತದೆ. ಒಂದು ವೇಳೆ ಅವಳು ಎಲ್ಲಿಗೆ ಹೋಗಿದ್ದಾಳೆಂಬ ವಿಷಯ ಗುಲಾಬ್‌ಚಂದನಿಗೆ ಗೊತ್ತಿರುವುದಿಲ್ಲ ಎಂದಿಟ್ಟುಕೊಳ್ಳೋಣ. ಅಲ್ಲಿಯೇ ಕಾದಿದ್ದರೆ ಅವಳ

ಬಂದೇ ಬರುತ್ತಾಳೆ. ಅವಳಿಂದ ಪ್ರಕಾಶ್ ಎಲ್ಲಿರುತ್ತಾನೆಂಬುದನ್ನು ತಿಳಿದು ಕೊಳ್ಳಬಹುದು."

ಪಿಂಕ್ಸ್‌ಗೆ ಹೋದನಂತರ ಲತೆಯೆಲ್ಲೆಂಬುದನ್ನು ಯಾರೊಂದಿಗೂ ವಿಚಾರಿಸಬೇಕಾಗಲಿಲ್ಲ. ಅನಂತರ ಪ್ರಕಾಶನಿಗಾಗಿ ಹುಡುಕಿಕೊಂಡೂ ಹೋಗಬೇಕಾಗಿರಲಿಲ್ಲ.

ಹೋಗುತ್ತಿದ್ದಂತೆಯೇ ಕಾಂಪೌಂಡಿನೊಳಗೆ ಕೆಂಪು ಬಣ್ಣದ ಸ್ಟೋರ್‍ಟ್ಸ್ ಕಾರು ನಿಂತಿತ್ತು. ಉದ್ಯಾನದಲ್ಲಿ ಬೆತ್ತದ ಕುರ್ಚಿಗಳಲ್ಲಿ ಕುಳಿತು ಒಬ್ಬ ಹೆಂಗಸೂ, ಒಬ್ಬ ಗಂಡಸೂ ಪಾನಾಸಕ್ತರಾಗಿದ್ದರು. ಹೆಂಗಸನ್ನು ಲತೆಯೇ ಆಗಿರಬೇಕೆಂದು ಊಹಿಸಿದರು. ಗಂಡಸು ಪ್ರಕಾಶನೆಂಬುದನ್ನು ಗುರ್ತಿಸಿದರು.

ಚೆಲುವಮ್ಮ, ಕುಪ್ಪುಸ್ವಾಮಿಯೂ ಪ್ರಕಾಶನಿಗೆ ಸ್ನೇಹವಲ್ಲದಿದ್ದರೂ ಪರಿಚಿತರಾದರು. ಅವರು ತಮ್ಮ ಟೇಬಲ್ ಬಳಿಗೆ ಬಂದುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಅವರ ಜೊತೆಯಲ್ಲಿ ಪೋಲೀಸ್ ಅಧಿಕಾರಿಯಂತೆ ಕಂಡುಬರುತ್ತಿದ್ದ ವ್ಯಕ್ತಿಯಿರುವುದನ್ನು ನೋಡಿಯಂತೂ ಬೆರಗಾದ.

ಲತೆಯೂ ಪ್ರಕಾಶನೂ ಕುಳಿತಿದ್ದ ಕಡೆ ಮತ್ತೆರಡು ಕುರ್ಚಿಗಳು ಖಾಲಿ ಯಿದ್ದವು. ಬೇರರ್ ಮತ್ತೊಂದು ಕುರ್ಚಿಯನ್ನು ಹಾಕಿದ. ಆಗಂತು ಕರು ಮೂರು ಮಂದಿಯೂ ಕುಳಿತುಕೊಂಡರು.

ಏನು ತರಲಿ – ಎಂದು ಕೇಳುವಂತೆ ಬೇರರ್ ನಿಂತುಕೊಂಡ. ಇಬ್ರಾಹಿಂ ಸಾಹೇಬರು "ಕರೆಯುತ್ತೇವೆ ಹೋಗು." ಎಂದು ಅವನನ್ನು ಕಳುಹಿಸಿ ಅನಂತರ ಕೇಳಿದರು.

"ಪ್ರಕಾಶ್. ನೀವು ಟರ್ವ ಬ್ಯಾಂಕಿನಲ್ಲಿ ಮೂವತ್ತಾರು ಸಾವಿರ ರೂಪಾಯಿಗಳನ್ನು ಛಪಾವಣೆ ಮಾಡಿಕೊಂಡು ಬಂದಿರೆಂದು ನಿಮ್ಮ ಮೇಲೆ ಅಪಾದನೆ ಬಂದಿದೆ. ಅದಕ್ಕೇನು ಹೇಳುತ್ತೀರಿ?"

ಕ್ಷಣಮಾತ್ರ ಏನು ಹೇಳುವುದಕ್ಕೂ ಅವನಿಗೆ ತೋರಲಿಲ್ಲ. ಆಮೇಲೆ ಧೈರ್ಯ ತಂದುಕೊಂಡು ಹೇಳಿದ.

"ನೀವು ಹೇಳುವುದು ವಿಚಿತ್ರವಾಗಿದೆ. ಅಲ್ಲಿ ಚಪಾವಣೆಯಾಗುವುದಕ್ಕೆ ಅವಕಾಶವೇ ಇಲ್ಲ. ನೀವು ಪೋಲೀಸ್ ಅಧಿಕಾರಿಗಳಂತೆ ಕಂಡುಬರುತ್ತೀರಿ. ಆದರೂ ಸಹ ನೀವು ಈ ರೀತಿಯಾಗಿ ಬಂದು ಕೇಳುವುದಕ್ಕೆ ಕಾರಣವೇನು ?"

"ನಾನು ಈಗತಾನೇ ನಿಮ್ಮ ಬ್ಯಾಂಕಿನಿಂದ ಬರುತ್ತಿದ್ದೇನೆ. ಬ್ಯಾಂಕಿನಲ್ಲಿ ಮೂವತ್ತಾರು ಸಾವಿರ ರೂಪಾಯಿಗಳ ಛಪಾವಣೆಯಾಗಿದೆಯೆಂದೂ, ಆ ದ್ರವ್ಯವನ್ನು ನೀವು ಅಪಹರಿಸಿಕೊಂಡು ಬಂದಿದ್ದೀರೆಂದೂ ನಿಮ್ಮ ಮ್ಯಾನೇಜರು ಆನಂದರಾಯರು ಕಂಪ್ಲೈಂಟು ಕೊಟ್ಟಿದ್ದಾರೆ. ನಾನು ತನಿಖೆ ಕ್ರಮವನ್ನು ನಡೆಯಿಸುವುದಕ್ಕೆ ಬಂದಿದ್ದೇನೆ."

ಅವರು ಆ ಮಾತು ಹೇಳುತ್ತಿದ್ದಂತೆಯೇ ಲತೆಯು "ಆ ಮ್ಯಾನೇಜರು ಬೇಕೂಫನಂತೆ ಕಾಣುತ್ತದೆ. ಈಗ್ಗೆ ಹದಿನೈದು ಇಪ್ಪತ್ತು ದಿನಗಳಿಂದಲೂ ನಾನು ಪ್ರಕಾಶರ ಜೊತೆಯಲ್ಲಿಯೇ ಇದ್ದೇನೆ. ಅವರು ಅಂತಹ ಯಾವ ಕೆಲಸವನ್ನೂ ಮಾಡಿಲ್ಲವೆಂದು ಪ್ರಮಾಣಪೂರ್ವಕವಾಗಿ ಹೇಳುತ್ತೇನೆ. ಅಷ್ಟೇ ಅಲ್ಲ. ಇವರು ಅಂತಹ ಕೆಲಸ ಮಾಡುವವರೇ ಅಲ್ಲ" ಎಂದಳು.

ಸಾಹೇಬರು "ಲತಾದೇವಿ. ತಾವು ಸದ್ಯದಲ್ಲಿ ಈ ವಿಷಯಕ್ಕೆ ಪ್ರವೇಶಿಸದಿರುವುದು ಒಳ್ಳೆಯದು. ಈ ಸಂಬಂಧವಾಗಿ ನಿಮ್ಮನ್ನು ಕೇಳಬೇಕಾದ ಕೆಲವಂಶಗಳೂ ಇವೆ. ಆಗ ನೀವು ಮಾತನಾಡುವಿರಂತೆ." ಎಂದು ಹೇಳಿ ತಮ್ಮ ಜೇಬಿನಿಂದ ಫುಲ್‌ಸ್ಕೇಪ್ ಕಾಗದವೊಂದನ್ನು ತೆಗೆದು ಪ್ರಕಾಶನ ಕೈಗಿತ್ತು "ಇದನ್ನು ನೋಡಿ" ಎಂದರು.

ಪ್ರಕಾಶ್ ಆ ಕಾಗದ ತೆಗೆದುಕೊಂಡು ಓದಿದ. ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನ ಇನ್ಸ್‌ಪೆಕ್ಟರಿಗೆ ಬರೆದ ಆ ಕಂಪ್ಲೈಂಟ್‌ನಲ್ಲಿ ಸಾಹೇಬರು ಹೇಳಿದ ವಿಷಯ.ಗಳೆಲ್ಲವೂ ಇದ್ದವು. ಅದನ್ನು ಇನ್‌ಸ್ಪೆಕ್ಟರ ಕೈಗೆ ವಾಪ್ಸು ಕೊಟ್ಟು ಗಂಭೀರವಾಗಿ ಹೇಳಿದ.

"ಅಂತೂ ಇವೆಲ್ಲವನ್ನೂ ನೋಡಿದರೆ ಆಶ್ಚರ್ಯವಾಗುತ್ತದೆ. ನನ್ನೊದಿಗೆ ಪರಮ ಸ್ನೇಹಿತರಂತೆ ನಡೆದುಕೊಳ್ಳುತ್ತಿದ್ದ ಆನಂದರಾಯರೇ ನನ್ನಮೇಲೆ ಸಲ್ಲದ ಇಂತಹ ಆರೋಪವನ್ನು ಹೊರಸುವುದನ್ನು ನೋಡಿದರೆ ಈ ಪ್ರಪಂಚದಲ್ಲಿ ಯಾರನ್ನು ನಂಬುವುದು, ಯಾರನ್ನು ನಂಬದಿರುವುದು ಎಂಬುದನ್ನು

ನಿರ್ಣಯಿಸುವುದೇ ಕಷ್ಟವಾಗುತ್ತದೆ. ಯಾವುದು ಹೇಗಾದರೂ ಇರಲಿ. ನನ್ನಮೇಲೆ ಹೊರಿಸಿರುವ ಆರೋಪವನ್ನು ಅವರು ಸಾಬೀತು ಮಾಡಬೇಕಷ್ಟೇ."

ಪ್ರಕಾಶನು ಬ್ಯಾಂಕಿನಿಂದ ಹಣವನ್ನು ಅಪಹರಣೆ ಮಾಡಿದನೆಂಬುದರಲ್ಲಿಯೂ, ಅವನು ಅಪರಾಧಿಯೆಂಬುದರಲ್ಲಿಯೂ ಸಾಹೇಬರಿಗೆ ಯಾವ ವಿಧವಾದ ಸಂದೇಹವೂ ಇರಲಿಲ್ಲ. ಆದರೆ ಅವನು ಗಂಭೀರವಾಗಿಯೂ ವಿನಯವಾಗಿಯೂ ಅಡಿದ ಮಾತುಗಳು ಸಾಹೇಬರಿಗೆ ಪ್ರಿಯವನ್ನು ಉಂಟುಮಾಡಿದವು.

ಸಾಹೇಬರು "ಮಿ॥ ಪ್ರಕಾಶ್. ನೀವು ಒಳ್ಳೆಯವರಂತೆ ಕಂಡುಬರುತ್ತೀರಿ. ಆದರೆ ಒಳ್ಳೆಯವರು ಸಹ ಕೆಲವು ಪರಿಸ್ಥಿತಿಗಳಲ್ಲಿ ಕೆಲಕೆಲವು ಸಹವಾಸಗಳಲ್ಲಿ ತಪ್ಪು ಕೆಲಸಗಳನ್ನು ಮಾಡುತ್ತಾರೆ. ಹಾಗೆಯೇ ನೀವೂ ಮಾಡಿದ್ದೀರೆಂಬುದರಲ್ಲಿ ಸಂದೇಹವೇ ಇಲ್ಲ. ಆನಂದರಾಯರು ನಿಮಗೆ ಯಾವ ವಿಧವಾದ ಕೆಡುಕನ್ನು ಉಂಟುಮಾಡಬೇಕೆಂಬ ಉದ್ದೇಶವನ್ನೂ ಉಳ್ಳವರಾಗಿಲ್ಲ. ಹೀಗಾಗಿದೆ ಎಂದು ಗೊತ್ತಾದ ಕೂಡಲೇ ನಿಮ್ಮ ತಂದೆಯವರನ್ನು ನೋಡಿ ಮಾತನಾಡಲು ಪ್ರಯತ್ನ ಮಾಡಿದರು. ನಿಮ್ಮ ತಂದೆ ಊರಿನಲ್ಲಿಲ್ಲವಾದುದರಿಂದ ಅದು ಸಾಧ್ಯವಾಗಲಿಲ್ಲ ನೀವು ಈಗಲೇ ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಡುವುದಾದರೆ ಅವರು ತಮ್ಮ ಕಂಪ್ಲೇಂಟು ವಾಪ್ಸು ತೆಗೆದುಕೊಳ್ಳುವುದಕ್ಕೆ ತಯಾರಾಗಿದ್ದಾರೆಂದು ಕಾಣುತ್ತದೆ, ನೀವು ನೀವು ಸರಿಮಾಡಿಕೊಳ್ಳುವುದಾದರೆ ಮುಂದಿನಕ್ರಮಗಳು ನಡೆಯಲೇಬೇಕೆಂದು ನಾನು ಸಹ ಒತ್ತಾಯ ಮಾಡುವುದಿಲ್ಲ. ಪೋಲೀಸ್ ಅಧಿಕಾರಿಯಾದ ತಾನು ಈ ರೀತಿ ಹೇಳುವುದು ಸರಿಯಲ್ಲ- ಆದರೂ ನೀವು ಒಳ್ಳೆಯ ಮನುಷ್ಯರೆಂದು ಭಾವಿಸಿ ಈ ಮಾತು ಹೇಳುತ್ತಿದ್ದೇನೆ. ಈಗಲಾದರೂ ನೀವು ಮೂವತ್ತಾರು ಸಾವಿರ ರೂಪಾಯಿಗಳನ್ನು ವಾಪ್ಸು ಮಾಡುವುದು ಸೂಕ್ತವೆಂದು ನನಗೆ ತೋರುತ್ತದೆ" ಎಂದು ಹೇಳಿದರು.

ಪ್ರಕಾಶನು ನೀರಸವಾದ ನಗುವನ್ನು ನಗುತ್ತಾ "ಇನ್ಸ್ಪೆಕ್ಟರವರೇ. ನನ್ನ ವಿಷಯದಲ್ಲಿ ನಿಮಗಿರುವ ಸದ್ಭಾವಗಳಿಗಾಗಿ ನಾನು ಕೃತಜ್ಞನಾಗಿದ್ದೇನೆ. ಆದರೆ ನಾನು ಬ್ಯಾಂಕಿದ ಒಂದು ಕಾಸನ್ನೂ ಅಪಹರಣೆ ಮಾಡಿದವನಲ್ಲ.

ಮೂವತ್ತಾರು ಸಾವಿರ ರೂಪಾಯಿಗಳು ಹಾಗಿರಲಿ, ನನ್ನ ಬಳಿ ಒಂದು ಸಾವಿರ ರೂಪಾಯಿಗಳೂ ಸಹ ಇಲ್ಲ. ನನ್ನ ತಂದೆ ಮನಸ್ಸು ಮಾಡಿದರೆ ಈ ಕ್ಷಣ ಆ ಮೊಬಲಗನ್ನು ಕೊಡಬಲ್ಲರು. ಆದರೆ ಅದನ್ನು ನಾನು ಒಪ್ಪಿ ಕೊಳ್ಳುವುದಿಲ್ಲ. ಈ ಪ್ರಕರಣದಲ್ಲಿ ಆನಂದರಾಯರು ರಾಜೀ ಮಾಡಿಕೊಳ್ಳುವ ಅಭಿಪ್ರಾಯವುಳ್ಳವರಾಗಿದ್ದಾರೆಂದು ಹೇಳುತ್ತೀರಿ. ಕೋತಿಯು ಮೊಸರನ್ನ ವನ್ನು ತಿಂದು ಮೇಕೆಯ ಮೂತಿಗೆ ಕೈ ಒರಸಿದಂತೆ ತಮ್ಮ ಪರಮಾಪ್ತ ನಾರೋ ಮಾಡಿದ ಛಪಾವಣೆಗೆ ನನ್ನನ್ನು ಗುರಿಮಾಡಬೇಕೆಂಬುದು ಅವರ ಉದ್ದೇಶ್ಯವಾಗಿರಬಹುದು. ಸದ್ಯದಲ್ಲಿ ಇದರಿಂದ ನನಗೆ ಅಪಮಾನವಾಗುತ್ತ ದೆಂಬುದು ನಿಜ. ಆದರೆ ಅದರಿಂದ ತಪ್ಪಿಸಿಕೊಳ್ಳಲು ನನ್ನ ಹತ್ತಿರವಿದ್ದಿದ್ದರೂ ನಾನು ಹಣ ಕೊಡುತ್ತಿರಲಿಲ್ಲ. ಹಣ ಕೊಟ್ಟು ಅಪಮಾನವನ್ನು ತಪ್ಪಿಸಿ ಕೊಳ್ಳುವುದಕ್ಕಿಂತಲೂ ಈ ಪ್ರಸಂಗವನ್ನು ಎದುರಿಸಿ ನನ್ನ ನಿರಪರಾದಿತ್ವವನ್ನು ಸಾಬೀತು ಮಾಡುವುದು ಗೌರವಾಸ್ಪದವೆಂದು ಭಾವಿಸುತ್ತೇನೆ." ಎಂದ

ಅವನ ಮಾತುಗಳು ಪರಿಹಾಸ್ಯಾಸ್ಪದವಾಗಿ ತೋರಿ ಸಾಹೇಬರೆಂದರು. "ಪ್ರಕಾಶರೇ. ನಾನು ಹೇಳುವುದನ್ನು ಸಮಾಧಾನವಾಗಿ ಕೇಳಿರಿ. ಕೇವಲ ಪೌರುಷ ವಾಕ್ಯಗಳನ್ನಾಡುವುದರಿಂದ ಯಾವ ಪ್ರಯೋಜನವೂ ಆಗು ವುದಿಲ್ಲ. ಈಗ ನಿಮ್ಮ ಮೇಲೆ ಅಪವಾದವು ಹೊರಿಸಲ್ಪಟ್ಟಿದೆ ಎಂದು ಭಾವಿಸ ಬೇಡಿರಿ. ಯಾವ ಕಾರಣದಿಂದಲೂ ನಿವಾರಿಸಲಾಗದಂತಹ ಅಪರಾಧವು ಹೊರಿಸಲಾಗಿದೆ. ನನ್ನ ಮೂವತ್ತು ವರ್ಷಗಳ ಪೋಲೀಸ್ ಅನುಭವದಲ್ಲಿ ಹೇಳುವುದಾದರೆ ನಿಮ್ಮ ನಿರಪರಾಧಿತ್ವವನ್ನು ಸಾಬೀತು ಮಾಡುವುದು ಸಾಧ್ಯವೇ ಇಲ್ಲ."

"ಅದನ್ನು ಹೇಗೆ ಹೇಳುತ್ತೀರಿ ?"

"ಹಾ ! ಆ ರೀತಿಯಾಗಿ ಕೇಳಿರಿ. ಈ ದಿನ ಮಧ್ಯಾಹ್ನ ನೀವು ಕ್ಯಾಷ್ ಕೌಂಟರಿನ ಮೇಲೆ ಕುಳಿತುಕೊಂಡಿದ್ದಿರಿ. ಆಗ ವ-ಹನುದಾಲಿ ಎಂಬುವವನು ಫಾಜೀರ್ಶಾ ಈರಾನೀ ಎಂಬುವವರಿಗೆ ಕೊಟ್ಟ ಚಕ್ ಬಂದಿತು. ನೀವು ಆದಕ್ಕೆ ಎಷ್ಟು ಹಣವನ್ನು ಕೊಟ್ಟಿರೆಂಬುದು ನಿಮಗೆ ಜ್ಞಾಪಕವಿದೆಯೇ ?"

"ಇದೆ. ಚೆನ್ನಾಗಿ ಜ್ಞಾಪಕವಿದೆ. ನಲವತ್ತು ಸಾವಿರ."

"ಸ್ವಲ್ಪ ತಡೆದುಕೊಳ್ಳಿ. ಆ ಚಕ್ ಬರೆದಿರುವುದು ಕೇವಲ ನಾಲ್ಕು ಸಾವಿರ ರೂಪಾಯಿಗಳಿಗೆ. ಲೆಡ್ಜರ್ ಕ್ಲಾರ್ಕ್ ಅದನ್ನು ನೋಡಿ ಮಹಮದಾಲಿಯವರ ಖಾತೆಗೆ ನಾಲ್ಕು ಸಾವಿರಗಳನ್ನು ಖರ್ಚು ಹಾಕಿದ್ದಾರೆ. ಮ್ಯಾನೇಜರ್ ಆನಂದರಾಯರು ಅದನ್ನು ನಾಲ್ಕು ಸಾವಿರಗಳಿಗೇ ಪಾಸು ಮಾಡಿದ್ದಾರೆ. ಹಾಗಿರುವಾಗ ಆ ಚಕ್ ಮೇಲೆ ನಲವತ್ತು ಸಾವಿರಗಳನ್ನು ಕೊಟ್ಟಿರುವ ಸಂಭವವಿಲ್ಲ. ನಾಲ್ಕೇ ಸಾವಿರಗಳನ್ನು ಕೊಟ್ಟಿದ್ದೀರಿ. ಆದರೆ ಕ್ಯಾಷ್ ಲೆಡ್ಜರ್‌ನಲ್ಲಿ ನಲವತ್ತು ಸಾವಿರ ಕೊಟ್ಟಿರುವುದಾಗಿ ಬರೆದಿದ್ದೀರಿ. ಆ ಉಳಿದ ಮೂವತ್ತಾರು ಸಾವಿರ ರೂಪಾಯಿಗಳನ್ನು ನೀವು ಧಪಾವಣೆ ಮಾಡಿರಬೇಕಲ್ಲವೇ ?"

"ಸುಳ್ಳು ಶುದ್ದ ಸುಳ್ಳು. ನಾನು ಆ ಚಕ್ ನೋಡಿದ್ದೇನೆ. ಎರಡೆರಡು ಬಾರಿ ನೋಡಿದ್ದೇನೆ. ಅದು ನಲವತ್ತು ಸಾವಿರ ಚಕ್."

ಸಾಹೇಬರು ಜೇಬಿನಿಂದ ಒಂದು ಚಕ್ ತೆಗೆದುಕೊಟ್ಟು "ನೋಡಿರಿ. ಇದೇ ಚಕ್‌ನ ಮೇಲೆ ಅಲ್ಲವೇ ನೀವು ಹಣ ಕೊಟ್ಟದ್ದು ?" ಎಂದು ಪ್ರಶ್ನಿಸಿದರು.

ಉದ್ಯಾನವಾದರೂ ಸಾಕಷ್ಟು ಬೆಳಕು ಆ ಪ್ರದೇಶದಲ್ಲಿ ಬೀಳುತ್ತಿತ್ತು. ಪ್ರಕಾಶ್ ಆ ಚೆಕ್ ತೆಗೆದು ನೋಡಿದ.

ಅನಂತರ ಅದನ್ನು ವಾಪ್ಸು ಮಾಡುತ್ತಾ "ಈ ಚಕ್ ಹೇಗಾಗುತ್ತದೆ ? ಇದು ನಾಲ್ಕು ಸಾವಿರಗಳ ಚೆಕ್. ನಾನು ಕೊಟ್ಟದ್ದು ನಲವತ್ತು ಸಾವಿರ ರೂಪಾಯಿ ಚಕ್‌ನ ಮೇಲೆ ಹಣ ?" ಎಂದ.

ಸಾಹೇಬರು ಆ ಚಕ್ ಕೈಗೆ ತೆಗೆದುಕೊಂಡು ಹೇಳಿದರು.

"ಮಹಮದಾಲಿಯಿಂದ ಫಾಜೀಖಾ ಈರಾನಿಗೆ ಕೊಡಲ್ಪಟ್ಟ ಎರಡು ಚಕ್‌ಗಳನ್ನು ನೀವು ಈ ದಿನ ಕ್ಯಾಷ್ ಮಾಡಿದಿರೋ ?"

"ಉಹುಂ. ಒಂದೇ ಚಕ್"

"ಸರಿಯಾಗಿ ಹೇಳಿದಿರಿ. ಈ ಚಕ್‌ಗೆ ಪೇಮೆಂಟ್ ಮಾಡಿದಕ್ಕೆ ನೀವು ಚೋಟಾ ರುಜು ಮಾಡಿದ್ದೀರಿ. ಇದು ನಿಮ್ಮದೇ ಹೌದೇ ಇಲ್ಲವೋ ಹೇಳಿರಿ. ಇಲ್ಲಿ ಚೆಕ್‌ನ ಹಿಂದುಗಡೆ ನೋಡಿರಿ. ನೂರು — ನಾನೂರು ಎಂದು ಬರೆದಿರುವುದು ನೂರು ರೂಪಾಯಿನ ನಾನೂರು ನೋಟುಗಳನ್ನು

ಕೊಟ್ಟದಕ್ಕೆ ಇದು ಸಂಕೇತವಲ್ಲವೇ? ಈ ಅಕ್ಷರಗಳೂ ನಿಮ್ಮವೇ ಅಲ್ಲವೇ ?"

ಪ್ರಕಾಶ್ ತೆಗೆದು ನೋಡಿದ. ಅವನ ಚೋಟಾ ರುಜು ಅದರ ಮೇಲಿತ್ತು. ನೂರು–ನಾನೂರು ಎಂದು ಬರೆದ ಅಕ್ಷರಗಳೂ ಅವನವೇ ಆಗಿದ್ದಿತು. ಅವನಿಗೇನು ಹೇಳಬೇಕೆಂಬುದೇ ತೋರಲಿಲ್ಲ. ಅವಾಕ್ಕಾಗಿ ಕುಳಿತ.

ಆ ಸಮಯದಲ್ಲಿ ಅಲ್ಲಿದ್ದವರೆಲ್ಲರಿಗೂ ಅವನು ಅಪರಾಧಿಯಾಗಿಯೇ ಕಂಡುಬಂದಿತು.

ಇನ್ನೊಂದು ಕ್ಷಣವೂ ಆ ಚಕ್ ಅವನ ಕೈಯಲ್ಲಿರುವುದು ಸೂಕ್ತವಲ್ಲ ವೆಂದು ಸಾಹೇಬರು ತಟ್ಟನೆ ಅವನ ಕೈಯಿಂದ ತೆಗೆದು ಭದ್ರವಾಗಿ ಜೇಬಿ ನಲ್ಲಿಟ್ಟುಕೊಂಡರು.

ಅನಂತರ ಇಬ್ರಾಹಿಂ ಸಾಹೇಬರು "ಈಗೇನು ಹೇಳುತ್ತೀರಿ?" ಎಂದರು.

ಪ್ರಕಾಶನು "ಆ ರುಜುವು ನನ್ನದು. ಚಕ್‌ನ ಹಿಂದಿರುವ ಕೈಬರ ಹವೂ ನನ್ನದೇ. ಆದರೆ ನನಗೆ ಈಗಲೂ ಕಣ್ಣಿಗೆ ಕಟ್ಟಿದಂತೆ ಇದೆ. ಈ ಚಕ್‌ನ ಮೇಲೆ ನಲವತ್ತು ಸಾವಿರಗಳು ಎಂದು ಸ್ಪಷ್ಟವಾಗಿ ಬರೆದಿದ್ದಿತು. ಈಗ ಹಾಗಿಲ್ಲ. ಏನೋ ಮೋಸವಾಗಿದೆ ಎಂದಷ್ಟೇ ಹೇಳಬಲ್ಲೆ." ಎಂದ.

ಸಾಹೇಬರು "ನಿಮ್ಮ ಜವಾಬು ಸರಿಯಾಗಿಲ್ಲ. ಅದು ಅಪರಾಧವನ್ನು ಒಪ್ಪಿಕೊಂಡಂತೆಯೇ ಇದೆ. ನಿಮ್ಮನ್ನು ದಸ್ತಗಿರಿ ಮಾಡಿದ್ದೇನೆ. ನೀವು ನನ್ನ ಜೊತೆಯಲ್ಲಿ ಬರಬೇಕು." ಎಂದರು.

ಪ್ರಕಾಶನು ವಿನಯದಿಂದ "ಆಗಬಹುದು ಸಾರ್. ಅದಕ್ಕೆ ನನ್ನ ಅಡ್ಡಿ ಯಿಲ್ಲ." ಎಂದು ಹೇಳಿ ಎದ್ದು ನಿಂತ.

ಲತೆಯು ಉದ್ರೇಕಿತಳಾಗಿ "ಇಲ್ಲ. ಅವರು ಯಾವ ಅಪರಾಧವನ್ನೂ ಮಾಡಿದವರಲ್ಲ. ನಿಮಗೆ ಬೇಕಾದರೆ ನಮ್ಮ ತಂದೆಯವರಿಂದ ಈ ಕ್ಷಣ ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಡಿಸುತ್ತೇನೆ. ಅದನ್ನು ತೆಗೆದು ಕೊಂಡು ಹೋಗಿ, ನಿಮ್ಮ ಕಾಲು ಕಟ್ಟಿಕೊಳ್ಳುತ್ತೇನೆ, ಪ್ರಕಾಶರನ್ನು ಬಿಟ್ಟು ಹೋಗಿರಿ." ಎಂದಳು.

ಸಾಹೇಬರು ಚಲಂನ ಕಡೆಗೆ ತಿರುಗಿನೋಡಿದರು.

ಆ ಸಮಯದಲ್ಲಿ ಪ್ರಕಾಶನು ಅವಳನ್ನು ಉದ್ದೇಶಿಸಿ" ಲತಾದೇವಿಯವರೇ, ಯಾರು ನಂಬದಿದ್ದರೂ ನೀವಾದರೂ ನಾನು ನಿರಪರಾಧಿ ಎಂಬುದನ್ನು ಒಪ್ಪಿಕೊಳ್ಳುತ್ತೀರೆಂದು ಭರವಸೆ ಮಾಡುತ್ತೇನೆ. ದಯಮಾಡಿ ನನ್ನ ವಿಶ್ವಾಸಕ್ಕೆ ಧಕ್ಕೆ ತರಬೇಡಿ. ಈ ಸಂದರ್ಭವನ್ನು ನೋಡಿದರೆ ನನ್ನ ಮೇಲೆ ಅಪರಾಧವು ಸಾಬೀತಾಗಿ ನನಗೆ ಜೈಲಾಗುತ್ತದೆಂದೇ ಕಾಣುತ್ತದೆ. ಹಾಗಾದರೂ ಪರವಾಯಿಲ್ಲ. ನನ್ನನ್ನು ಚೆನ್ನಾಗಿ ಬಲ್ಲವರು "ನಿರಪರಾಧಿಯಾದ ಪ್ರಕಾಶನು ಮೋಸಕ್ಕೆ ಗುರಿಯಾಗಿ ಶಿಕ್ಷೆಯನ್ನು ಅನುಭವಿಸಿದ." ಎಂದು ಸಹಾನುಭೂತಿಯನ್ನು ತೋರುತ್ತಾರೆ. ಈಗ ನೀವು ಮಾಡುವ ಕೆಲಸದಿಂದ ನಾನೂ ಅಪರಾಧವನ್ನು ಒಪ್ಪಿಕೊಂಡಂತೆ ಆಗುತ್ತದೆ. ನನ್ನಲ್ಲಿ ನಿಮಗೆ ಅಣುಮಾತ್ರವಾದರೂ ವಿಶ್ವಾಸವಿದ್ದರೆ ನನಗೆ ಅಂತಹ ದುರ್ಗತಿಯನ್ನು ತರಬೇಡಿ." ಎಂದ.

ಲತೆಯು ಸುಮ್ಮನಾದಳು.

ಸಾಹೇಬರು ಸಹ ಎದ್ದು ನಿಂತುಕೊಂಡು "ಹೊರಡುವ ಮೊದಲು ಮಾಡಬೇಕಾದ ಸಣ್ಣ ಕೆಲಸವೊಂದಿದೆ." ಎಂದರು.

ಅದು ತನಗೇ ಹೇಳಲ್ಪಟ್ಟ ಮಾತೆನ್ನುವಂತೆ ಪ್ರಕಾಶನು ಅವರ ಕಡೆಗೆ ನೋಡಿದ.

"ಪ್ರಕಾಶರೇ ! ನಿಮ್ಮನ್ನು ಈಗ ಪೋಲೀಸ್ ಕಸ್ಟಡಿಗೆ ತೆಗೆದುಕೊಳ್ಳುತ್ತೇನೆಂದು ಹೇಳಿದನಷ್ಟೇ. ಹಾಗೆ ತೆಗೆದುಕೊಳ್ಳುವ ಮೊದಲು ನಿಮ್ಮನ್ನು ಜಪ್ತೀ ಮಾಡಬೇಕಾಗಿದೆ."

"ನಾನೇ ನಿಮ್ಮ ಜೊತೆಯಲ್ಲಿ ಬರುವಾಗ ಜಪ್ತಿ ಮಾಡುವ ಅಗತ್ಯವೇನಿದೆ ?"

"ಇದೆ. ನಿಮ್ಮ ಬಳಿ ರಿವಾಲ್ವಾರ್ ಇರಬಹುದು. ಪ್ರಾಣ ತೆಗೆದುಕೊಳ್ಳುವಂತಹ ಮತ್ತಾವುದಾದರೂ ಪದಾರ್ಥವಿರಬಹುದು. ಅಥವಾ ಮತ್ತೇನಾದರೂ ಅಮೂಲ್ಯ ಪದಾರ್ಥವಿತ್ತೆಂದೂ, ಅದು ಗೈರುವಿಲೆಯಾಯಿತೆಂದೂ ಪೋಲೀಸಿನವರ ಮೇಲೆ ಅಪವಾದವು ಬರಬಹುದು. ಆದರಿಂದ ಮೊದಲೇ ನೋಡಿರುವುದು ಒಳ್ಳೆಯದು."

ಬಾರಿನಲ್ಲಿ ಅಷ್ಟೊಂದು ಜನರಿರುವಾಗ ಪೋಲೀಸ್ ಅಧಿಕಾರಿಯು ತನ್ನನ್ನು ಜಫ್ತಿಮಾಡುವುದು ಅಪಮಾನವೆಂದು ಪ್ರಕಾಶನಿಗೆ ಕಂಡಿತು. ಆದರೆ ದಸ್ತಗಿರಿಯೇ ಆಗುತ್ತಿರುವಾಗ ಜಫ್ತಿ ಆದರೇನಂತೆ ಎಂದುಕೊಂಡ.

"ಆಗಬಹುದು."

ಸಾಹೇಬರು ಅವನ ಜೇಬುಗಳಿಲ್ಲೆಲ್ಲಾ ಕೈಹಾಕಿ ಹುಡುಕಿದರು. ಇಪ್ಪತ್ತು ಮೂವತ್ತು ರೂಪಾಯಿಗಳಷ್ಟು ಚಿಲ್ಲರೆ ವಿನಾ ಮತ್ತೇನೂ ಇರಲಿಲ್ಲ. ಆದರೆ ಹಾಗೆಯೇ ಹುಡುಕುತ್ತಿರುವಾಗ ಒಂದು ಜೇಬಿನಲ್ಲಿ ನೂರು ರೂಪಾಯಿಗಳ ಕರೆನ್ಸಿ ನೋಟುಗಳಿದ್ದವು.

ಇಬ್ರಾಹಿಂ ಸಾಹೇಬರು ಪುನಃ ಕುರ್ಚಿಯ ಮೇಲೆ ಕುಳಿತುಕೊಂಡು ಅವುಗಳನ್ನು ಎಣಿಸಿದರು. ಇಪ್ಪತ್ತು ಮೂವತ್ತು ನೋಟುಗಳಿದ್ದವು ತಮ್ಮ ಜೇಬಿನಿಂದ ತುಂಡು ಕಾಗದವೊಂದನ್ನು ತೆಗೆದು ಅದರಲ್ಲಿದ್ದ ನಂಬರುಗಳನ್ನೂ, ನೋಟಿನ ಮೇಲಿದ್ದ ನಂಬರುಗಳನ್ನೂ ಹೋಲಿಸಿ ನೋಡಿದರು. ಮೂವತ್ತು ನೋಟುಗಳ ಮೇಲಿದ್ದ ನಂಬರುಗಳೂ ಅವರು ಹೊರತೆಗೆದ ಕಾಗದದ ತುಂಡಿನಲ್ಲಿ ಬರೆಯಲ್ಪಟ್ಟಿದ್ದವು.

"ಬ್ಯಾಂಕಿನಲ್ಲಿ ಗೈರುವಿಲೆಯಾದ ನೋಟುಗಳಲ್ಲಿ ಕೆಲವು ಇವು. ಈಗೇನು ಹೇಳುತ್ತೀರಿ, ಪ್ರಕಾಶ್ ?"

"ನಾನು ಏನೂ ಹೇಳಲಾರೆ. ಶುದ್ಧ ಮೋಸ, ಶುದ್ಧ ಮೋಸ."

ಸಾಹೇಬರು ಪ್ರಕಾಶನ ಕೈಹಿಡಿದು ಕರೆದುಕೊಂಡು ಹೋದರು. ಚಲಂ ಮತ್ತು ಕುಪ್ಪುಸ್ವಾಮಿಯೂ ಅವರನ್ನು ಅನುಸರಿಸಿದರು.

ಅತ್ತ ಕಡೆಗೇ ನೋಡುತ್ತಾ ನಿಂತಿದ್ದ ಲತೆಯ ಕಣ್ಣಿನಲ್ಲಿ ಎರಡು ಹನಿ ನೀರು ಉದುರಿತು.

೮

ಪೋಲೀಸ್ ಲಾಕಪ್ಪಿನಲ್ಲಿದ್ದ ತನ್ನನ್ನು ನೋಡಿ ಮಾತನಾಡಿಕೊಂಡು ಹೋಗಲು ಬಂದಿದ್ದ ತಂದೆಯನ್ನು ಕುರಿತು ಪ್ರಕಾಶ ಹೇಳಿದ.

"ಅಪ್ಪಾ, ನೀನು ವಿಕ್ರಮ ರಾಜನ ಕತೆಯನ್ನು ಬಲ್ಲೆಯಾ ?"

ಪ್ರಕಾಶನ ತಂದೆ ರಮಾನಂದ ಪೈ ಗೊತ್ತಿದ್ದ ಕಥೆಯನ್ನು ನೆನೆಸಿ ಕೊಳ್ಳುವ ಸ್ಥಿತಿಯಲ್ಲಿಯೂ ಇರಲಿಲ್ಲ. ಗೊತ್ತಿಲ್ಲದ ಕಥೆಯನ್ನು ಕೇಳಿ ತಿಳಿದು ಕೊಳ್ಳುವ ಸ್ಥಿತಿಯಲ್ಲಿಯೂ ಇರಲಿಲ್ಲ. ಮದರಾಸಿಗೆ ಹೋಗಿದ್ದವರು ವಾಪ್ಸು ಬಂದು ಬೆಳಗಾಗ ಮನೆಗೆ ಹೋಗುತ್ತಿದ್ದಂತೆಯೇ ಅವರ ಹೆಂಡತಿ ಗೋಳೋ ಎಂದು ಅಳುತ್ತಿದ್ದುದು ಕೇಳಿಸಿತು. ವಿಷಯವೇನೆಂದು ವಿಚಾರಿಸಿ ತಿಳಿದು ಕೊಳ್ಳಲು ಅವರ ಎದೆ ಹೊಡೆದುಕೊಂಡಿತು. ರಾತ್ರಿಯಿಂದ ನಿದ್ದೆ ಸಹ ಇಲ್ಲದೇ ಅತ್ತು ಅತ್ತು ಕಣ್ಣುಗಳನ್ನು ಹುಣ್ಣುಮಾಡಿಕೊಂಡಿದ್ದ ಹೆಂಡತಿ ಯನ್ನು ಸಮಾಧಾನ ಮಾಡಲಿಲ್ಲ. ಸ್ಟೇಷನ್ನಿನಿಂದ ಬಂದವರು ಅಡಿಗೆಯವನು ಎದುರಿಗೆ ತಂದಿಟ್ಟ ಕಾಫಿಯನ್ನೂ ಕುಡಿಯಲಿಲ್ಲ. ಹಾಗೆಯೇ ನೇರವಾಗಿ ಟರ್ವ ಬ್ಯಾಂಕ್‌ಗೆ ಓಡಿದರು. ಅದಕ್ಕೆ ಸೇರಿದಂತೆಯೇ ಮ್ಯಾನೇಜರ್ ಆನಂದರಾಯರ ಮನೆ. ಅವರನ್ನು ನೋಡಿ ಮಾತನಾಡಿಕೊಂಡು ಪೋಲೀಸ್ ಸ್ಟೇಷನ್ನಿಗೆ ಬಂದಿದ್ದರು ದಫೇದಾರ ತಂದೆಯು ಮಗನನ್ನು ನೋಡಲು ಅವಕಾಶ ಕೊಡಲಿಲ್ಲ. ಇನ್ಸ್‌ಪೆಕ್ಟರು ಬರುವವರೆವಿಗೆ ತಡೆಯಬೇಕೆಂದು ಹೇಳಿದ. ಇಬ್ರಾಹಿಂ ಸಾಹೇಬರು ಬಂದನಂತರ ಪ್ರಕಾಶನನ್ನು ನೋಡಲು ಸಾಧ್ಯವಾಯಿತು.

ಅವನನ್ನು ನೋಡಿ ವಿಷಯ ಪ್ರಸ್ತಾಪ ಮಾಡುತ್ತಿದ್ದಂತೆಯೇ ಅವನು "ವಿಕ್ರಮ ರಾಜನ ಕಥೆಯನ್ನು ಬಲ್ಲೆಯಾ ?" ಎನ್ನುತ್ತಾನೆ.

ಹೊಟ್ಟೆಯುರಿಯುತ್ತಿದ್ದರೂ ಇಲ್ಲದ ಸಮಾಧಾನವನ್ನು ತಂದುಕೊಂಡು

"ಪ್ರಕಾಶ್, ಹಾಳು ವಿಕ್ರಮ ರಾಜನ ಕತೆಯು ಯಾರಿಗೆ ಬೇಕಾಗಿದೆ? ನಾನು ಹೇಳುವುದನ್ನು ಸ್ವಲ್ಪ ಕೇಳು." ಎಂದರು ರಮಾನಂದ ಪೈ.

"ನಾನು ಹೇಳುವುದಷ್ಟನ್ನು ಕೇಳಿಬಿಡು. ಅನಂತರ ಏನು ಬೇಕಾದರೂ ಹೇಳು...."

ತಂದೆ ಮಗನ ಕಡೆ ನೋಡುತ್ತಾ ಸುಮ್ಮನೆ ಕುಳಿತರು.

"ರಾಜಾಂತಃಪುರದಲ್ಲಿದ್ದ ಚಿತ್ತಾರದ ಹಂಸೆಗಳು ನಿಜರೂಪದಿಂದ ಬಂದು ಕಂಠಾವಳಿಯ ಮುತ್ತುಗಳನ್ನು ನುಂಗಿ ಪುನಃ ಚಿತ್ತರದಲ್ಲಿ ಹೋಗಿ ಸೇರಿಕೊಂಡವು. ಅದನ್ನು ವಿಕ್ರಮ ರಾಜನು ಕಣ್ಣಾರೆ ಕಂಡ. ಆದರೆ ಅವನ ಮಾತುಗಳನ್ನು ಯಾರು ನಂಬುತ್ತಾರೆ. ನನ್ನ ಸ್ಥಿತಿಯೂ ಅದೇ. ನಿನ್ನೆಯ ದಿನ ನಾನು ಕ್ಯಾಷ್ ಕೊಟ್ಟ ಚಕ್ಕಿನ ಮೇಲೆ ನಲವತ್ತು ಸಾವಿರಗಳೆಂದು ಸ್ಪಷ್ಟವಾಗಿ ಬರೆದಿತ್ತು ಎಂದರೆ ಯಾರು ನಂಬುತ್ತಾರೆ. ಶನಿ ಮಹಾರಾಯನು ಯಾರ ಬೆನ್ನು ಹತ್ತಿರುತ್ತಾನೆಯೋ ಅವರು ಹೇಳುವ ಮಾತುಗಳನ್ನು ಯಾರೂ ನಂಬುವುದಿಲ್ಲ. ಇನ್ನೊಬ್ಬರ ವಿಷಯವನ್ನು ಯಾಕೆ ಹೇಳೋಣ? ಎದೆ ಮುಟ್ಟಿಕೊಂಡು ಹೇಳು. ನಾನು ಹೇಳುವ ಮಾತುಗಳನ್ನು ತಂದೆಯಾದ ನೀನಾದರೂ ನಂಬುತ್ತೀಯಾ? ಇಲ್ಲ. ಅದರಲ್ಲಿ ನಿನ್ನ ತಪ್ಪೆಂದು ನಾನು ಹೇಳುವುದಿಲ್ಲ. ಆ ಮಹಾರಾಯನ ಪ್ರಭಾವವು ಅಂತಹದು. ಅದರಿಂದ ನೀನು ಕೇಳುವುದೂ, ನಾನೂ ಹೇಳುವುದೂ ವ್ಯರ್ಥ."

"ಹೀಗೆ ಮಾತನಾಡಿದರೆ ನಾನೇನು ಮಾಡಲಿ, ಹೇಳು."

"ನೀನು ಏನು ಮಾಡುವುದಕ್ಕೂ ಆಗುವುದಿಲ್ಲ, ಸುಮ್ಮನಿದ್ದುಬಿಡು."

"ಹೇಳುವುದೇನೋ ಹೇಳಿಬಿಟ್ಟೆ ಪ್ರಕಾಶ. ನಿಜವಾಗಿ ಏನಾಗುತ್ತದೆಂಬುದನ್ನು ಯೋಚನೆ ಮಾಡು. ನನ್ನ ಮಗ ಹೀಗೆ ಮಾಡಿದನೆಂದರೆ ನಾನು ಮುಖ ಎತ್ತಿಕೊಂಡು ಹೇಗೆ ತಿರುಗಲಿ. ನಿನ್ನ ತಾಯಿ ಗೋಳೋ ಎಂದು ಅಳುತ್ತಿದ್ದಾಳೆ. ನಿನ್ನನ್ನು ಮನೆಗೆ ಕರೆದುಕೊಂಡು ಬರುವವರೆಗೂ ಊಟಮಾಡುವುದಿಲ್ಲವೆಂದು ಹಟ ಹಿಡಿದು ಕುಳಿತಿದ್ದಾಳೆ. ಅವಳಿಗೇನು ಹೇಳಲಿ?"

"ನಿಜ, ಅದು ನನಗೂ ಅರ್ಥವಾಗುತ್ತದೆ. ಆದರೆ ನಾನು ಕಾನೇ

ಏನು ಮಾಡಲಿ, ಹೇಳು. ದುರದೃಷ್ಟವಂತನಾದ ಮಗನನ್ನು ಹಡೆದದ್ದಕ್ಕೆ ನೀವೂ ನೋವು ಪಡಬೇಕಾಗಿ ಬಂದಿತು – ಎಂದು ಮಾತ್ರ ಹೇಳಬಲ್ಲೆ."

"ನನ್ನ ಪ್ರಶ್ನೆಯೊಂದಕ್ಕೆ ಜವಾಬು ಹೇಳುತ್ತೀಯಾ ?"

"ಪ್ರಯೋಜನವೇನು, ನನ್ನ ಮಾತು ನೀನೂ ಸಹ ನಂಬುವುದಿಲ್ಲವೆಂದು ನಾನು ಮೊದಲೇ ಹೇಳಲಿಲ್ಲವೇ ?"

"ಹಾಗೆಲ್ಲಾ ಮಾತನಾಡಬೇಡ. ನಾನು ಕೇಳಿದ್ದಕ್ಕೆ ಜವಾಬು ಹೇಳು ?"

"ನಿನಗೆ ತೃಪ್ತಿಯಾಗುವುದಕ್ಕಾಗಿ ಮಾತ್ರ ಹೇಳಬೇಕಾಗಿದೆ."

"ಹಾಗೆಯೇ ಅಂದುಕೋ. ನಾನು ನಿನ್ನ ತಂದೆ. ನೀನು ಎಷ್ಟು ತಪ್ಪುಮಾಡಿದರೂ ಅದನ್ನು ನುಂಗಿಕೊಳ್ಳಬೇಕಾದವನು. ನನ್ನ ಬಳಿ ನಿಜ ಹೇಳು. ನೀನು ಬ್ಯಾಂಕಿನ ಹಣ ಭಪಹರಣೆ ಮಾಡಿದ್ದುಂಟೋ ?"

"ನಿಮಗೆ ಬೇಕಾದುದು ನಿಜವಾದರೆ – ಇಲ್ಲ.

"ಹಾಗಾದರೆ ನಾಲ್ಕು ಸಾವಿರ ರೂಪಾಯಿನ ಚೆಕ್‌ಗೆ ನಲವತ್ತು ಸಾವಿರ ಕೊಟ್ಟುದಾಗಿ ಯಾಕೆ ಬರೆದೆ ?"

"ವಿಷಯ ಮೊದಲಿಗೇ ಬಂದಿತು. ನಾನು ಆ ಪ್ರಶ್ನೆಗೆ ಜವಾಬು ಹೇಳ ಬಲ್ಲವನಾಗಿದ್ದಿದ್ದರೆ ಒಂದು ಕ್ಷಣ ಕಾಲವೂ ಈ ಲಾಕಪ್ಪಿನಲ್ಲಿರುತ್ತಿರಲಿಲ್ಲ. ಈ ಇನ್ಸ್ಪೆಕ್ಟರು ನನ್ನನ್ನು ಹಿಡಿದುಕೊಂಡು ಬಂದು ಇಲ್ಲಿಟ್ಟಿದ್ದರೂ, ಮನುಷ್ಯ ಬಹಳ ಒಳ್ಳೆಯವರು ನ್ಯಾಯವಾದ ಯಾವ ಸಹಾಯವನ್ನು ಬೇಕಾದರೂ ಮಾಡುವುದಕ್ಕೆ ಅವರು ತಯಾರಾಗಿದ್ದಾರೆ. ಈಗ ಆ ವಿಷಯ ಮಾತನಾಡಿ ಪ್ರಯೋಜನವಿಲ್ಲ. ನಾನು ನಿಜವನ್ನು ಹೇಳಿದರೂ ಯಾರೂ ನಂಬುವುದಿಲ್ಲ. ಬಿಡಿ."

ಸ್ವಲ್ಪ ಹೊತ್ತು ಯೋಚಿಸಿ ರಮಾನಂದ ಪೈಗಳು "ಪ್ರಕಾಶ್, ನನಗಿರುವವನು ನೀನೊಬ್ಬನೇ ಮಗ. ನಿನಗೆ ಗೊತ್ತಿರುವಂತೆ ನನಗೆ ಬೇಕಾದಷ್ಟು ಆಸ್ತಿಯಿದೆ. ನಾನೂ ನಿನ್ನ ತಾಯಿಯೂ ಮುದುಕರಾಗಿದ್ದೇವೆ. ಅದನ್ನಿಟ್ಟುಕೊಂಡು ನಾವು ಮಾಡಬೇಕಾದುದಾದರೂ ಏನಿದೆ ? ಅದಷ್ಟು ಆಸ್ತಿಯೂ ನಿನ್ನದು. ನಿನ್ನ ಸುಖಕ್ಕೇ ಇಲ್ಲದ ಆ ಆಸ್ತಿಯಿಂದ ಏನು ಪ್ರಯೋಜನ ? ಇದುವರೆವಿಗೆ ಏನಾಗಿದೆಯೋ ಆಗಿಹೋಯಿತು. ನಾನು ಪುನಃ ಈ

ವಿಷಯ ಮಾತನಾಡುವುದಿಲ್ಲ. ಈಗ ಮೂವತ್ತಾರು ಸಾವಿರ ರೂಪಾಯಿ ಗಳನ್ನು ಕೊಟ್ಟುಬಿಟ್ಟರೆ ಕಂಪ್ಲೈಂಟು ವಾಪ್ಸು ತೆಗೆದುಕೊಳ್ಳುವುದಾಗಿ ಆನಂದರಾಯರು ಹೇಳುತ್ತಾರೆ. ನಾನು ಉಡಿಪಿಗೆ ಬೇಕಾದರೂ ಹೋಗಿ ಈ ವಿಷಯ ಒಪ್ಪಿಸಿಕೊಂಡು ಬರುತ್ತೇನೆ. ಇದೇ ನನ್ನ ತೀರ್ಮಾನ. ನೀನು ಯೋಚಿಸಬೇಡ." ಎಂದು ಹೇಳಿದರು.

"ನೀನು ಹೇಳುವ ಮಾತಿಗೆ ಏನು ಅರ್ಥವೆಂಬುದನ್ನು ಬಲ್ಲೆಯಾ ಅಪ್ಪಾ? ಮೂವತ್ತಾರು ಸಾವಿರ ರೂಪಾಯಿಗಳನ್ನು ಛಪಾವಣೆ ಮಾಡಿದ್ದೇನೆಂದು ನಾನು ಒಪ್ಪಿಕೊಳ್ಳುವುದು ಅಲ್ಲವೇ? ನಾನು ಮಾಡದೇ ಇರುವ ಅಪರಾಧವನ್ನು ನಾನೇಕೆ ಒಪ್ಪಿಕೊಳ್ಳಬೇಕು? ನನ್ನ ಜೀವವಿರುವವರೆವಿಗೂ ನಾನು ಇದಕ್ಕೆ ಒಪ್ಪುವುದಿಲ್ಲ."

ರಮಾನಂದ ಪೈಗಳು ತಮ್ಮ ಯೋಚನೆಗೆ ಮಗನನ್ನು ಒಪ್ಪಿಸಲು ಎಷ್ಟೋ ಪ್ರಯತ್ನ ಮಾಡಿದರು. ಕಡೆಗೂ ಅವನು ಒಪ್ಪದಿರಲು ಆಗ ಹೇಳಿದರು.

"ಪ್ರಕಾಶ, ನಾನಂತೂ ಈ ವಿಷಯದಲ್ಲಿ ತೀರ್ಮಾನ ಮಾಡಿಬಿಟ್ಟಿದ್ದೇನೆ. ನಿನ್ನನ್ನು ಬಿಡಿಸಿ ಮನೆಗೆ ಕರೆದುಕೊಂಡು ಹೋಗುವುದೊಂದೇ ನನಗೆ ಬೇಕಾದುದು. ನಿನ್ನ ಒಪ್ಪಿಗೆ ನನಗೇನೂ ಮುಖ್ಯವಲ್ಲ. ನಾನು ಹೋಗಿ ಬ್ಯಾಂಕಿಗೆ ಹಣ ಕಟ್ಟಿ ನಿನ್ನ ಮೇಲಿನ ಕಂಪ್ಲೈಂಟು ವಾಪ್ಸು ತೆಗೆದುಕೊಳ್ಳುವಂತೆ ಮಾಡುತ್ತೇನೆ."

ಪ್ರಕಾಶನು ನಗುತ್ತಾ "ಅದೇನು ಅಷ್ಟು ಸುಲಭವಾದ ಕೆಲಸವೆಂದು ಕೊಂಡಿದ್ದೀಯಾ? ನಿನ್ನ ಪ್ರಯತ್ನದಿಂದ ಅವರು ಕಂಪ್ಲೈಂಟು ವಾಪ್ಸು ತೆಗೆದುಕೊಂಡರೆ ಅನಾವಶ್ಯಕವಾಗಿ ನನ್ನನ್ನು ಅಪಮಾನಗೊಳಿಸಿದರೆಂದು ಬ್ಯಾಂಕಿನ ಮೇಲೆ ನಾನು ದಾವಾ ಮಾಡುತ್ತೇನೆ. ಅಷ್ಟೇ ಅಲ್ಲ, ನೀನು ಹಾಗೆ ಮಾಡಿದ ದಿನ ನೀನು ತಂದೆಯೂ ಅಲ್ಲ, ನಾನು ಮಗನೂ ಅಲ್ಲ. ನೀನು ಅಂತಹ ಕೆಲಸ ಮಾಡಬೇಡ. ಬ್ಯಾಂಕಿನವರು ಕಂಪ್ಲೈಂಟು ವಾಪ್ಸು ತೆಗೆದುಕೊಳ್ಳುವುದಕ್ಕೂ ಬಿಡುವುದಿಲ್ಲ. ನಾನು ಮನೆಗೆ ವಾಪ್ಸು ಬರುವುದೂ ಇಲ್ಲ. ಹೀಗೆ ನಿನ್ನ ಉದ್ದೇಶ್ಯ ಈಡೇರುವುದಿಲ್ಲ." ಎಂದ.

ಪೈಗಳು ಗೋಳುಗರೆಯುತ್ತಾ "ನಾನು ಏನು ಮಾಡುವುದಕ್ಕೂ ಬಿಡದಿದ್ದರೆ ಹೇಗೆ? ನನ್ನ ಹೊಟ್ಟೆಯನ್ನೇಕೆ ಉರಿಸುತ್ತೀಯೆ?'' ಎಂದು ಗೋಳಾಡತೊಡಗಿದರು.

ಆಗ ಪ್ರಕಾಶನು "ಅಪ್ಪಾ, ವಸ್ತುವವಾಗಿ ನನಗೆ ಸಹಾಯ ಮಾಡಬೇಕೆಂಬ ಮನಸ್ಸಿದೆಯೋ?'' ಎಂದುಕೇಳಿದ.

"ಇದೇನು ಹೇಗೆ ಮಾತನಾಡುತ್ತೀಯೋ? ಯಾವ ತಂದೆಗೆ ತಾನೇ ತನ್ನ ಮಗನಿಗೆ ಸಹಾಯ ಮಾಡುವ ಮನಸ್ಸಿರುವುದಿಲ್ಲ? ನಾನು ಎಷ್ಟೇ ನಿರ್ಭಾಗ್ಯನಾದರೂ ಸಹ ನಿನ್ನ ತಂದೆಯಲ್ಲವೇ?''

''ಹಾಗೆಲ್ಲಾ ಬಳಸಿಕೊಂಡು ಹೇಳುವುದು ಬೇಡ. ಸ್ಪಷ್ಟವಾಗಿ ಹೇಳು. ನಾನೊಂದು ಸಹಾಯವನ್ನು ಕೇಳಿದರೆ ಮಾಡುತ್ತೀಯಾ?"

"ಮಾಡುತ್ತೇನೆ. ಏನು ಬೇಕೆಂದರೂ ಮಾಡುತ್ತೇನೆ."

"ಸರಿ. ಹಾಗಾದರೆ ಈ ಊರಿನ ಗಾಂಧೀ ಬಜಾರಿನಲ್ಲಿ ಚಲಂ ಎಂಬೊಬ್ಬ ಖಾಸಗೀ ಪತ್ತೇದಾರರಿದ್ದಾರೆ. ಅವರು ಅತ್ಯಂತ ಚತುರರೆಂದೂ, ಅತ್ಯಾಶ್ಚರ್ಯವಾಗುವಂತಹ ರೀತಿಯಲ್ಲಿ ನಿರಪರಾಧಿಗಳನ್ನು ಉಳಿಸಿದ್ದಾರೆಂದೂ ಕೇಳಿದ್ದೇನೆ. ನಮ್ಮ ಬ್ಯಾಂಕ್‌ನಲ್ಲಿಯೇ ಅವರ ಅಕೌಂಟ್ ಇರುವುದರಿಂದ ಒಂದು ರೀತಿಯಲ್ಲಿ ಅವರ ಪರಿಚಯವೂ ಇದೆ. ನಿನ್ನೆಯ ದಿನ ಪೋಲೀಸ್ ಇನ್ಸ್‌ಪೆಕ್ಟರು ನನ್ನನ್ನು ದಸ್ತಗಿರಿ ಮಾಡಿದಾಗ ಅವರೂ ಸಹ ಅವರ ಜೊತೆಯಲ್ಲಿದ್ದರು. ಅವರ ಮುಖಭಾವ, ಅವರು ನೋಡುತ್ತಿದ್ದ ರೀತಿಗಳನ್ನು ನೋಡಿದರೆ ನನ್ನಲ್ಲಿ ಸಹಾನುಭೂತಿಯಿರುವಂತೆ ಕಾಣುತ್ತಿತ್ತು. ನೀನು ಅವರ ಬಳಿಗೆ ಹೋಗಿ ಅವರೆಷ್ಟು ದುಡ್ಡು ಕೇಳುತ್ತಾರೆಯೋ ಕೊಟ್ಟು, ಈ ಕೇಸಿನ ಪತ್ತೇ ತರದೂದು ಮಾಡಲು ಅವರನ್ನು ಒಪ್ಪಿಸು."

ಮಗನ ಮನೋಭಾವವು ರಮಾನಂದ ಪೈಗಳಿಗೆ ಚೆನ್ನಾಗಿ ಗೊತ್ತಿತ್ತು. ಅವನು ಯಾವುದಾದರೊಂದು ತೀರ್ಮಾನವನ್ನು ತೆಗೆದುಕೊಂಡರೆ ಬಡಪೆಟ್ಟಿಗೆ ಅದನ್ನು ಬದಲಾಯಿಸುತ್ತಿರಲಿಲ್ಲ. ಆದರಿಂದ ವಿಧಿಯಿಲ್ಲದೇ ಒಪ್ಪಿಕೊಂಡರು.

ಅಲ್ಲಿಂದ ಬರುತ್ತಾ "ಹಾಗೆಯೇ ಆಗಲಿ, ಭಗವಂತನ ಇಚ್ಛೆಯಿದ್ದಂತೆ ಆಗಲಿ." ಎಂದು ಹೇಳಿ ಹೊರಗೆ ಬಂದರು.

೯

ಪೋಲೀಸ್ ಬಾಬು ಸರ್ಕಾರಕ್ಕೆ ಸೇರಿದ್ದಾದರೂ ಸಹ ರಜಾ ಇರುವುದಿಲ್ಲವಷ್ಟೇ. ಹಾಗೆಯೇ ಪತ್ತೇದಾರರಿಗೂ ರಜಾ ಇಲ್ಲ. ಆ ದಿನ ಭಾನುವಾರವಾದರೂ ಸಹ ಚಲಂನ ಸಹಚರರಾದ ಉಷಾ ಮತ್ತು ಕುಪ್ಪುಸ್ವಾಮಿ ಕಚೇರಿಗೆ ಬಂದಿದ್ದರು.

ಕುಪ್ಪುಸ್ವಾಮಿಯು ಅತ್ಯಂತ ಮಹತ್ವವಾದ ವಿಷಯವೊಂದನ್ನು ಹೇಳುವಂತೆ ಹೇಳಿದ.

"ಉಷಾ, ಪ್ರೇಮದ ನಿಜವಾದ ಸ್ವರೂಪವೇನೆಂಬುದನ್ನು ನಾನು ಪ್ರತ್ಯಕ್ಷವಾಗಿ ಕಂಡೆ."

ಉಷೆಯು ಸ್ವಭಾವತಃ ಚತುರೆ. ಅನೇಕ ವರ್ಷ ಚಲಂನ ಕಚೇರಿಯಲ್ಲಿ ಕೆಲಸ ಮಾಡುತ್ತಾ, ಯಾವುದನ್ನೇ ಆಗಲಿ ಸೂಕ್ಷ್ಮವಾಗಿ ಪರಿಶೀಲಿಸುವುದು ಅವಳಿಗೆ ಅಭ್ಯಾಸವಾಗಿದ್ದಿತು. ಇತ್ತೀಚೆಗೆ ಕೆಲವು ದಿನಗಳಿಂದ ಕುಪ್ಪುಸ್ವಾಮಿಯಲ್ಲಿ ಪ್ರೇಮಾಂಕುರವಾಗಿರುವುದನ್ನು ಗಮನಿಸಿದ್ದಳು. ಆ ಅಂಕುರವು ಮರವಾಗಿ ಬೆಳೆದು ಅವನ ತಲೆ ಭಾರವಾಗಿದೆ ಎಂದು ಭಾವಿಸಿದಳು. ಅವನಷ್ಟೇ ಗಾಂಭೀರ್ಯದಿಂದ ಕೇಳಿದಳು.

"ಕುಪ್ಪುಸ್ವಾಮಿ, ಯಾವಳಾದರೂ ನತದೃಷ್ಟೆಯು ನಿನಗೆ ಸಿಕ್ಕಿದ್ದಳೇ? ನೀನು ಕೊಡಿಸಿದ ಬ್ರಾಂದಿಯನ್ನೋ ವಿಸ್ಕಿಯನ್ನೋ ಮೂಗಿನವರೆವಿಗೆ ಕುಡಿದುಬಿಟ್ಟು ನಿನ್ನನ್ನು ಪ್ರೀತಿಸುವುದಾಗಿ ಹೇಳಿದಳೇ? ನೀನಿಲ್ಲದಿದ್ದರೆ ತನ್ನ ಜೀವನವು ಮರಳು ಕಾಡಿನ ಬೆಳದಿಂಗಳಿನಂತೆ ವ್ಯರ್ಥವಾದುದೆಂದು ಪ್ರೇಮಾಲಾಪ ಮಾಡಿ ನಿನ್ನನ್ನು ನಂಬಿಸಿದಳೇ?"

ಸರಿಯುಲ್ಲದ ಆಲೋಚನೆ ಬಂದಾಗ ಮಾಡುವಂತೆ ತಲೆಯನ್ನು ಕೊಡವಿ "ನಾನು ಸ್ವಾರಸ್ಯವಾದುದೊಂದು ವಿಷಯವನ್ನು ಹೇಳಲು ಹೊರಟಿರುವಾಗ ಅಡ್ಡಿ ಮಾಡುತ್ತಿದ್ದೀಯೆ, ಅದಿರಲಿ. ವಾಸ್ತವವಾದ ಪ್ರೇಮದ ಅರ್ಥವೇನೆಂಬುದನ್ನು ಬಲ್ಲೆಯಾ?" ಎಂದ.

"ಬಲ್ಲೆ. ಪ್ರೇಮದ ಅರ್ಥವು ಹೇಗಾದರೂ ಇರಲಿ, ಪರಿಣಾಮವು ಅವಿವೇಕ, ಹುಚ್ಚು. ಅದರ ಸ್ವರೂಪವು ನೀನು."

ಅವಳ ಮಾತು ಕಿವಿಗೆ ಹಾಕಿಕೊಳ್ಳದೇ "ಪ್ರೇಮದ ಸ್ವರೂಪವು ತ್ಯಾಗ, ಸಂಪೂರ್ಣ ತ್ಯಾಗ. ಒರೆಗಲ್ಲಿಗೆ ತಿಕ್ಕಿ ಚಿನ್ನವು ಹೌದೇ ಅಲ್ಲವೇ ಎಂದು ನೋಡುತ್ತಾರೆಯಷ್ಟೇ. ಅದೇ ರೀತಿ ಯಾವುದಾದರೊಂದು ವ್ಯಕ್ತಿ ಪ್ರೇಮಮಯಿಯೋ ಅಲ್ಲವೇ ಎಂಬುದನ್ನು ನಿರ್ಣಯಿಸಬೇಕಾದರೆ ಅದು ತ್ಯಾಗ ಮಾಡಬಲ್ಲುದೇ ಇಲ್ಲವೆಂಬುದನ್ನು ಮೊದಲು ನೋಡಬೇಕು." ಎಂದ.

ಉಷೆಯು "ಬಹಳ ಸರಿಯಾಗಿದೆ ಕುಪ್ಪು. ನೀನೀಗ ಮಾತನಾಡುವುದನ್ನು ತ್ಯಾಗಮಾಡಿದರೆ ನೀನು ಪ್ರೇಮಮಯಿ ಎಂಬುದನ್ನು ಒಪ್ಪುತ್ತೇನೆ." ಎಂದಳು.

"ನಾನು ಪ್ರೇಮಮಯಿ ಎಂಬುದನ್ನು ನೀನು ಒಪ್ಪದಿದ್ದರೂ ಸಹ ನಿನಗೆ ಒಂದು ವಿಷಯವನ್ನು ಹೇಳಬೇಕು. ಹಣ ಅಪಹರಣ ಮಾಡಿದನೆಂದು ಟರ್ಫ್ ಬ್ಯಾಂಕಿನಲ್ಲಿದ್ದ ಪ್ರಕಾಶನನ್ನು ಇಬ್ರಾಹಿಂ ಸಾಹೇಬರು ನಿನ್ನೆಯ ದಿನ ದಸ್ತಗಿರಿ ಮಾಡಿದರು. ಆ ಸಮಯದಲ್ಲಿ ಲತೆ ಎಂಬ ತರುಣಿಯು ಅವನು ಅಪಹರಣ ಮಾಡಿದನೆಂದು ಹೇಳಲಾಗುವಷ್ಟು ಹಣವನ್ನು ತಾನು ಕೊಡುವುದಾಗಿಯೂ ಅವನನ್ನು ಬಿಟ್ಟು ಹೋಗಬೇಕೆಂದೂ ಹೇಳಿದಳು."

ಅವನಾ ಮಾತನ್ನು ಹೇಳುತ್ತಲೇ ಉಷೆಗೆ ವಿಷಯದಲ್ಲಿ ಎಲ್ಲಿಲ್ಲದ ಆಸಕ್ತಿಯುಂಟಾಗಿ ಕೇಳಿದಳು.

"ಅಪಹರಣೆಯಾಯಿತೆಂದು ಹೇಳುವ ಹಣವೆಷ್ಟು ?"

"ಮೂವತ್ತಾರು ಸಾವಿರ ರೂಪಾಯಿಗಳು ..."

"ನಿಜವೇ ಕುಪ್ಪುಸ್ವಾಮಿ, ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಡುವುದಕ್ಕೆ ಒಪ್ಪಿಕೊಂಡಳೇ ? ಆ ತರುಣಿ ಯಾರು ?

"ಒಪ್ಪಿಕೊಂಡಳು. ಇಲ್ಲದಿದ್ದರೆ ಈ ವಿಷಯವನ್ನೇಕೆ ಹೇಳುತ್ತಿದ್ದೆ. ಆ ತರುಣಿಯ ಹೆಸರು ಲತಾ. ಗುಲಾಬ್ ಚಂದ್ ಎಂಬ ಕುದುರೆ ಮಾಲೀಕನ ಮಗಳು. ಪ್ರಕಾಶನಿಗೂ ಅವಳಿಗೂ ಹೊಸ ಪರಿಚಯ."

"ಆಶ್ಚರ್ಯ! ಅಂತಹ ಸಮಯದಲ್ಲಿ ಮುಂದೆ ಬಂದು ತನ್ನನ್ನು ಖುಲಾಸೆ ಮಾಡಿಸಿದವಳಿಗೆ ಅವನು ಚಿರಋಣಿಯಾಗಿರಬೇಕು"

"ಊಹುಂ. ಹೇಳುವುದರಲ್ಲಿ ಅವಸರ ಪಡುತ್ತಿದ್ದೀಯೆ? ಅವನು ಅದಕ್ಕೆ ಒಪ್ಪಲಿಲ್ಲ...."

"ಅರೇ! ಇದು ಮತ್ತೂ ಆಶ್ಚರ್ಯವಾಗಿದೆ...."

"ಆಶ್ಚರ್ಯವೇನಿಲ್ಲ. ಅದೇ ನಾನು ಹೇಳುತ್ತಿರುವುದು. ಅವರಿಬ್ಬರೂ ವಾಸ್ತವವಾದ ಪ್ರೇಮಿಗಳು. ಅವಳು ತ್ಯಾಗ ಮಾಡಲು ಸಿದ್ಧವಾಗಿ ಹಣ ಕೊಡಲು ಸಿದ್ಧಳಾದಳು. ಅವನು ಅಷ್ಟೇ ತ್ಯಾಗ ಬುದ್ಧಿಯಿಂದ ಆ ಹಣ ಬೇಡವೆಂದು ನಿರಾಕರಿಸಿದ."

ಕುಪ್ಪುಸ್ವಾಮಿಯು ಮಾತು ಮುಗಿಸುತ್ತಿದ್ದಂತೆಯೇ ಚಲಂ ಒಳಗಿನಿಂದ ಹಜಾರಕ್ಕೆ ಬಂದ. ತಮ್ಮ ಮಾತುಗಳನ್ನು ಅವನೆಲ್ಲಿ ಕೇಳಿಸಿಕೊಂಡನೋ ಎಂದವರು ಸಂಕೋಚಪಡುತ್ತಿರುವಂತೆಯೇ ಹೇಳಿದ.

"ನೀವು ಯಾವ ದೃಷ್ಟಿಯಿಂದ ಪ್ರಕಾಶನ ವಿಷಯ ಮಾತನಾಡುತ್ತಿದ್ದೀರೋ ಕಾಣೆ. ಲತೆಯು ಕೊಡುತ್ತೇನೆಂದು ಹೇಳಿದ ಹಣವನ್ನು ಅವನು ನಿರಾಕರಿಸಿದ್ದು ದೊಡ್ಡ ಬುದ್ಧಿಯೆಂಬುದು ನಿಸ್ಸಂದೇಹವಾದರೂ ಕೇವಲ ತ್ಯಾಗವೇ ಅದರ ಹಿನ್ನೆಲೆ ಎಂದು ನನಗನ್ನಿಸುವುದಿಲ್ಲ ತನ್ನ ನಿರಪರಾಧಿತ್ವವನ್ನು ಸಾಬೀತು ಮಾಡಲು ಅವನು ಆತುರನಾಗಿದ್ದೇನೆ. ಆದರಿಂದ ನನಗವನಲ್ಲಿ ವಿಶೇಷ ಆಸಕ್ತಿಯುಂಟಾಗಿದೆ."

ಚಲಂ ಹೇಳಿದ ದೃಷ್ಟಿಯು ಕುಪ್ಪುಸ್ವಾಮಿ ಹೇಳಿದ್ದಕ್ಕಿಂತಲೂ ಭಿನವಾಗಿದ್ದರೂ ವಿಷಯದಲ್ಲಿ ಉಷೆಯ ಅಭಿರುಚಿ ಹೆಚ್ಚಿತು.

ಒಳಗಿನಿಂದ ಬಂದ ಚಲಂ ತನ್ನ ಕೋಣೆಗೆ ಹೊರಟು ಹೋಗಬೇಕಾಗಿತ್ತು. ನಡುವೆ ಪ್ರವೇಶಿಸಿ ಮಾತನಾಡಿದನಂತರವಾದರೂ ಹೋಗಬೇಕಾಗಿತ್ತು. ಅದನ್ನು ಗಮನಿಸಿದ ಕುಪ್ಪುಸ್ವಾಮಿ ಚಲಂ ಎಲ್ಲಿಯೋ ಹೊರಗೆ ಹೋಗುತ್ತಾನೆಂದುಕೊಂಡ. ಅದೂ ಮಾಡದೇ ಅವನು ನಿಂತಿರುವುದು ಸೋಜಿಗವಾಗಿ ಕಂಡಿತು.

ಅದೇ ಸಮಯದಲ್ಲಿ ಮಹಡಿಯ ಮೆಟ್ಟಿಲುಗಳನ್ನು ಹತ್ತಿ ಬರುವ ಕಾಲು ಸಪ್ಪಳವು ಕೇಳಿಬಂದಿತು.

ಮೂವರ ಗಮನವೂ ಆದಾರಿರಬಹುದೆಂದರ ಕಡೆಗೆ ತಿರುಗಿತು.

ಕುಪ್ಪುಸ್ವಾಮಿಯು "ಈ ಹೊತ್ತಿನಲ್ಲಿ ಯಾರು ಬರುವ ನಿರೀಕ್ಷೆಯೂ ಇಲ್ಲ. ಹೊಸ ಗಿರಾಕಿಯಿರಬಹುದೇನೋ ಎನ್ನಿಸುತ್ತದೆ." ಎಂದ.

ಚಲಂಗೆ ಸಹ ಹಾಗೆಯೇ ಎನ್ನಿಸಿ "ಹುಂ. ಆ ಹೆಜ್ಜೆಗಳ ಗತಿಯು ನಮಗೆ ಅಪರಿಚಿತವಾದುದು. ನಾನೂ ಅದೇ ಎಂದುಕೊಂಡೆ. ಆದರಿಂದಲೇ ಯಾರು ಬರುತ್ತಾರೆಯೋ ನೋಡೋಣವೆಂದು ನಿಂತೆ." ಎಂದ.

ಮರುಕ್ಷಣದಲ್ಲಿಯೇ ಕಾಲಿಗೆ ಚಪ್ಪಲಿ ಹಾಕಿಕೊಂಡು, ಕಚ್ಚೇ ಪಂಚೆ ಯುಟ್ಟು, ಷಟ್ ಕಾಲರ್ ಕೋಟು ಧರಿಸಿದ ವ್ಯಕ್ತಿ ಒಳಗೆ ಪ್ರವೇಶಿಸಿತು. ತಲೆಯ ಮೇಲೆ ಟೋಪಿಯೂ, ಕೈಯಲ್ಲಿ ಛತ್ರಿಯೂ ಇದ್ದಿತು. ನೋಡುವು ದಕ್ಕೆ ಸಾಧಾರಣನಾಗಿದ್ದ ಆ ಮನುಷ್ಯ.

"ನಾನು ಪತ್ತೇದಾರ ಚಲಂ ಅವರನ್ನು ನೋಡಲು ಬಂದಿದ್ದೇನೆ."

ಬಾಯಲ್ಲಿದ್ದ ಸಿಗರೇಟ್ ತೆಗೆದು "ನಾನೇ ಚಲಂ. ನೀವು ಪ್ರಕಾಶರ ತಂದೆ ರಮಾನಂದ ಪೈಗಳೆಂದು ಕಾಣುತ್ತದೆ.'' ಎಂದ ಚಲಂ.

ಬಂದ ಕೂಡಲೇ ಹೆಸರು ಹೇಳಿದ ಪತ್ತೇದಾರನ ರೀತಿಯನ್ನು ನೋಡಿ ಪೈಗಳಿಗೆ ಆಶ್ಚರ್ಯವಾಯಿತು.

"ಅಪರಿಚಿತನಾದ ನನ್ನ ಹೆಸರನ್ನೂ ಬಲ್ಲ ತಮಗೆ ನಾನು ಬಂದಿರುವ ಉದ್ದೇಶವೂ ತಿಳಿದೇ ಇದೆ ಎಂದು ಭಾವಿಸುತ್ತೇನೆ.''

ಚಲಂ ನಗುತ್ತಾ "ಹುಂ. ಅದನ್ನೂ ಬಲ್ಲೆ. ನಿನ್ನೆಯ ದಿನ ಸಾಯಂಕಾಲ ಪ್ರಕಾಶರನ್ನು ದಸ್ತಗಿರಿ ಮಾಡಿದಾಗ ನಾನೂ ಇದ್ದೆ. ಆದರಿಂದ ಈಗ ನೀವು ಬಂದಿರುವ ಕಾರಣವು ನನಗೆ ಗೊತ್ತು. ನಿಮ್ಮನ್ನು ನೋಡಿದ ಕೂಡಲೇ ನೀವಾರೆಂದು ನಾನು ಊಹೆ ಮಾಡಿದುದಕ್ಕೆ ಆಶ್ಚರ್ಯ ಪಡಬೇಕಾಗಿಲ್ಲ. ನಿಮ್ಮ ಮುಖ ಚಹರೆಯು ನಿಮ್ಮ ಮಗನ ಮುಖಚರ್ಯೆಯನ್ನು ಹೋಲು ತ್ತದೆ.'' ಎಂದ.

ರಮಾನಂದ ಪೈಗಳು ಅಲ್ಲಿಯೇ ನಿಂತುಕೊಂಡು "ನಾನು ಬಂದಿರುವ ಕಾರಣವು ತಮಗೆ ಗೊತ್ತಿರುವುದರಿಂದ....'' ಎಂದು ಮಾತು ಆರಂಭಿಸಿದರು.

ಚಲಂ ಅವರನ್ನು ಹಜಾರದ ಪಾರ್ಶ್ವದಲ್ಲಿದ್ದ ಕೋಣೆಗೆ ಕರೆದುಕೊಂಡು ಹೋದ. ವಾಮೂಲಾಗಿ ತಾನು ಬಳಸುತ್ತಿದ್ದ ಕುರ್ಚಿಯಲ್ಲಿ ಕುಳಿತು ಕೊಂಡು ಎದುರಿಗೆ ಖಾಲಿಯಾಗಿದ್ದ ಕುರ್ಚಿಗಳಲ್ಲಿ ಒಂದರ ಮೇಲೆ ಕುಳಿತ್ಕ ಕೊಳ್ಳುವಂತೆ ಅವರನ್ನು ನಿರ್ದೇಶ ಮಾಡಿದ

ಅನಂತರ "ರಮಾನಂದ ಪೈಗಳೇ! ಇನ್ನು ಹೇಳಿರಿ...." ಎಂದ.

"ನಾನು ಬಂದಿರುವ ಉದ್ದೇಶವು ನಿಮಗೇ ತಿಳಿದಿರುವಾಗ ನಾನು ಇನ್ನೇನು ತಾನೇ ಹೇಳಲಿ?"

"ಹುಂ. ನನಗೆ ಗೊತ್ತಿದೆ. ಆದರೆ ಅದನ್ನು ನಿಮ್ಮ ಬಾಯಿಂದಲೇ ಕೇಳಲು ಅಪೇಕ್ಷಿಸುತ್ತೇನೆ."

"ನಾನು ಸ್ವಂತ ಕೆಲಸದ ಮೇಲೆ ಮದರಾಸಿಗೆ ಹೋಗಿದ್ದೆ. ನಿನ್ನೆಯ ದಿನ ನನ್ನ ಕೆಲಸ ಮುಗಿಯಿತು. ರಾತ್ರಿಯ ಗಾಡಿಯಲ್ಲಿ ಹೊರಟು ಬೆಳ ಗಾಗ ಬೆಂಗಳೂರಿಗೆ ಬಂದು ಸೇರಿದೆ. ಮನೆಗೆ ಹೋದೊಡನೆಯೇ ಪ್ರಕಾಶನು ಬ್ಯಾಂಕಿನ ಹಣ ಸಾವಿರಾರು ರೂಪಾಯಿಗಳನ್ನು ಭಪಾವಣೆ ಮಾಡಿದ್ದಾ ನೆಂದೂ ಪೋಲೀಸಿನವರು ಅವನನ್ನು ಹಿಡಿದುಕೊಂಡು ಹೋದರೆಂದೂ ಗೊತ್ತಾಯಿತು. ಆಗ...."

ಆಗ ನಿಮಗೆ ಏನೆನ್ನಿಸಿತು ....."

"ಏನೆನ್ನಿಸುತ್ತದೆ ಸ್ವಾಮಿ? ಇರುವ ಒಬ್ಬನೇ ಮಗನು ಹೀಗಾದನೆಂದರೆ ತಂದೆಯಾದವನಿಗೆ ಏನೆನ್ನಿಸುತ್ತದೆ? ನನ್ನ ಎದೆ ಒಡೆದಂತೆ ಆಯಿತು...."

"ನಾನು ಅದನ್ನಲ್ಲ ಕೇಳಿದ್ದು. ಕೇಳಿದ ಕೂಡಲೇ "ಎಂತಹ ಅಚಾ ತುರ್ಯ ಮಾಡಿಬಿಟ್ಟ, ಏನು ಮಾಡುವುದು?" ಎಂದೆಲ್ಲಾ ತೋರಿರ ಬೇಕಲ್ಲವೇ?"

"ಉಹುಂ. ಅದನ್ನು ಕೇಳುತ್ತಲೇ ನನಗೆ ನಂಬಿಕೆಯಾಗಲೇ ಇಲ್ಲ. ಪ್ರಕಾಶ ಇಂತಹ ಕೆಲಸ ಮಾಡುವವನೇ ಅಲ್ಲ. ಆದರಿಂದ ಏನು ಹೆಚ್ಚು ಕಡಿಮೆಯಾಗಿದೆಯೋ ನೋಡೋಣವೆಂದು ಓಡುತ್ತಾ ಬ್ಯಾಂಕಿಗೆ ಹೋಗಿ ಮ್ಯಾನೇಜರ್ ಆನಂದರಾಯರನ್ನು ನೋಡಿದೆ. ಅವರು ಹೇಳಿದರೂ ನನಗೆ ನಂಬಿಕೆಯಾಗಲಿಲ್ಲ ಆದರೆ ಅವರು ವಿಷಯಗಳನ್ನು ಖಚಿತವಾಗಿ ಹೇಳಿದ ಮೇಲೆ ನನಗೆ ಏನೂ ತೋರದೇ ಹೋಯಿತು."

"ಸರಿ, ಮುಂದಕ್ಕೆ ಹೇಳಿ ಪೈಗಳೇ."

"ಹೋಗಿ ಲಾಕಪ್ಪಿನಲ್ಲಿರುವ ಪ್ರಕಾಶನನ್ನು ನೋಡಿದೆ. ಅವನು ತಾನು ಯಾವ ಅಪರಾಧವನ್ನೂ ಮಾಡಲಿಲ್ಲವೆನ್ನುತ್ತಾನೆ ತನ್ನ ಮಾತನ್ನು ಯಾರೂ ನಂಬುವುದಿಲ್ಲವೆಂದೂ, ಅದರಿಂದ ತಾನು ಮಾತನಾಡುವುದೇ ಪ್ರಯೋಜನ ವಿಲ್ಲವೆಂದೂ ಹೇಳುತ್ತಾನೆ...."

"ಆತ ಹೇಳಿದ ಮಾತುಗಳು ನಿಮಗಾದರೂ ನಂಬಿಕೆಯಾಯಿತೇ?"

"ನಿಜ ಹೇಳಬೇಕೆಂದರೆ ನನಗೂ ಅವನು ಹೇಳುವುದು ಸರಿಯಾಗಿ ಕಂಡುಬರುವುದಿಲ್ಲ. ಎಲ್ಲರೂ ನೋಡಿದ ನಾಲ್ಕು ಸಾವಿರ ರೂಪಾಯಿಗಳ ಚೆಕ್‌ಗೆ ನಲವತ್ತು ಸಾವಿರ ಕೊಟ್ಟು ಏನೋ ಮೋಸವಾಗಿದೆ ಎಂದು ಹೇಳಿದರೆ ಯಾರಿಗೆ ನಂಬಿಕೆಯಾಗುತ್ತದೆ...."

"ಹುಂ. ಈಗ ಏನು ಮಾಡಬೇಕೆನ್ನುತ್ತೀರಿ?"

"ಪ್ರಕಾಶ ಹೊರಗೆ ಬರುವುದಕ್ಕೆ ಏನು ಮಾಡಬೇಕೋ ಅದನ್ನು ಮಾಡಿರಿ – ಎಂದು ಪ್ರಾರ್ಥನೆ ಮಾಡುತ್ತೇನೆ."

ಎದುರಿಗೆ ಕುಳಿತಿರುವ ಮನುಷ್ಯನ ದ್ವಿಮುಖ ರೀತಿಯನ್ನು ನೋಡಿ ಚಲಂಗೆ ನಗು ಬಂದಿತು.

"ಅವನ ನಿರಪರಾಧಿತ್ವವನ್ನು ನೀವು ನಂಬುವುದಿಲ್ಲ. ಆದರೂ ಬಿಡಿಸಬೇಕೆನ್ನುತ್ತೀರಿ. ಇದು ವಿಚಿತ್ರವಾಗಿ ಕಂಡುಬರುವುದಿಲ್ಲವೇ?"

"ಎಷ್ಟು ತಪ್ಪು ಮಾಡಿದರೂ ಅವನು ನನ್ನ ಮಗನಲ್ಲವೇ? ಏನಾದರೂ ಮಾಡಿ ಅವನನ್ನು ಬಿಡಿಸಿಕೊಳ್ಳಬೇಕಾದುದು ನ್ಯಾಯವಲ್ಲವೇ?"

"ನ್ಯಾಯವೆಂದು ಹೇಳಲಾರೆ. ಆದರೆ ತಂದೆಗೆ ಹಾಗೆ ತೋರುವುದು ಸಹಜವೆಂದು ಒಪ್ಪಿಕೊಳ್ಳುತ್ತೇನೆ."

"ಈ ಪ್ರಸಂಗವನ್ನು ಬಹಳ ಸುಲಭವಾಗಿ ಬಗೆಹರಿಸುವುದಕ್ಕೊಂದು ಮಾರ್ಗವಿತ್ತು. ಪ್ರಕಾಶನು ಬ್ಯಾಂಕಿನ ಹಣವನ್ನು ಛಪಾವಣೆ ಮಾಡಿದ್ದಾನೆಯೋ ಇಲ್ಲವೋ, ಅದು ಮುಖ್ಯವಲ್ಲ. ಪರಿಣಾಮವಂತೂ ಒಂದೇ. ಛಪಾವಣೆ ಮಾಡಿದ ಅಪರಾಧವು ಸಾಬೀತಾಗಿ ಅವನು ಲಾಕಪ್ಪಿನಲ್ಲಿದ್ದಾನೆ ಒಂದು ವೇಳೆ ಅವನು ಆ ಹಣ ತೆಗೆದುಕೊಂಡು ಹೋಗಿ ಅಷ್ಟನ್ನೂ ರೇಸ್‌ನಲ್ಲಿ ಕಳೆದಿದ್ದಾನೆಂದೇ ಇಟ್ಟುಕೊಳ್ಳೋಣ. ಆಗ ನಾನು ಏನು ಮಾಡುತ್ತಿದ್ದೆ? ಆ

ಹಣವನ್ನು ನಾನು ಕೊಡಬೇಕಲ್ಲವೇ? ಈಗಲೂ ಹಾಗೆಯೇ ಮಾಡಲು ನಾನು ತಯಾರಾಗಿದ್ದೇನೆ. ಮೂವತ್ತಾರು ಸಾವಿರ ರೂಪಾಯಿಗಳನ್ನು ನಾಳೇ ಬೆಳಗಾಗ ಬ್ಯಾಂಕು ತೆಗೆಯುವುದರೊಳಗಾಗಿ ಕೊಡುವುದಾದರೆ ಆನಂದರಾಯರು ಕಂಪ್ಲೈಂಟು ವಾಪ್ಸು ತೆಗೆದುಕೊಳ್ಳುವುದಕ್ಕೆ ಒಪ್ಪಿಕೊಂಡಿದ್ದಾರೆ. ಇನ್ಸ್‌ಪೆಕ್ಟರ ಕೈಕಾಲು ಹಿಡಿದುಕೊಂಡರೆ ಅವರೂ ಒಪ್ಪಬಹುದು. ಅದಕ್ಕೂ ಸ್ವಲ್ಪ ಹಣ ಖರ್ಚಾದರೂ ಚಿಂತೆಯಿಲ್ಲ. ಆದರೆ ಪ್ರಕಾಶ ಈ ಕ್ರಮಕ್ಕೆ ಒಪ್ಪುವುದಿಲ್ಲ...."

ಚಲಂ ಸಿಗರೇಟು ಹಚ್ಚಿಕೊಂಡು ಪೈಗಳು ಹೇಳುವುದನ್ನೇ ತದೇಕ ದೃಷ್ಟಿಯಿಂದ ನೋಡತೊಡಗಿದ.

"ಚಲಂ ಅವರೇ! ನೀವು ನನಗೆ ಹೊಸ ಪರಿಚಯ. ಆದರೂ ನನ್ನ ಮಗನನ್ನು ಉಳಿಸಿಕೊಡಿ ಎಂದು ನಿಮ್ಮ ಬಳಿಗೆ ಬಂದಿರುವುದರಿಂದ ನಿಮ್ಮನ್ನು ಪರಮಾಪ್ತರೆಂದು ಭಾವನೆ ಮಾಡುತ್ತೇನೆ. ನಾನು ಹೇಳುವ ಮಾತನ್ನು ಅನ್ಯಥಾ ಭಾವನೆ ಮಾಡಬೇಡಿರಿ. ಇದುವರೆವಿಗೆ ಹಣದಿಂದ ಆಗದ ಕೆಲಸವೇ ಇಲ್ಲವೆಂದುಕೊಂಡಿದ್ದೆ. ಆದರೆ ಈ ವೃದ್ಧಾಪ್ಯದಲ್ಲಿ ನನಗೆ ಹೊಸ ಅನುಭವಗಳಾಗುತ್ತಿವೆ...."

"ನಿಮಗೊಂದು ವಿಷಯ ಹೇಳುತ್ತೇನೆ. ನಿನ್ನೆಯ ದಿನ ಮಧ್ಯಾಹ್ನ ಒಬ್ಬ ತರುಣಿಯು ಪ್ರಕಾಶನನ್ನು ಬ್ಯಾಂಕಿನಿಂದ ಕರೆದುಕೊಂಡು ಹೋದಳೆಂಬುದನ್ನು ಕೇಳಿದ್ದೀರಾ....?"

"ಹುಂ. ಅದನ್ನೂ ಕೇಳಿದೆ. ಈಗೀಗ ಪ್ರಕಾಶನಿಗೆ ಕೆಲವು ಹೊಸ ಪರಿಚಯಗಳಾಗಿವೆ ಎಂದು ಆನಂದರಾಯರು ಹೇಳಿದರು. ಅವನ ನಡವಳಿಕೆಗಳು ಬದಲಾವಣೆಯಾಗಲು ಅದೇ ಕಾರಣವೆಂದು ಕಾಣುತ್ತದೆ."

"ಅದೇನೋ ನನಗೆ ಗೊತ್ತಿಲ್ಲ, ನಾನು ಹೇಳುತ್ತಿರುವ ವಿಷಯ ಬೇರೇ. ನಿನ್ನೆಯ ದಿನ ಪ್ರಕಾಶನನ್ನು ದಸ್ತಗಿರಿ ಮಾಡಿದಾಗ ನಾನೂ ಅಲ್ಲಿಯೇ ಇದ್ದೆ. ಆಗ ಆ ತರುಣಿಯು ತಾನು ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಟ್ಟುಬಿಡುವುದಾಗಿಯೂ, ಪ್ರಕಾಶನನ್ನು ಬಿಟ್ಟು ಹೋಗಬೇಕೆಂದೂ ಹೇಳಿದಳು."

ಆ ಮಾತು ನಂಬುವುದೇ ಪೈಗಳಿಗೆ ಕಷ್ಟವಾಯಿತು. ಬೆರಗಾಗಿ ನೋಡ ತೊಡಗಿದರು.

''ನಾನು ಈ ವಿಷಯ ನಿಮ್ಮೊಂದಿಗೆ ಹೇಳುತ್ತಿರುವುದಕ್ಕೆ ಕಾರಣವಿಲ್ಲ ವೆಂದುಕೊಳ್ಳಬೇಡಿ. ಪ್ರಕಾಶನು ಅದಾಗುವುದಿಲ್ಲವೆಂದು ನಿರಾಕರಿಸಿದ. ತಾನು ತನ್ನ ನಿರಪರಾಧಿತ್ವವನ್ನು ಸಾಬೀತು ಮಾಡುವುದಕ್ಕೆ ಅವಕಾಶ ಕೊಡ ಬೇಕೆಂದು ಬೇಡಿಕೊಂಡ. ಆದರಿಂದಲೇ ನನಗೆ ಅವನಲ್ಲಿ ಆಸಕ್ತಿಯುಂಟಾ ಯಿತು. ಈಗ ನೀವು ಸಹ ಅಂತಹದೇ ಒಂದು ಅನುಭವವನ್ನು ಹೇಳುತ್ತಿ ದ್ದೀರಿ. ಇದು ಪ್ರಕಾಶ್ ನಿರಪರಾಧಿಯೆಂಬ ನನ್ನ ಭಾವನೆಯನ್ನು ಇನ್ನೂ ದೃಢಗೊಳಿಸುತ್ತಿದೆ.''

''ಚೆಕ್ಕನ್ನು ಪೋಲೀಸಿನವರು ತೆಗೆದುಕೊಂಡು ಹೋಗಿರುವುದರಿಂದ ಅದನ್ನು ನೋಡಲಾಗಲಿಲ್ಲ. ಬ್ಯಾಂಕಿನಲ್ಲಿ ಅಕೌಂಟ್ ಪುಸ್ತಕಗಳೆಲ್ಲವನ್ನೂ ನೋಡಿದ್ದೇನೆ. ಛಪಾವಣೆಯಾದ ನೋಟುಗಳಲ್ಲಿ ಸಹ ಕೆಲವು ಪ್ರಕಾಶನ ಜೇಬಿನಲ್ಲಿ ಸಿಕ್ಕಿದುವೆಂದು ಸಹ ಕೇಳಿದ್ದೇನೆ. ಆದರೂ ಅವನನ್ನು ನಿರಪರಾಧಿ ಯೆಂದು ಹೇಳುವುದು ಹೇಗೆ?"

''ನಿಮ್ಮ ಮನಸ್ಸಿನಲ್ಲಿರುವ ಭಾವಗಳೆಲ್ಲವನ್ನೂ ಒತ್ತಟ್ಟಿಗಿಟ್ಟು ಬೇರೊಂದು ದೃಷ್ಟಿಯಿಂದ ಆಲೋಚನೆ ಮಾಡಿರಿ. ಬ್ಯಾಂಕಿನಲ್ಲಿ ಮೂವ ತ್ತಾರು ಸಾವಿರ ರೂಪಾಯಿಗಳು ಛಪಾವಣೆಯಾಗಿವೆ. ಅದು ಹೇಗಾಯಿತೋ ಆ ವಿವರಗಳು ಬೇಡ. ಆ ಅಪರಾಧದ ಮೇಲೆ ಪ್ರಕಾಶ ಸಿಕ್ಕಿಹಾಕಿಕೊಂಡಿ ದ್ದಾನೆ. ಲತೆ ಆ ಹಣವನ್ನು ಕೊಟ್ಟುಬಿಡುತ್ತೇನೆಂದಳು. ಬೇಡವೆಂದು ನಿರಾಕರಿಸಿದ. ಅನಂತರ ಈ ದಿನ ನೀವು ಹಣವನ್ನು ಕೊಟ್ಟು ಬಿಡಿಸುವು ದಾಗಿ ಹೇಳಿದಿರಿ. ಅದನ್ನೂ ಒಪ್ಪಲಿಲ್ಲ. ಲತೆಯ ಹಣವನ್ನು ನಿರಾಕರಿಸಿದು ದಕ್ಕಾದರೂ ಒಂದು ನೆವ ಹುಡುಕಬಹುದು. ಅವಳು ತನ್ನನ್ನು ಪ್ರೀತಿಸುತ್ತಿ ದ್ದಾಳೆ. ಅಂತಹವಳಿಂದ ಹಣ ಪಡೆಯಲು ಸಂಕೋಚವೆನ್ನಬಹುದು. ತಂದೆಯಾದ ನಿಮ್ಮಿಂದ ತೆಗೆದುಕೊಳ್ಳದಿರಲು ಕಾರಣವೇನು? ಸುಖವಾಗಿ ಹೊರಗೆ ಬರುವುದಕ್ಕೆ ಅವಕಾಶವಿರುವಾಗ ಜೈಲಿಗೆ ಹೋಗಿ ಕಷ್ಟಪಡ ಬೇಕೆಂದು ಯಾರಿಗಾದರೂ ಇರುತ್ತದೆಯೇನು?''

ಚಲಂನ ವಾದದ ರೀತಿ ಪೈಗಳಿಗೆ ಸಮಾಧಾನವಾಗಿ ಕಂಡುಬರಲಿಲ್ಲ. ಅದರೂ ಏನೂ ಹೇಳದೇ ಸುಮ್ಮನೆ ಕುಳಿತುಕೊಂಡಿದ್ದರು.

"ಇಷ್ಟರ ಮೇಲೆ ಇನ್ನೂ ಒಂದು ವಿಷಯವಿದೆ. ಪ್ರಕಾಶನು ತಾನು ನಿರಪರಾಧಿಯೆಂದೂ, ಅದು ಸಾಬೀತಾಗಬೇಕೆಂದೂ ಹಟ ಹಿಡಿದಿದ್ದಾನೆ. ಅದರಲ್ಲಿ ನನಗೊಂದು ಆಶಾಕಿರಣವು ಕಂಡುಬರುತ್ತದೆ. ಈ ಪ್ರಸಂಗದಲ್ಲಿ ಎಲ್ಲಿಯೋ ಮೋಸವಾಗಿದೆಯೆಂದು ಹೇಳುತ್ತಿದ್ದಾನೆ. ಅದೆಲ್ಲಿ ಮೋಸವಾಗಿ ದೆಯೋ ಕಂಡುಹಿಡಿಯುವುದು ಈಗ ಮುಖ್ಯವಾದ ಕೆಲಸ."

ತಾವೂ ಸಹ ಪ್ರಕಾಶನ ನಿರಪರಾಧಿತ್ವವನ್ನು ಒಪ್ಪಿಕೊಳ್ಳಲು ತಯಾ ರಾಗಿಲ್ಲದೇ ಇರುವಾಗ ಈ ಮನುಷ್ಯ ಅದನ್ನು ಅಂಗೀಕರಿಸುತ್ತಿರುವುದು ಪೈ ಗಳಿಗೆ ಒಂದು ರೀತಿಯಾಗಿ ಸಂತೋಷವಾಯಿತು.

"ನೀವು ಪ್ರಕಾಶನ ನಿರಪರಾಧಿತ್ವವನ್ನು ಒಪ್ಪುತ್ತೀರಿ. ಹೇಗೋ ಅವನ ದರ ಸುಳಿವು ತಿಳಿದುಕೊಂಡಿದ್ದಾನೆ. ಅದರಿಂದಲೇ ಏನೋ ನನ್ನನ್ನು ನಿಮ್ಮ ಬಳಿಗೆ ಹೋಗಲು ಹೇಳಿದ. ಎಷ್ಟು ಫೀಸಾದರೂ ಕೊಡಲು ತಯಾರಾಗಿ ದ್ದೇನೆ. ನೀವು ಈ ಕೇಸಿನ ಪತ್ತೇ ತರದೂದು ನಡೆಯಿಸಿ ನಮಗೆ ಸಹಾಯ ಮಾಡಬೇಕು."

"ನಾನೊಂದು ಬಗೆಯಾಗಿ ಈಗಾಗಲೇ ತನಿಖೆ ಕ್ರಮಗಳನ್ನು ಆರಂಭಿಸಿ ದ್ದೇನೆ. ಬ್ಯಾಂಕಿನಿಂದ ಇನ್ಸ್‌ಪೆಕ್ಟರ್ ಇಬ್ರಾಹಿಂ ಸಾಹೇಬರು ತಂದ ಚೆಕ್ಕನ್ನು ನನ್ನ ಬಳಿಯೇ ಇಟ್ಟುಕೊಂಡಿದ್ದೇನೆ. ಅಷ್ಟೇ ಅಲ್ಲ, ಪ್ರಕಾಶನ ಜೇಬಿನಲ್ಲಿ ಕೆಲವು ಕರೆನ್ಸೀ ನೋಟುಗಳು ಸಿಕ್ಕಿದುವಷ್ಟೇ. ಅದರಲ್ಲಿಯೂ ಒಂದು ನೋಟು ತಂದಿದ್ದೇನೆ...."

"ಅದರಿಂದ ಯಾವುದಾದರೂ ಬಗೆಯಲ್ಲಿ ಪ್ರಕಾಶನ ನಿರಪರಾಧಿತ್ವವು ಸಾಬೀತಾಗುವ ಅವಕಾಶ ಕಂಡುಬರುತ್ತಿದೆಯೇ ?"

"ಈಗಲೇ ಅದಾವುದನ್ನೂ ಹೇಳುವುದು ಸಾಧ್ಯವಿಲ್ಲ"

"ನನ್ನ ಮತ್ತು ಪ್ರಕಾಶನ ಕೋರಿಕೆಗೆ ನೀವು ಒಪ್ಪಿಕೊಂಡಿರುವುದು ಸಂತೋಷ. ನಾವು ಪ್ರಾರ್ಥಿಸುವ ಮೊದಲೇ ತಾವು ತನಿಖೆ ಕ್ರಮಗಳನ್ನು ಆರಂಭಿಸಿರುವುದಾಗಿ ಹೇಳಿದುದು ಅತ್ಯಂತ ಆನಂದಕರವಾದ ವಿಷಯ. ಇದ ಕ್ಕೆಲ್ಲಾ ಎಷ್ಟು ಫೀಸಾಗುತ್ತದೆಂಬುದನ್ನು ಹೇಳಿದರೆ ತಂದು ಒಪ್ಪಿಸುತ್ತೇನೆ."

"ಆಗಲಿ, ಕೇಳಿ ತೆಗೆದುಕೊಳ್ಳುತ್ತೇನೆ. ಮಾಡುವ ಕಲಸಕ್ಕೆ ಹಣ ತೆಗೆದುಕೊಳ್ಳದೇ ಇರುವಷ್ಟು ನಾನು ಶ್ರೀಮಂತನಲ್ಲ. ಆದರೆ ಈ ಕೇಸಿನಲ್ಲಿ ರುವ ವೈಚಿತ್ರ್ಯವೇ ನನಗೆ ಇದರಲ್ಲಿ ಆಸಕ್ತಿಯನ್ನು ಉಂಟುಮಾಡಿದೆ. ನನ್ನ ಕೈಲಾದ ಮಟ್ಟಿಗೆ ಪ್ರಯತ್ನ ಮಾಡಿ ನೋಡುತ್ತೇನೆ."

''ಹಾಗಾದರೆ ನಾನು ಈಗೇನು ಮಾಡಲಿ ?''

''ಏನೂ ಮಾಡಬೇಡಿ. ನಿಶ್ಚಿಂತೆಯಾಗಿದ್ದುಬಿಡಿ."

ರಮಾನಂದ ಪೈಗಳು ನೀರಸವಾದ ನಗುವನ್ನು ನಗುತ್ತಾ "ನೀವು ಹೇಳಿದ ಕೆಲಸಗಳಲ್ಲಿ ಒಂದು ಮಾಡುತ್ತೇನೆ. ಮತ್ತೊಂದು ಹೇಗೆ ಮಾಡಲಿ? ನಿಶ್ಚಿಂತೆಯಾಗಿರುವುದಂತೂ ಸಾಧ್ಯವಿಲ್ಲ. ಏನೂ ಮಾಡದೇ ಇರುವುದಕ್ಕೆ ಒಪ್ಪಿಕೊಳ್ಳುತ್ತೇನೆ.'' ಎಂದರು.

## ೧೦

ಪಿಂಕ್ಸ್‌ನಿಂದ ಪ್ರಕಾಶನನ್ನು ಸಾಹೇಬರು ದಸ್ತಗಿರಿ ಮಾಡಿಕೊಂಡು ಹೋದಮೇಲೆ ಚಲಂ ನೇರವಾಗಿ ಕಚೇರಿಗೆ ಬಂದಿದ್ದ. ಅವನ ಕಚೇರಿ ಮನೆ ಗಳೆಲ್ಲಾ ಒಂದೇ ಆಗಿದ್ದವು. ಆವನು ರಾತ್ರಿ ಸಹಜವಾಗಿ ನಿದ್ದೆ ಮಾಡಲಿಲ್ಲ ವೆಂದೇ ಹೇಳಬೇಕು. ರಾತ್ರಿಯೆಲ್ಲಾ ಆ ಕೇಸಿನ ವಿಷಯವನ್ನೇ ಕುರಿತು ಆಲೋಚನೆ ಮಾಡುತ್ತಿದ್ದ. ಎಷ್ಟು ಆಲೋಚನೆ ಮಾಡಿದರೂ ಸಮಸ್ಯೆ ಬಗೆಹರಿಯಲಿಲ್ಲ.

ಕೆಲವು ಬಾರಿ ಆಲೋಚನೆಗಳು ತಪ್ಪುದಾರಿ ಹಿಡಿಯುತ್ತವೆ. ಆಗ ಎಷ್ಟೋ ಕ್ರಮಬದ್ಧವಾಗಿ ನೋಡಿದರೂ ತೊಡಕುಗಳೇ ಬರುತ್ತವೆ. ವಿಷಯ ಮತ್ತಷ್ಟು ಜಟಿಲವಾಗುತ್ತದೆ. ಅದನ್ನು ಬಿಟ್ಟು ಬೇರೇ ವಿಧವಾಗಿ ಯೋಚಿ ಸುವುದೂ ಪ್ರಯೋಜನವಿಲ್ಲ. ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡಾಗ ಹೊರಟ ಕಡೆಗೇ ಪುನಃ ಪುನಃ ಬರುವಂತೆ ಮೊದಲು ಬಂದ ಆಲೋಚನೆಗಳೇ ಮತ್ತೆ ಬರುತ್ತವೆ. ಇದು ಚೆನ್ನಾಗಿ ಅನುಭವ ಬೇಕ್ಕಿದ್ದ ಚಲಂ ಎಲ್ಲವನ್ನೂ ಮರೆತು ಮಲಗಿ ನಿದ್ದೆಮಾಡಲು ಪ್ರಯತ್ನ ಮಾಡಿದ. ಅವರದು ಸಾಧ್ಯ

ವಾಗಲಿಲ್ಲ. ಹರಕು ಮುರುಕಾಗಿ ಅವೇ ಆಲೋಚನೆಗಳು ಬರುತ್ತಿದ್ದುವು. ನಿದ್ದೆ ಸಹ ಬರಲಿಲ್ಲ.

ಬೆಳಗಾಗ ಕಾಫೀ ಕುಡಿಯುತ್ತಿರುವಾಗ ತೋರಿತು. ಹೋಗಿ ಪ್ರಕಾಶನನ್ನು ನೋಡಿ ಮಾತನಾಡಬೇಕೆಂದು. ಅವನನ್ನು ನೋಡಿಕೊಂಡು ಬಂದರೆ ಈ ಕೇಸಿನ ಮೇಲೆ ಏನಾದರೂ ಬೆಳಕು ಬಿದ್ದಿತೇನೋ ಎಂಬ ಆಶೆಯಿತ್ತು. ಅದರ ಮೇಲೆ ರಮಾನಂದ ಪೈಗಳು ಸಹ ಬಂದು ಕೇಳಿಕೊಂಡಿದ್ದರು.

ಚಲಂ ಸೆಂಟ್ರಲ್ ಸ್ಟೇಷನ್ನಿಗೆ ಹೋದ. ಇಬ್ರಾಹಿಂ ಸಾಹೇಬರು ಬಂದಿದ್ದರು. ತಾನು ಪ್ರಕಾಶನನ್ನು ನೋಡಿ ಮಾತನಾಡಬೇಕಾಗಿದೆ ಎಂದು ಹೇಳಿದ.

"ನೀವು ಅವನನ್ನು ನೋಡಿ ಮಾತನಾಡುವುದಕ್ಕೆ ನನ್ನ ಅಡ್ಡಿಯೇನೂ ಇಲ್ಲ ಚಲಂ ಸ್ವಾಮಿ. ಆದರೆ ಅಂಗೈ ಹುಣ್ಣಿನಂತೆ ಪ್ರತ್ಯಕ್ಷವಾಗಿ ಕಂಡುಬರುತ್ತಿರುವುದಕ್ಕೆ ಮಾತನಾಡುವುದೇನಿನೆ ?"

ಪ್ರಯತ್ನ ಪುರಸ್ಸರವಾಗಿ ಚಲಂ ನಗುತ್ತಾ "ಅನೇಕ ಸಂದರ್ಭಗಳಲ್ಲಿ ನಮಗಿಬ್ಬರಿಗೂ ಭಿನ್ನಾಭಿಪ್ರಾಯಗಳಿದ್ದುವಲ್ಲವೇ ?" ಎಂದ.

"ಆ ಸಂದರ್ಭಗಳು ಬೇರೇ. ಈ ಸಂದರ್ಭವು ಬೇರೇ."

"ಆಗಲಿ, ಹೋಗಿ, ಅವನೊಂದಿಗೆ ಮಾತನಾಡಿಕೊಂಡು ಬರುವುದರಲ್ಲಿ ನಷ್ಟವಿಲ್ಲವಲ್ಲ"

"ನಷ್ಟವೇನಿಲ್ಲ ನಿಮಗೆ ನಿಜವಾಗಿಯೂ ಆ ಹುಡುಗನಲ್ಲಿ ಆಸಕ್ತಿಯಿದ್ದರೆ ಒಂದು ಕೆಲಸ ಮಾಡಿ. ಬೆಳಗಾಗ ಅವನ ತಂದೆ ಬಂದಿದ್ದರು. ಅವರು ಹಣ ಕೊಟ್ಟು ಬ್ಯಾಂಕಿನವರೊಡನೆ ಸರಿಮಾಡಿಕೊಳ್ಳಲು ತಯಾರಾಗಿದ್ದಾರಂತೆ. ಹಾಗಾಗುವುದಾದರೆ ನನಗೇನು ಅಡ್ಡಿಯಿಲ್ಲ. ಆದರೆ ಪ್ರಕಾಶ ಅದೊಂದಕ್ಕೂ ಒಪ್ಪದೇ ಮೊಂಡುತನ ಮಾಡುತ್ತಿದ್ದಾನೆಯಂತೆ. ನೀವು ಹೋಗಿ ಅವನನ್ನು ಒಪ್ಪಿಸುವುದಕ್ಕಾಗುತ್ತದೆಯೋ ನೋಡಿ."

"ಹುಂ. ಪ್ರಯತ್ನ ಮಾಡುತ್ತೇನೆ." ಎಂದು ಹೇಳಿ ಚಲಂ ಎದ್ದ.

ರಾಜಶೇಖರಪ್ಪನು "ಸ್ವಲ್ಪ ಕುಳಿತುಕೊಳ್ಳಿ ಸಾರ್. ಚಹಾಗೆ ಹೇಳಿ ಕಳಿಸಿದ್ದೇನೆ." ಎಂದ.

ಸಾಹೇಬರು "ಹೌದು, ಹೌದು ಕುಳಿತುಕೊಳ್ಳಿ. ಆ ಪೊಂಡು ಹುಡುಗ ಯಾವುದಕ್ಕೂ ಒಪ್ಪುವುದಿಲ್ಲ. ಅಪ್ಪನೇ ಹೇಳಿದ ಮಾತು ಕೇಳ ದಿರುವವನು ನಮ್ಮ ಮಾತು ಕೇಳುತ್ತಾನೆಯೇ? ನೀವು ಅಷ್ಟು ದೂರದಿಂದ ಬಂದುದಕ್ಕೆ ಸ್ವಲ್ಪ ಚಹಾ ತೆಗೆದುಕೊಂಡಂತಾದರೂ ಆಗಲಿ" ಎಂದರು.

ಚಲಂ ಸಿಗರೇಟು ಹಚ್ಚಿಕೊಂಡು ಸೇದತೊಡಗಿದ.

ಅವನು ಅವರನ್ನೇನೋ ಕೇಳಬೇಕೆಂದಿರುವಂತೆಯೇ ಚಹಾ ಬಂದಿತು. ಕುಡಿದರು.

ಅನಂತರ ಇಬ್ರಾಹಿಂ ಸಾಹೇಬರು "ರಾಜಶೇಖರಪ್ಪ, ದಯವಿಟ್ಟು ಚಲಂಗೆ ಪ್ರಕಾಶ್ ಇರುವ ಕೋಣೆಯನ್ನು ತೋರಿಸಿ. ಅದರ ಬೀಗದಕೈ ಈ ಡ್ರಾಯರಿನಲ್ಲಿಯೇ ಇರಬೇಕಲ್ಲವೇ?" ಎಂದರು.

ಮೇಲೇಳುತ್ತಿದ್ದ ಚಲಂಗೆ ವಿಸ್ಮಯವಾಗಿ "ಇದೇನು ಪ್ರಕಾಶನನ್ನು ಎಲ್ಲಿಟ್ಟಿದ್ದೀರಿ?" ಎಂದು ಕೇಳಿದ.

"ಅತ್ತಕಡೆಯ ವಿಂಗ್‌ನಲ್ಲಿ ಒಂದು ರೂಂ ಖಾಲಿ ಇತ್ತು. ಅಲ್ಲಿರಿಸಿದ್ದೇನೆ."

ಖೈದಿಯನ್ನು ಲಾಕಪ್ಪಿನಲ್ಲಿಡದೇ ಕೋಣೆಯಲ್ಲಿರಿಸಿರುವುದು ಚಲಂಗೆ ಸೋಜಿಗವಾಗಿ ಕಂಡಿತು.

"ನಿಮಗೂ ಪ್ರಕಾಶನ ಮೇಲೆ ದಯೆ ಬಂದಿರುವಂತೆ ಕಂಡುಬರುತ್ತದೆ."

"ಹುಂ. ಒಂದು ವಿಧವಾಗಿ ಅದೂ ನಿಜ. ಒಳ್ಳೆಯ ಹುಡುಗ, ಇದ್ದಕ್ಕಿದ್ದಂತೆಯೇ ಸಲಾಕೆಗಳ ಹಿಂದೆ ಇಟ್ಟರೆ ಮನ ನೊಂದುಕೊಳ್ಳುತ್ತಾನೆ. ಜೈಲಿಗೆ ಹೋದನಂತರ ಅವನ ಹಣೆಯ ಬರಹ. ಅಲ್ಲಿಯವರೆವಿಗೆ ನಮ್ಮ ಕೈಲಾದುದನ್ನು ಮಾಡೋಣವೆಂದು."

ನಂಬಿಗೆಯಾಗದೇ ಚಲಂ ದುರುಗುಟ್ಟಿಕೊಂಡು ನೋಡಿದ.

"ಯಾಕೆ ಹಾಗೆ ನೋಡುತ್ತೀರಿ?"

ಇನ್ಸ್‌ಪೆಕ್ಟರ ಮತ್ತು ಪತ್ತೇದಾರನ ತರಹಗಳನ್ನು ನೋಡಿ ರಾಜಶೇಖರಪ್ಪನಿಗೆ ನಗು ಬಂದಿತು. ಅವನು ನಕ್ಕುಬಿಟ್ಟ.

"ಈ ಒಳ್ಳೆಯತನಕ್ಕೆ ಮತ್ತೂ ಏನೋ ಕಾರಣವಿರಬೇಕಲ್ಲವೇ?"

"ಹುಂ. ಅದೂ ನಿಜ ಎನ್ನಿ. ನಮ್ಮ ಲಾಕಪ್ಪಿನಲ್ಲಿ ಅತ್ಯಂತ ಅಪಾಯಕರನಾದ ಇಸ್ಮಾಯಿಲ್ ಸಹ ಇರುವ ವಿಷಯ ನಿಮಗೆ ಗೊತ್ತಿದೆಯಲ್ಲ. ಬೇರೇ ಸೆಲ್‌ನಲ್ಲಿ ಇಟ್ಟರೂ ಅವರಿಗೆ ಪರಸ್ಪರ ಮಾತುಗಳು ನಡೆಯಬಹುದು. ಅದಕ್ಕೆ ನಮ್ಮ ಕಾನ್‌ಸ್ಟೇಬಲ್ಲುಗಳೇ ಪ್ರತ್ಯಕ್ಷವಾಗಿಯೋ, ಅಪ್ರತ್ಯಕ್ಷವಾಗಿಯೋ ಸಹಾಯ ಮಾಡಬಹುದು. ಈಗ ಪ್ರಕಾಶ್ ಸಾಫ್ ಸೀದಾ ಇದ್ದಾನೆ. ಇಸ್ಮಾಯಿಲ್ ಏನಾದರೂ ಹೇಳಿಕೊಟ್ಟು, ಪ್ರಕಾಶ್ ಹಾಗೆ ಮಾಡಿ, ಕೇಸ್ ಹಾಳಾದರೆ ಏನು ಮಾಡಲಿ? ಅದರಿಂದ ಅವರುಗಳು ಪರಸ್ಪರ ನೋಡುವುದಕ್ಕೂ ಅವಕಾಶ ಕೊಟ್ಟಿಲ್ಲ. ಪ್ರಕಾಶ್‌ನನ್ನು ಪ್ರತ್ಯೇಕವಾಗಿ ಇಟ್ಟಿದ್ದೇನೆ ನಾನೋ ಅಥವಾ ರಾಜಶೇಖರಪ್ಪನವರೋ ಇಲ್ಲದೇ ಆ ಕೋಣೆಯ ಬಾಗಿಲು ಸಹ ತೆಗೆಯಲು ಅವಕಾಶವಿಲ್ಲದಂತೆ ಅದರ ಬೀಗದ ಕೈಯನ್ನು ನನ್ನ ಡ್ರಾಯರಿನಲ್ಲಿಯೇ ಇಟ್ಟುಕೊಂಡಿದ್ದೇನೆ. ಯಾವ ಕಾರಣದಿಂದ ಪ್ರಕಾಶನನ್ನು ಖೈದು ಮಾಡಿದೆ ಎಂಬುದು ರಾಜಶೇಖರಪ್ಪನವರ ವಿನಾ ಮತ್ತಾರಿಗೂ ಸ್ಟೇಷನ್ನಿನಲ್ಲಿ ಗೊತ್ತಿಲ್ಲ."

ಚಲಂ ನಗುತ್ತಾ "ಪ್ರಕಾಶನನ್ನು ಪ್ರತ್ಯೇಕವಾದ ಕೋಣೆಯಲ್ಲಿಟ್ಟಿದೆ ಎಂದು ಗೊತ್ತಾಗುತ್ತಲೇ ಹೀಗೆಯೋ ಏನೋ ಇದೆ ಎಂದು ಊಹೆ ಮಾಡಿದೆ. ಅದರಿಂದಲೇ, ನಾನು ಕೇಳಿದ್ದು." ಎಂದ.

ಡ್ರಾಯರಿನಲ್ಲಿದ್ದ ಬೀಗದ ಕೈ ತೆಗೆದುಕೊಂಡು ರಾಜಶೇಖರಪ್ಪ ಚಲಂನನ್ನು ಕರೆದುಕೊಂಡು ಹೋದ. ಎದುರು ವಿಂಗ್‌ನಲ್ಲಿದ್ದ ಸಾಲು ಕೋಣೆಗಳಲ್ಲಿ ಒಂದರ ಬೀಗ ತೆಗೆದ. ಹಳೆಯ ಚಾಪೆಯೊಂದನ್ನು ಹಾಸಿತ್ತು. ಅದರ ಮೇಲೆ ಪ್ರಕಾಶ ಕುಳಿತುಕೊಂಡಿದ್ದ.

ಪತ್ತೇದಾರ ಖೈದಿಯೊಡನೆ ರಹಸ್ಯವಾಗಿ ಮಾತನಾಡುವುದಿರಬಹುದೆಂದು ರಾಜಶೇಖರಪ್ಪ ಅಂದುಕೊಂಡ.

"ನಾನು ಹೋಗುತ್ತೇನೆ ನೀವು ನಿಧಾನವಾಗಿ ಮಾತನಾಡಿಕೊಂಡು ಬನ್ನಿ. ಇನ್ಸ್‌ಪೆಕ್ಟರು ಹೇಳಿದುದೆಲ್ಲವೂ ನಿಮಗೆ ನೆನಪಿರಬಹುದು. ನೀವು ಹೋಗುವಾಗ ನನ್ನನ್ನು ಕೂಗಿದರೂ ಸರಿ, ಅಥವಾ ನೀವೇ ಬಾಗಿಲು ಹಾಕಿಕೊಂಡು ಬಂದರೂ ಸರಿ."

ರಾಜಶೇಖರಪ್ಪ ಹೊರಟು ಹೋದನಂತರ ಪ್ರಕಾಶನು "ಈ ದಿನ ಬೆಳಗಾಗ ನನ್ನ ತಂದೆಯವರು ಬಂದು ನಿಮ್ಮನ್ನು ನೋಡಿದ್ದರೇ ?" ಎಂದ.

"ಹುಂ, ಬಂದಿದ್ದರು ನಿಮ್ಮ ಮೊಕದ್ದಮೆಯನ್ನು ಸ್ವೀಕರಿಸಬೇಕೆಂದೂ ನಿಮ್ಮ ನಿರಪರಾಧಿತ್ವವನ್ನು ಸಾಬೀತು ಮಾಡಬೇಕೆಂದೂ ಹೇಳಿದರು. ಸಾಧ್ಯವಾದಷ್ಟು ಪ್ರಯತ್ನ ಪಡುವುದಾಗಿ ಹೇಳಿದೆ."

ಚಲಂ ತಾನು ಬೇರೊಂದು ಸಿಗರೇಟು ಹಚ್ಚಿಕೊಳ್ಳುವ ಮೊದಲು "ನೀವು ಸಿಗರೇಟೇನಾದರೂ ಸೇದುವ ಪದ್ಧತಿಯುಂಟೇ ?" ಎಂದ.

"ಯಾವಾಗಲಾದರೂ ಒಮ್ಮೊಮ್ಮೆ ಸೇದುವುದುಂಟು. ಆದರೆ ಈಗ ನನಗೆ ಬೇಡ."

ತಾನೇ ಹಚ್ಚಿಕೊಂಡು ಮೂರು ನಾಲ್ಕು ಬಾರಿ ಹೊಗೆ ಎಳೆದು ಹೊರಗೆ ಬಿಟ್ಟು "ಪ್ರಕಾಶ್, ಮಹಮುದಾಲಿಯು ಘಾಜೀಖಾನ್ ಈರಾನಿಗೆ ಕೊಟ್ಟಿದ್ದ ಚೆಕ್‌ಗೆ ಹಣ ಕೊಡುವ ಮೊದಲು ಅದು ಎಷ್ಟಕ್ಕೆ ಬರೆಯಲ್ಪಟ್ಟಿದ್ದಿತೆಂಬುದನ್ನು ಚೆನ್ನಾಗಿ ನೋಡಿದಿರಾ ?" ಎಂದು ಕೇಳಿದ.

"ಚೆನ್ನಾಗಿ ನೋಡಿದೆ. ಅದು ನಲವತ್ತು ಸಾವಿರಕ್ಕೆ ಬರೆದಿತ್ತು."

"ನೀವು ಯಾವ ಚೆಕ್‌ಗೆ ಹಣವನ್ನು ಕೊಟ್ಟಿರೋ ಅದನ್ನು ನಿನ್ನೆಯ ದಿನ ನಿಮಗೆ ತೋರಿಸಿದೆವು. ಅದರ ಮೇಲೆ ನಿಮ್ಮ ರುಜು ಇರುವುದರಿಂದಲೂ ಆದರ ಮೇಲೆ ನಿಮ್ಮದೇ ಕೈ ಬರಹಗಳಿರುವುದರಿಂದ ಅದೇ ಚೆಕ್‌ಗೆ ನೀವು ಹಣ ಕೊಟ್ಟಿದ್ದೆಂಬುದರಲ್ಲಿ ಸಂದೇಹಪಡುವುದಕ್ಕೆ ಅವಕಾಶವಿಲ್ಲ. ನಿಮಗಿಂತ ಮೊದಲು ಆ ಚೆಕ್ ಲೆಡ್ಜರ್ ಕ್ಲಾರ್ಕ್ ಬಳಿಗೂ, ಅನಂತರ ಮೇನೇಜರ್ ಬಳಿಗೂ ಹೋಗಿದ್ದಿತು ಅವರುಗಳು ಆ ಚೆಕ್ ನಾಲ್ಕು ಸಾವಿರಗಳಿಗೆ ಇದ್ದಿತೆಂದು ಹೇಳಿರುವುದೇ ಅಲ್ಲದೇ ತಮ್ಮ ಲೆಡ್ಜರುಗಳಲ್ಲಿಯೂ ಹಾಗೆಯೇ ಬರೆದಿದ್ದಾರೆ. ಅದರಿಂದ ನೀವು ಆ ಚೆಕ್ಕನ್ನು ನಲವತ್ತು ಸಾವಿರಗಳದು ಎಂದುಕೊಂಡಿರುವುದು ಭ್ರಾಂತಿಯಾಗಿರಬೇಕಲ್ಲವೇ ?"

"ಉಹುಂ, ಭ್ರಾಂತಿಯಿಲ್ಲ. ನಾನು ಈಗ ಒಂದು ತಿಂಗಳಿಂದಲೂ ಬ್ಯಾಂಕಿನಲ್ಲಿ ಕ್ಯಾಷಿಯರ್ ಕೆಲಸವನ್ನು ನೋಡುತ್ತಿದ್ದೇನೆ. ಯಾವಾಗಲೂ ಹೀಗಾಗಿಲ್ಲ. ಒಂದು ಕಾಸನ್ನೂ ಹೆಚ್ಚಾಗಿ ಕೊಟ್ಟಿಲ್ಲ. ನಿನ್ನೆಯ ದಿನ ಮಧ್ಯಾಹ್ನ ಭ್ರಾಂತನಾಗುವುದಕ್ಕೆ ಯಾವ ಕಾರಣವೂ ಇರಲಿಲ್ಲ...." ಎಂದು

ಹೇಳಿದವನು ತಟ್ಟನೆ ಧ್ವನಿಯನ್ನು ಬದಲಾಯಿಸಿಕೊಂಡು "ನಿನ್ನೆ ಸಂಜೆ ನಾನು ಕುಡಿಯುತ್ತಿದ್ದುದನ್ನು ನೋಡಿ, ಬ್ಯಾಂಕಿಗೆ ಬಂದಾಗಲೂ ಕುಡಿದು ಕೊಂಡು ಬಂದಿದ್ದೆನೆಂದು ಈ ಪ್ರಶ್ನೆ ಕೇಳುತ್ತೀರೋ?" ಎಂದ.

ಪ್ರಕಾಶ್ ಈ ಮಾತು ಹೇಳಬಹುದೆಂದು ಚಲಂ ನೆನೆಸಿರಲಿಲ್ಲ ತಟ್ಟನೆ ನಗುವುದಕ್ಕೂ ಸಿದ್ಧವಾಗಿರಲಿಲ್ಲ. ಮಾತು ಹೇಳಲ್ಪಟ್ಟಾಗ ಎಳೆದುಕೊಂಡಿದ್ದ ಸಿಗರೇಟು ಹೊಗೆ ಶ್ವಾಸಕೋಶಗಳಲಿದ್ದು ನಗುವಿನೊಂದಿಗೆ ಮೂಗು ಕಣ್ಣು ಗಳಲ್ಲಿ ಹೊರಗೆ ಬಂದಿತು. ಕೆಮ್ಮು ಬೆರೆತ ನಗು ನಕ್ಕು ಕರ್ ಚೀಫ್‌ನಿಂದ ಮುಖ ಒರಸಿಕೊಂಡು ಹೇಳಿದ.

"ನಾನು ಹಾಗೆ ಹೇಳಲಿಲ್ಲ .."

"ಹಿಂದೆ ಕಾಲೇಜಿನಲ್ಲಿ ಓದುತ್ತಿದ್ದಾಗ ಸ್ನೇಹಿತರಿಂದ ಕುಡಿಯುವುದು ಅಭ್ಯಾಸವಾಯಿತು. ಹೆಚ್ಚು ಅಂದರೆ ಕೇವಲ ಒಂದು ಗ್ಲಾಸಿನಷ್ಟು ಬೀರ್ ತೆಗೆದುಕೊಳ್ಳುತ್ತಿದ್ದೆ. ಈಗಲೂ ಅಷ್ಟೇ. ಎರಡು ಗ್ಲಾಸುಗಳಿಗಿಂತ ಹೆಚ್ಚಾಗಿ ತೆಗೆದ-ಕೊಳ್ಳುವುದಿಲ್ಲ. ಅದರಿಂದ ಒಬ್ಬ ಮನುಷ್ಯನ ಜ್ಞಾನ ಎಷ್ಟು ಕೆಟ್ಟೀ ತೆಂಬುದನ್ನು ನೀವೇ ಯೋಚನೆ ಮಾಡಿರಿ. ಬ್ಯಾಂಕಿಗೆ ಬರುವಾಗ ಮನೆ ಯಲ್ಲಿ ಊಟ ಮಾಡಿಕೊಂಡು ಬಂದೆ. ಬೀರನ್ನು ಮೂಸಿ ಸಹ ನೋಡುವು ದಕ್ಕೆ ಅವಕಾಶವಿರಲಿಲ್ಲ. ಐದು ರೂಪಾಯಿಯ ಚೆಕ್ ಆದರೂ ಎರಡು ಮೂರು ಸಲ ನೋಡಿ ಕ್ಯಾಷ್ ಕೊಡುತ್ತೇವೆ. ಹಾಗಿರುವಾಗ ಸರಿಯಾಗಿ ನೋಡದೇ ಮಾಡದೇ ಇಷ್ಟು ದೊಡ್ಡ ಚೆಕ್‌ಗೆ ಹಣ ಕೊಡುತ್ತೇನೆಯೇ? ಚೆನ್ನಾಗಿ ನೋಡಿದೆ. ಅದರಲ್ಲಿ ನಲವತ್ತು ಸಾವಿರ ರೂಪಾಯಿಗಳು ಮಾತ್ರ ಎಂದು ಸ್ಪಷ್ಟವಾಗಿ ಬರೆದಿತ್ತು. ಚೆಕ್ಕು ಕೈಗೆತ್ತಿಕೊಂಡಾಗ ನೋಡಿದೆ, ಹಣ ಎಣಿಸಿ ಕೊಡುವಾಗ ನೋಡಿದೆ, ಅದರ ಮೇಲೆ ಹಣ ಕೊಟ್ಟಾಯಿತು ಎಂಬ ಠಸ್ಸೆ ಹೊಡೆದು ರುಜು ಮಾಡಿದಾಗ ನೋಡಿದೆ. ಅದರ ಮೇಲೆ ನಲವತ್ತು ಸಾವಿರಗಳು – ಎಂದೇ ಇದ್ದಿತು."

"ನೀವು ಆ ಹಣವನ್ನನ್ನೂ ಫಾಜೀರ್ಖಾ ಈರಾನಿಯ ಕೈಗೆ ಕೊಟ್ಟಿರೋ?"

"ಹೌದು. ಅವನ ಕೈಗೇ ಕೊಟ್ಟೆ...."

"ಅವನನ್ನು ಹಿಂದೆ ಯಾವಾಗಲಾದರೂ ನೋಡಿದ್ದಿರಾ?"

"ಇಲ್ಲ ನೋಡಿದ್ದು ನಿನ್ನೆ ಬ್ಯಾಂಕ್‌ಗೆ ಬಂದಾಗ ಮಾತ್ರವೇ."

"ಅವನು ನೋಡುವುದಕ್ಕೆ ಹೇಗಿದ್ದ....?"

ಈರಾನಿಯು ಹೇಗಿದ್ದನೆಂಬುದನ್ನು ಪ್ರಕಾಶ್ ವಿವರಿಸಿದ. ಹಿಂದಿನ ದಿನ ಶ್ರೀಧರ ಬ್ಯಾಂಕಿನಲ್ಲಿ ಹೇಳಿದ್ದಕ್ಕೂ, ಪ್ರಕಾಶ್ ಹೇಳುವುದಕ್ಕೂ ಏನು ವ್ಯತ್ಯಾಸವೂ ಇರಲಿಲ್ಲ. ಈರಾನಿಯು ಚುಟ್ಟಾ ಸೇದುತ್ತಿದ್ದನೆಂಬ ವಿವರ ಮಾತ್ರ ಹೆಚ್ಚಾಗಿ ಹೇಳಿದ.

"ಅವನು ಬ್ಯಾಂಕಿಗೆ ಬಂದಾಗಲೇ ನನ್ನ ದೃಷ್ಟಿ ಅತ್ತ ತಿರುಗಿತು. ಅದಕ್ಕೆ ಅವನ ವೇಷಭೂಷಣಗಳೇ ಕಾರಣ. ಅವನು ಸೇದುತ್ತಿದ್ದ ಚುಟ್ಟಾದಲ್ಲಿ ಏನೋ ದೋಷವಿದ್ದಿತೆಂದು ತೋರುತ್ತದೆ. ಅದು ಸರಿಯಾಗಿ ಸುಟ್ಟು ಹೊಗೆ ಬರುತ್ತಿರಲಿಲ್ಲ. ಮತ್ತೆ ಮತ್ತೆ ಬೆಂಕೀ ಕಡ್ಡಿ ಗೀರಿ ಹತ್ತಿಸಿ ಕೊಳ್ಳುತ್ತಿದ್ದ."

"ಬ್ಯಾಂಕಿಗೆ ಬಂದ ಅವನು ಏನೇನು ಮಾಡಿದನೆಂದು ಹೇಳಬಲ್ಲಿರಾ?"

"ಅವನು ಬಂದಾಗ ಮೂರು ನಾಲ್ಕು ಜನ ಕ್ಯಾಷ್ ತೆಗೆದುಕೊಳ್ಳಲು ಕೌಂಟರಿನ ಬಳಿ ನಿಂತಿದ್ದರು. ಆದರಿಂದ ನಾನು ಅವನನ್ನು ಹೆಚ್ಚಾಗಿ ಗಮನಿಸುವುದಕ್ಕಾಯಿತೆಂದು ಹೇಳಲಾರೆ. ಆದರೂ ತಕ್ಕಮಟ್ಟಿಗೆ ಹೇಳುತ್ತೇನೆ. ಅವನ ನಡೆನುಡಿಗಳಲ್ಲಿ ಯಾವ ಅಸಹಜತೆಯೂ ಕಂಡುಬರಲಿಲ್ಲ. ಬಂದವನೇ ನಿಂತುಕೊಂಡು ಎಲ್ಲ ಕೌಂಟರುಗಳ ಕಡೆಯೂ ನೋಡಿದ. ಯಾವುದೋ ಒಂದರ ಬಳಿಗೆ ಹೋಗಿ ಚಕ್ ಎಲ್ಲಿ ಕೊಡಬೇಕೆಂದು ಕೇಳಿ, ಲೆಡ್ಜರ್ ಕ್ಲಾರ್ಕ್ ಬಳಿ ಚಕ್ ಕೊಟ್ಟು, ಕಾಯುವವರಿಗಾಗಿಯೇ ಹಾಕಿದ್ದ ಬೆಂಚಿನ ಮೇಲೆ ಕುಳಿತ. ಸ್ವಲ್ಪ ಹೊತ್ತಿನಲ್ಲಿ ಅಟೆಂಡರ್ ಕೆಂಪಯ್ಯ ಚಕ್ ತೆಗೆದು ಕೊಂಡು ಬಂದ. ಅದರ ಹಿಂದೆ ಉರ್ದುವಿನಲ್ಲಿ ರುಜು ಮಾಡಿತ್ತು. ಇಂಗ್ಲೀಷಿನಲ್ಲಿ ಮಾಡಬೇಕೆಂದು ಹೇಳಿದರಂತೆ. ಈರಾನಿಯಿಂದ ರುಜು ಮಾಡಿಸಿ ಚೆಕ್ಕನ್ನು ಕೌಂಟರಿನ ಕಟಕಟೆಯೊಳಗೆ ಹಾಕಿ ಹೊರಟುಹೋದ. ಅನಂತರ ನಾನು ಅದಕ್ಕೆ ಪೇಮೆಂಟ್ ಮಾಡಿದೆ."

"ನೀವು ಅವನೊಂದಿಗೆ ಏನೋ ಮಾತನಾಡಿದಿರಂತೆ."

"ಹಾಗೆಂದು ಬ್ಯಾಂಕಿನಲ್ಲಿ ಹೇಳಿದರೋ? ಮಾತನಾಡಿದೆ. ಆದರೆ ಅದರಲ್ಲಿ ಯಾವ ವಿಷಯವೂ ಇರಲಿಲ್ಲ. ಚಕ್ ಕೊಟ್ಟ ಮಹಮುದಾಲಿಯ

ಬುಕ್ಕಿ ಎಂಬುದು ನನಗೆ ಗೊತ್ತಿತ್ತು. ಅವನು ಚಕ್ ಕೊಡಬೇಕಾದರೆ ಈರಾಸಿಯು ರೇಸ್‌ನಲ್ಲಿ ಗದ್ದಿದ್ದಾನೆಂದು ತೋರಿತು. ಆದರಿಂದ "ನೀವು ಒಳ್ಳೆಯ ಅದೃಷ್ಟವಂತರು." ಎಂದೆ. ಅವನು "ಇದೆಂತಹ ಅದೃಷ್ಟ? ರೇಸ್ ನಲ್ಲಿ ನನ್ನ ಸರ್ವಸ್ವವನ್ನೂ ಕಳೆದುಕೊಂಡಿದ್ದೇನೆ" ಎಂದ. ಅವನಷ್ಟೇ ಹೇಳಿದ್ದರೆ ನಾನು ಇನ್ನೂ ಮಾತನಾಡುತ್ತಿದ್ದೆನೋ ಏನೋ? ಆದರೆ ಆ ಮಾತನ್ನು ತಿರಸ್ಕಾರದಿಂದ ಹೇಳಿದ. ಆದರಿಂದ ಸುಮ್ಮನಾಗಿಬಿಟ್ಟೆ. ಅವನು ಆ ಹಣ ಎಣಿಸಿ ಜೇಬಿನಲ್ಲಿ ಹಾಕಿಕೊಂಡು ಹೋಗುವಾಗ ಅನ್ನಿಸಿತು ಇಷ್ಟೊಂದು ಹಣದ ವಿಷಯದಲ್ಲಿ ಇವನಿಗೆಷ್ಟು ತಿರಸ್ಕಾರವಿದೆ - ಎಂದು."

"ಸರಿ. ನೀವು ಬ್ಯಾಂಕಿನಿಂದ ಕೊಟ್ಟ ನೋಟುಗಳೇ ನಿಮ್ಮ ಜೇಬಿನಲ್ಲಿ ಸಿಕ್ಕಿದುವಲ್ಲ. ಅದಕ್ಕೆ ಏನು ಕಾರಣವನ್ನು ಹೇಳುತ್ತೀರಿ?"

"ಅದೂ ಸಹ ಮತ್ತೊಂದು ಆಶ್ಚರ್ಯವೆಂದು ಹೇಳಬೇಕಷ್ಟೇ. ಅದು ನನ್ನ ಜೇಬಿಗೆ ಹೇಗೆ ಬಂದಿತೆಂಬುದು ನನಗೆ ಗೊತ್ತೇ ಇಲ್ಲ."

"ನಿನ್ನೆ ಮಧ್ಯಾಹ್ನ ಎರಡು ಗಂಟೆಯ ಸಮಯದಲ್ಲಿ ಬ್ಯಾಂಕಿಗೆ ಬಂದು ನಿಮ್ಮನ್ನು ಕರೆದುಕೊಂಡು ಹೋದವರು ಲತಾರವರೆಂದು ಕಾಣುತ್ತದೆ."

"ಹೌದು ..."

"ಆಕೆಯೊಡನೆ ನೇರನಾಗಿ ನೀವು ರೇಸ್ ಕೋರ್ಸ್‌ಗೆ ಹೋದಿರೋ?"

"ಹಾಗಾಗಲಿಲ್ಲ. ಆಕೆಯ ತಂದೆಯ ಹೆಸರು ಗುಲಾಬ್‌ಚಂದ್ ಎಂದು. ಅವರು ರೇಸ್ ಕುದುರೆಗಳ ಮಾಲೀಕರೆಂಬುದು ನಿಮಗೆ ತಿಳಿದಿರಬಹುದು. ಆತ ರೇಸ್ ಕೋರ್ಸಿಗೆ ಹೋಗುವ ಮೊದಲು ಮಗಳನ್ನು ಹೋಟಲಿಗೆ ಬರುವುದಕ್ಕೆ ಹೇಳಿದ್ದರಂತೆ ಆದರಿಂದ ಪಿಂಕ್ಸ್‌ಗೆ ಹೋಗಿದ್ದೆವು."

"ಆತ ಯಾಕೆ ಬರುವುದಕ್ಕೆ ಹೇಳಿದ್ದರೆಂಬುದನ್ನು ನೀವು ಬಲ್ಲಿರಾ?"

"ಹುಂ. ಲತೆ ದಾರಿಯಲ್ಲಿ ಹೇಳಿದರು. ಯಾವುದೋ ಒಂದೆರಡು ಕುದುರೆಗಳು ಗೆಲ್ಲುವ ಸಮಾಚಾರ ಬರುತ್ತದೆ. ಕುದುರೆಗಳು ಗೆಲ್ಲುವ ಸಮಾಚಾರ ಬರುತ್ತದೆ. ಅದನ್ನು ಆಡಬೇಕು. ಅದನ್ನು ಕೇಳಿಕೊಂಡು ಹೋಗು" – ಎಂದಿದ್ದರಂತೆ ಅದಕ್ಕಾಗಿ ಅಲ್ಲಿಗೆ ಹೋಗಿದ್ದೆವು. ಲತೆ ಅವುಗಳಿಗೇ ಆಡಿದಳು. ಹಣವೂ ಬಂದಿತು."

"ಗುಲಾಬ್‌ಚಂದರೇ ಅವುಗಳಿಗೆ ಆಡುವ ಅಡ್ಡಿಯೇನಿತ್ತು ?"

ಅವರಿಗೆ ತಲೆನೋವು ಬಂದಿತ್ತು. ನಿನ್ನೆಯು ದಿನ ಅವರು ರೇಸ್ ಕೊರ್ಸಿಗೇ ಬಂದಿರಲಿಲ್ಲ."

ಸ್ವಲ್ಪ ಹೊತ್ತು ಯೋಚನೆ ಮಾಡುತ್ತಿದ್ದು ಚಲಂ "ನಾನು ಎರಡು ವಿಷಯಗಳಲ್ಲಿ ಸಾಧ್ಯವಾದಷ್ಟು ವಿವರಗಳನ್ನು ತಿಳಿದುಕೊಳ್ಳಬೇಕೆಂದು ನಿನ ಬಳಿಗೆ ಬಂದೆ. ಸ್ವಲ್ಪ ಮಟ್ಟಿಗೂ ನನಗೆ ಪ್ರಯೋಜನವಾಗಲಿಲ್ಲ." ಎಂದ.

ಪ್ರಕಾಶ್ ಆಸಕ್ತಿಯಿಂದ ಪತ್ತೇದಾರನ ಕಡೆ ನೋಡಿದ.

"ಒಂದು ಮಹಮ್ಮದಾಲಿಯ ಚೆಕ್‌ನ ವಿಷಯ. ನಾಲ್ಕು ಸಾವಿರ ರೂಪಾಯಿಗಳ ಚೆಕ್ ನಿಮ್ಮ ಕೈಲಿದ್ದಾಗ ಮಾತ್ರ ನಲವತ್ತು ಸಾವಿರ ರೂಪಾಯಿಗಳದಾದುದು ಹೇಗೆಂಬುದು. ಎರಡನೆಯದು ಯಾವ ಸಂದರ್ಭ ದಲ್ಲಿ ನಿಮಗೆ ತಿಳಿದೋ ತಿಳಿಯದೆಯೋ ಕರೆನ್ಸೀ ನೋಟುಗಳು ನಿಮ ಜೇಬಿಗೆ ಬಂದುವೆಂಬುದು."

"ಹೌದು. ನೀವು ಹೇಳುವುದು ನಿಜ. ನಾನು ಯಾವುದಾದರೊಂದು ವಿಧವಾಗಿ ಇವುಗಳಿಗೆ ಸಮಾಧಾನ ಹೇಳಬಲ್ಲವನಾಗಿದ್ದಿದ್ದರೆ ಮೊದಲು ನಿಮಗೆ ಹೇಳುತ್ತಿದ್ದೆ."

"ಇನ್ನೊಂದು ವಿಷಯ ಕೇಳಬೇಕಾಗಿದೆ ಪ್ರಕಾಶ್. ಈಗೀಗ ನೀವು ರೇಸ್‌ಗೆ ಸಂಬಂಧಪಟ್ಟ ಜನಗಳೊಂದಿಗೆ ಹೆಚ್ಚಾಗಿ ಓಡಿಯಾಡುತ್ತಿದ್ದೀರೆಂದು ಕೇಳಿದ್ದೇನೆ. ಈ ಹೊಸ ಸಹವಾಸ ನಿಮಗಾದುದು ಹೇಗೆ ?"

"ನಾನು ರೇಸ್ ಕೋರ್ಸ್‌ಗೆ ಹೋಗಿಯೇ ಇರಲಿಲ್ಲ. ಕುದುರೆಗಳು ಓಡುವುದನ್ನೂ, ಅವುಗಳ ಮೇಲೆ ದುಡ್ಡು ಕಟ್ಟುವುದರಲ್ಲಿಯೂ ಏನು ಸುಖ ವಿದೆ. ಜನಗಳೇಕೆ ಮೇಲೆ ಬಿದ್ದು ಇದಕ್ಕಾಗಿ ಸಾಯುತ್ತಾರೆ – ಎಂದುಕೊಳ್ಳು ತ್ತಿದ್ದೆ. ಆದರಲ್ಲಿ ಏನಿದೆಯೋ ಪರೀಕ್ಷೆ ಮಾಡಿ ನೋಡಿ ಬಿಡಬೇಕೆಂದು ಈ ಬಾರಿ ರೇಸ್ ಸೀಸರ್ಜ ಆರಂಭವಾಗುವ ಮೊದಲೇ ನಿರ್ಧರಿಸಿದೆ. ಮೊದಲ ದಿನದಿಂದ ಯಾವ ರೇಸ್‌ಗೂ ತಪ್ಪಿಸಿಕೊಳ್ಳದೇ ಹೋಗುತ್ತಿದ್ದೇನೆ___ "

"ಹೇಳಿ, ಕೇಳುತ್ತಿದ್ದೇನೆ."

"ಮೊದಲ ಒಂದೆರಡು ರೇಸ್‌ಗಳಲ್ಲಿ ನಾನು ಹೇಳಿದಂತೆಯೇ ಆಯಿತು. ಕುದುರೆಗಳು ಓಡುವಾಗ, ಅವುಗಳು ಗೆದ್ದಾಗ ಜನಗಳು ಕೂಗುತ್ತಲೂ,

ಕಿರುಚಿಕೊಳ್ಳುತ್ತಲೂ ಇದ್ದರು. ಹಾಗೇಕೆ ಮಾಡಬೇಕೋ ನನಗೆ ಅರ್ಥ ವಾಗಲಿಲ್ಲ. ಅನಂತರ ನಾನೂ ಬಂದು ರೇಸ್ ಪುಸ್ತಕ ತೆಗೆದುಕೊಂಡು ಯಾವ ಕುದುರೆಗಳು ಗೆಲ್ಲಬಹುದೆಂದು ಲೆಕ್ಕಹಾಕತೊಡಗಿದೆ. ಕುದುರೆಗಳ ಹೆಸರೂ ತಿಳಿಯದ ನಾನು ಗೆಲ್ಲುವ ಕುದುರೆಗಳು ಇಂತಹವೇ ಎಂಬುದನ್ನು ಹೇಗೆ ಊಹಿಸಬಲ್ಲೆ? ಕೋರ್ಸಿನ ಮಧ್ಯೆ ಚಪ್ಪರದಂತೆ ಒಂದು ಜಾಗ ಮಾಡಿದ್ದಾರೆ. ಅಲ್ಲಿ ಅನೇಕ ಮಂದಿ ಮೇಜುಗಳ ಮುಂದೆ ನಿಂತುಕೊಂಡು ಹಣವನ್ನು ಕೊಡುತ್ತಲೂ ತೆಗೆದುಕೊಳ್ಳುತ್ತಲೂ ಇರುತ್ತಾರೆ. ಅವರು ಬುಕ್ಕಿಗಳೆಂದು ನನಗೆ ಆಗ ತಿಳಿದಿರಲಿಲ್ಲ. ಅಲ್ಲಿ ಪ್ರತಿಯೊಂದು ಕುದುರೆಯ ಹೆಸರನ್ನೂ ಬರೆದು ಅವುಗಳಿಗೆ ಎಷ್ಟು ಮಡಿದುಡ್ಡು ಕೊಡಲಾಗುತ್ತದೆಂಬುದನ್ನು ಬರೆಗಿರುತ್ತಾರೆ. ಅದರಲ್ಲಿ ಎರಡರಷ್ಟು ಮೂರರಷ್ಟು ಯಾವುದಕ್ಕೆ ಕೊಡಲಾಗುತ್ತದೆಂದು ಬರೆದಿರುತ್ತದೆಯೋ ಅವುಗಳೇ ಬಹುಮಟ್ಟಿಗೆ ಗೆಲ್ಲುತ್ತದೆಂದು ಪ್ರತಿ ರೇಸ್‌ನಲ್ಲಿಯೂ ಗುರುತು ಮಾಡಿಕೊಳ್ಳುತ್ತಿದ್ದೆ. ಬಹುಮಟ್ಟಿಗೆ ಅವೇ ಕುದುರೆಗಳು ಗೆಲ್ಲುತ್ತಿದ್ದವು."

"ಬಹಳ ಸುಲಭವಾದ ಉಪಾಯ ಕಂಡುಕೊಂಡಿರಿ!" ಎಂದು ಚಲಂ ನಕ್ಕ.

''ಇಂತಹ ಕುದುರೆ ಗೆಲ್ಲುತ್ತದೆ ಎಂದು ನಿರೀಕ್ಷಿಸಿ ಪಂದ್ಯವನ್ನು ನೋಡಲಾರಂಭಿಸಿದಾಗ ಅದರಲ್ಲಿ ಸ್ವಾರಸ್ಯವು ಕಂಡುಬಂದಿತು. ಎರಡನೇ ದಿನ ನೂರು ರೂಪಾಯಿ ತೆಗೆದುಕೊಂಡು ಹೋದೆ. ನಾನು ಹಿಂದೆ ಹೇಳಿದ ಪ್ರಕಾರ ಕುದುರೆಗಳನ್ನು ಆರಿಸಿ ಪ್ರತಿಯೊಂದು ರೇಸಿಗೂ ಹಣ ಕಟ್ಟತೊಡಗಿದೆ. ಆ ದಿನ ಒಂದಿಪ್ಪತ್ತು ರೂಪಾಯಿಗಳಷ್ಟು ನಷ್ಟವಾಗಿರಬಹುದು. ಆದರೆ ಅದರಲ್ಲೆಷ್ಟು ಸ್ವಾರಸ್ಯವಿದೆ. ಎಷ್ಟು ಸುಖವಿದೆ. ಜನ ರೇಸಿಗೆ ಹೋಗುವುದರಲ್ಲಿ ತಪ್ಪಿಲ್ಲವೆಂದೂ, ಅದನ್ನು ಆಕ್ಷೇಪಣೆ ಮಾಡುವವರಿಗೆ ಅದರ ತಿಳುವಳಿಕೆಯಿಲ್ಲವೆಂದೂ ಅಂದುಕೊಂಡೆ.''

ಚಲಮ್ಮು "ನೀವು ರೇಸ್‌ಗೆ ಹೋಗಲು ಆರಂಭಿಸಿದುದು ಹೇಗೆಂದು ನಾನು ಕೇಳಲಿಲ್ಲ. ಆ ಸಂಬಂಧವಾದ ಜನಗಳ ಪರಿಚಯ ಹೇಗಾಯಿತೆಂದು ಕೇಳುತ್ತಿದ್ದೇನೆ?'' ಎಂದ.

"ಅವನ್ನೇ ಹೇಳಲು ಹೊರಟವನು ಏನು ಏನೋ ಹೇಳತೊಡಗಿದೆ." ಎಂದು ಹೇಳಿದ ಪ್ರಕಾಶ್ 'ರೇಸ್ ಕೋರ್ಸ್‌ನಲ್ಲಿ ಸುಲಭವಾಗಿ ಜನಗಳ ಪರಿಚಯವಾಗುತ್ತದೆ. ಇಂತಹ ಕುದುರೆ ಗೆಲ್ಲುತ್ತದೆ ಎಂದು ಸೂಚಿಸುವುದರಿಂದ ಮೊದಲುಗೊಂಡು ಟಿಕೆಟ್ ಕ್ಯಾಷ್ ಮಾಡಿ ಹಣ ತಂದು ಕೊಡುವವರೆವಿಗೆ ಜನ ಉಪಕಾರ ಮಾಡಲು ತಯಾರಾಗಿರುತ್ತಾರೆ. ಎರಡನೇ ದಿನ, ಮೂರನೆಯ ದಿನದೊಳಗಾಗಿ ಎಷ್ಟೋ ಮಂದಿಯ ಸ್ನೇಹವಾಯಿತು. ಕೆಲವರು ಬುಕ್ಕಿಗಳ ಬಳಿಯೂ, ಮತ್ತೆ ಕೆಲವರು ಪಂದ್ಯವನ್ನು ನೋಡುತ್ತಾ ನಿಂತಿದ್ದಾಗಲೂ, ಇನ್ನು ಕೆಲವರು ಅಲ್ಲಿಯೇ ಇರುವ ಬಾರಿನಲ್ಲಿಯೂ ಪರಿಚಯವಾದರು. ಹಾಗೆ ಪರಿಚಯವಾದವರಲ್ಲಿ ಲತಾದೇವಿಯವರ ಪರಿಚಯ ಸ್ನೇಹದಲ್ಲಿ ಪರ್ಯವಸಾನವಾಯಿತು. ನಾನು ರೇಸ್ ಹಣ ಕಟ್ಟುವುದನ್ನು ಅವರು ನಿಶೇಧಿಸಿದರು. ಎಷ್ಟು ಹೇಳಿದರೂ ಅವಕಾಶ ಕೊಡಲಿಲ್ಲ. ನಿಜವಾಗಿ ಹೇಳುವುದೆಂದರೆ ಲತಾದೇವಿಯವರ ಸ್ನೇಹವಾದ ಮೇಲೆ ರೇಸ್ ಕೋರ್ಸ್‌ಗೆ ಹೋಗುತ್ತಿದ್ದುದು ಕುದುರೆ ಪಂದ್ಯಗಳ ಮೇಲಿನ ಆಸಕ್ತಿಗಲ್ಲ ಅವರ ಸ್ನೇಹದಿಂದ ಬಂಧಿತನಾಗಿ ಹೋಗುತ್ತಿದ್ದೆ" ಎಂದ.

ಒಂದು ಸಿಗರೇಟು ಸೇದುವವರೆವಿಗೆ ಸುಮ್ಮನೆ ಕುಳಿತಿದ್ದು, ಅನಂತರ ಚಲಂ ಕೇಳಿದ.

"ಪ್ರಕಾಶ್, ನೀವು ಫೌಜೀದಾರ್ ಈರಾನಿಗೆ ನೋಟುಗಳನ್ನು ತೆಗೆದು ಕೊಟ್ಟಿರಲ್ಲ ಅವು ಎಲ್ಲಿದ್ದವು ?"

"ಎಲ್ಲಿದ್ದವು ಎಂಬ ಪ್ರಶ್ನೆ ಆಶ್ಚರ್ಯಕರವಾಗಿದೆ. ಬ್ಯಾಂಕಿನಲ್ಲಿದ್ದವು."

"ಊಹುಂ, ನಾನು ಕೇಳಿದ್ದು ಆ ರೀತಿಯಲ್ಲ. ಕ್ಯಾಷ್ ಕೌಂಟರಿನಲ್ಲಿ ಕೆಳಗಡೆ ಇಟ್ಟಿದ್ದ ಸೂಟ್ ಕೇಸಿನಲ್ಲಿದ್ದುವೆಂದು ಕೇಳಿದ್ದೇನೆ. ಹೌದೇ ?"

"ಓಹೋ ! ನೀವು ಕೇಳಿದ್ದು ಅದನ್ನೇ ! ಹೌದು ಅದರಿಂದಲೇ ತೆಗೆದುಕೊಟ್ಟೆ."

"ಅದರಿಂದ ತೆಗೆದುಕೊಡಬೇಕಾದ ಪ್ರಮೇಯವೇನಿತ್ತು ?"

"ಆ ಚೆಕ್ ನಲವತ್ತು ಸಾವಿರಗಳದು. ಈರಾನಿಯು ನೂರು ನೂರ

ಯಿನ ನೋಟುಗಳನ್ನು ಕೇಳಿದ. ಅಷ್ಟು ಕ್ಯಾಷ್ ಡ್ರಾಯರಿನಲ್ಲಿರಲಿಲ್ಲ. ಅದರಿಂದ ಸೂಟ್ ಕೇಸಿನಲ್ಲಿ ನಾಲ್ಕು ಕಟ್ಟುಗಳನ್ನು ತೆಗೆದು ಎಣಿಸಿಕೊಟ್ಟೆ."

"ಅದಷ್ಟನ್ನೂ ಈರಾನೀ ತೆಗೆದುಕೊಂಡು ಹೋದನೇ ?"

"ಹೌದು. ಅದರಲ್ಲಿ ಸಂದೇಹವೇ ಇಲ್ಲ."

"ಸರಿ, ಅನಂತರ ಲತಾದೇವಿಯವರು ಬಂದರು. ನೀವು ಅವರ ಜೊತೆ ಯಲ್ಲಿ ಹೊರಟಿರಲ್ಲವೇ ?"

"ಹುಂ. ಆದರೆ ಹಣ ಕೊಟ್ಟ ಕೂಡಲೇ ಹೊರಡಲಿಲ್ಲ. ಈರಾನೀ ಬಂದುದು ಹನ್ನೊಂದೂಕಾಲು ಗಂಟೆಯ ಸುಮಾರಿನಲ್ಲಿ. ಹನ್ನೆರಡೂವರೆ ಯವರೆಗೆ ನಾನೇ ಕ್ಯಾಷ್ ಕೌಂಟರಿನಲ್ಲಿ ಕುಳಿತಿದ್ದೆ. ನನ್ನ ಲೆಕ್ಕಗಳನ್ನೆಲ್ಲಾ ತೀರಿಸುವುದು ಒಂದೂವರೆಯಾಯಿತು. ಅನಂತರ ಅರ್ಧ ಗಂಟೆಯ ಹೊತ್ತು ಕಾಲಹರಣ ಮಾಡುತ್ತಿದ್ದೆ. ಲತಾರವರು ಬಂದುದು ಎರಡು ಗಂಟೆಗೆ."

"ಅಲ್ಲಿಂದ ಪಿಂಕ್ಸ್‌ಗೆ ಹೋದಿರಿ. ಅಲ್ಲಿ ಏನೇನು ನಡೆಯಿತು, ಯಾವು ದೊಂದು ಕ್ಷುದ್ರ ವಿಷಯವನ್ನೂ ಬಿಡದೇ ಹೇಳಿರಿ."

"ನಾವು ಪಿಂಕ್ಸ್‌ಗೆ ಹೋದಾಗ ಗುಲಾಬ್‌ಚಂದ್‌ರು ಇರಲಿಲ್ಲ. ಅವರಿ ಗಾಗಿ ಕಾಯಬೇಕಾಯಿತು. ಸೆಕೆಯೂ ಆಗುತ್ತಿತ್ತು. ಕೋಟು ಬಿಚ್ಚಿ ಸೋಫಾದ ಮೇಲೆ ಹಾಕಿ, ಫ್ಯಾನ್ ಹಾಕಿಕೊಂಡು ಹಾಗೆಯೇ ಒರಗಿ ಕೊಂಡೆ...."

ಚಲಂ ಹಠಾತ್ತನೆ ಬಾಯಿಹಾಕಿ "ಆಗ ನಿಮಗೇನಾದರೂ ಸಣ್ಣ ನಿದ್ದೆ ಬಂದಿತ್ತೇ ?" ಎಂದ.

"ಇಲ್ಲ. ಸುಮ್ಮನೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದೆ. ಪಿಂಕ್ಸ್‌ನಲ್ಲಿ ಲತೆಗಾಗಿ ಪ್ರತ್ಯೇಕ ಕೋಣೆಯಿದೆ. ನಾವು ಕುಳಿತಿದ್ದುದು ಅಲ್ಲಿ. ಹೋಟೆ ಲಿನ ಆಳಿಗೆ ಮೊದಲೇ ಲತೆ ಹೇಳಿ ಬಂದಿದ್ದಳು. ಸುಮಾರು ಹತ್ತು ನಿಮಿಷ ಗಳಲ್ಲಿ ಆಳು ಬಂದು ಗುಲಾಬ್‌ಚಂದರು ಬಂದಿರುವುದಾಗಿ ಹೇಳಿದ. ಲತೆ ತಂದೆಯೊಡನೆ ಮಾತನಾಡುವುದಕ್ಕೆ ಹೋದಳು. ಅನಂತರ ಗುಲಾಬ್ ಚಂದ್ ನನಗಾಗಿ ಹೇಳಿಕಳುಹಿಸಿದರು. ಆಶ್ಚರ್ಯವಾಗಿ ಕೂಡಲೇ ಎದ್ದು ಹೋದೆ...."

"ಕೋಟು ಅಲ್ಲಿಯೇ ಬಿಟ್ಟು ಹೋದಿರಿ ಅಲ್ಲವೇ ?"

''ಹಾಗೆಯೇ ತೋರುತ್ತದೆ. ಯಾಕೆಂದರೆ ಅವರೊಡನೆ ಮಾತ ನಾಡಿದ ಮೇಲೆ ಪುನಃ ಬಂದು ಕೋಟು ಹಾಕಿಕೊಂಡು ಹೋದ ನೆನಪು."

"ಗುಲಾಬ್‌ಚಂದ್ ಕರೆಯುತ್ತಲೇ ಆಶ್ಚರ್ಯವಾಯಿತೆಂದಿರಲ್ಲಾ. ಅದಕ್ಕೆ ಕಾರಣವೇನು ?''

ಆ ಪ್ರಶ್ನೆಗೆ ಜವಾಬು ಕೊಡಲು ಪ್ರಕಾಶನಿಗೆ ಸಂಕೋಚವಾಯಿತು.

''ಯಾವ ವಿಷಯವನ್ನೂ ಮರೆಮಾಚದೇ ಹೇಳಿ, ಪ್ರಕಾಶ್.''

"ನಾನೂ ಲತೆಯೂ ಸ್ನೇಹದಿಂದ ಇರುವುದು ಅವರಿಗೆ ಇಷ್ಟವಿಲ್ಲ. ನಾನು ಅಲ್ಲಿಗೆ ಹೋಗುವುದರಲ್ಲಿಯೂ, ಲತೆಯೊಂದಿಗೆ ಓಡಿಯಾಡುವುದರ ಲ್ಲಿಯೂ ಅವರಿಗೆ ಸಮಾಧಾನವಿರುವಂತೆ ಕಂಡುಬರುತ್ತಿರಲಿಲ್ಲ. ಅಂತಹವರು ಕರೆ ಕಳಿಸುತ್ತಲೇ ಆಶ್ಚರ್ಯವಾಯಿತು.''

"ಅವರು ಯಾತಕ್ಕೆ ನಿಮ್ಮನ್ನು ಕರೆಯಿಸಿದುದು ?''

''ಆಡುವುದಾದರೆ ಒಂದೆರಡು ಒಳ್ಳೆಯ ಕುದುರೆಗಳನ್ನು ಕೊಡುವು ದಾಗಿ ಹೇಳುವುದಕ್ಕೆ."

''ನೀವು ಏನೆಂದಿರಿ ?"

''ನಾನು ಕೊಡಿ – ಎಂದು ಹೇಳುತ್ತಿದ್ದೆನೋ ಏನೋ ? ಅಷ್ಟರಲ್ಲಿ ಲತೆ ಅವರು ಆಡುವುದಿಲ್ಲ. ಅದೇನು ಬೇಕಾಗಿಲ್ಲ – ಎಂದರು.''

"ನಿಮ್ಮನ್ನು ಕಂಡರೆ ಅವರಿಗೆ ಆಗುತ್ತಿರಲಿಲ್ಲವೆಂದ ಮೇಲೆ ನಿಮಗೇಕೆ ಒಳ್ಳೆಯ ಕುದುರೆಗಳನ್ನು ಕೊಡುವುದಾಗಿ ಹೇಳಿದರು.''

''ನಾನೂ ಆ ವಿಷಯ ಯೋಚನೆ ಮಾಡಿದೆ. ಎಂತಹ ಅಪ್ರಿಯ ರಾದವರ ವಿಷಯದಲ್ಲಿಯೂ ಒಮ್ಮೊಮ್ಮೆ ಸದ್ಭಾವಗಳು ಬರುವುದಿಲ್ಲವೇ. ಅಂತಹವುಗಳಲ್ಲಿ ಇದೂ ಒಂದೆಂದುಕೊಂಡೆ."

''ಅನಂತರ ನೀವು ಲತೆಯವರೊಂದಿಗೆ ರೇಸ್‌ಕೋರ್ಸ್‌ಗೆ ಹೊರಟು ಹೋದಿರಿ. ಅದು ಮುಗಿದನಂತರ ಪುನಃ ಪಿಂಕ್ಸ್‌ಗೆ ಬಂದು ಕುಡಿಯುತ್ತಾ ಕುಳಿತುಕೊಂಡಿರಿ. ಈ ನಡುವೆ ನೀವು ಯಾವಾಗಲೂ ಕೋಟು ತೆಗೆದಿಟ್ಟ ಜ್ಞಾಪಕವಿದೆಯೇ ?''

ಪ್ರಕಾಶನು ಏನೋ ತೋರಿಕೊಂಡು ''ನೀವು ವಿಷಯ ಎಲ್ಲಿಗೆ ಎಳೆ ಯುತ್ತಿದ್ದೀರೆಂಬುದು ಗೊತ್ತಾಯಿತು. ಲತೆಯ ಕೋಣೆಯಲ್ಲಿ ನಾನು

ಕೋಟು ಬಿಚ್ಚಿ ಹೊರಗೆ ಹೋದಾಗ ಯಾರಾದರೂ ಅದರಲ್ಲಿ ಕರೆನ್ಸೀ ನೋಟುಗಳು ಇಟ್ಟಿರಬೇಕೆಂದು ಹೇಳುತ್ತಿದ್ದೀರಲ್ಲವೇ ?" ಎಂದ.

"ಹೌದು ನನಗೆ ಹಾಗೇ ತೋರುತ್ತದೆ."

"ಅಂದರೆ ಈ ಪಿತೂರಿಯಲ್ಲಿ ಗುಲಾಬ್‌ಚಂದರು, ಲತಾದೇವಿ ಎಲ್ಲರೂ ಸೇರಿದ್ದಿರಬೇಕೆಂದು ಆಗುತ್ತದೆ. ಸರ್ವಥಾ ಅದು ಸರಿಯಲ್ಲ. ನನಗೆ ಒಂದು ಇರುವೆ ಕಚ್ಚುವುದನ್ನು ಸಹ ಲತಾದೇವಿಯು ಸಹಿಸುವುದಿಲ್ಲ. ಆಕೆ ನನಗಾಗಿ ಮೂವತ್ತಾರು ಸಾವಿರ ರೂಪಾಯಿಗಳನ್ನು ಕೊಡುವುದಕ್ಕೆ ಸಿದ್ಧವಾದುದನ್ನು ನೀವು ನಿನ್ನೆಯ ದಿನ ನೋಡಲಿಲ್ಲವೇ ?''

"ನಿಮ್ಮ ಮತ್ತು ಲತಾದೇವಿಯ ಸ್ನೇಹವು ಗುಲಾಬ್‌ಚಂದರಿಗೆ ಸರಿ ಬೀಳುತ್ತಿರಲಿಲ್ಲವೆಂದು ಹೇಳಿದಿರಲ್ಲ. ನಿಮ್ಮಿಬ್ಬರನ್ನೂ ಅಗಲಿಸುವುದಕ್ಕಾಗಿ ಗುಲಾಬ್ ಚಂದರೇಕೆ ಈ ತಂತ್ರ ಮಾಡಿರಬಾರದು ?"

ಪ್ರಕಾಶನು ನಕ್ಕು "ಚಂದ್ರಂ ಅವರೇ, ನೀವು ನನಗೆ ಉಪಕಾರ ಮಾಡುವುದಕ್ಕಾಗಿಯೋ ಈ ಪ್ರಶ್ನೆಗಳನ್ನು ಕೇಳುತ್ತಿದ್ದೀರಿ. ನನ್ನ ನಿರಪರಾಧಿತ್ವವನ್ನು ಸಾಬೀತು ಮಾಡುವುದಕ್ಕಾಗಿಯೋ ಎಷ್ಟೋ ಪ್ರಯತ್ನ ಮಾಡುತ್ತಿದ್ದೀರಿ. ಅದೂ ಅಲ್ಲದೇ ನಾನು ಹೇಳುವ ಮಾತುಗಳನ್ನು ಸಹಾನುಭೂತಿಯಿಂದ ಕೇಳುವವರು ಇಂದು ನೀವೊಬ್ಬರೇ. ಆದರೂ ನಾನೊಂದು ಮಾತು ಹೇಳುತ್ತೇನೆ. ನಮ್ಮ ಕಡೆ "ಘಟ್ಟದ ಕೆಳಗಿನ ಉಪ್ಪಿಗೂ, ಘಟ್ಟದ ಮೇಲಿನ ನಿಂಬೆಗೂ ಗಂಟುಹಾಕುವುದು" - ಎಂಬ ಗಾದೆ ಮಾತು ಹೇಳುತ್ತಾರೆ. ಗುಲಾಬ್‌ಚಂದರು ತಮ್ಮ ಮಗಳನ್ನು ಬಹಳ ಪ್ರೀತಿಮಾಡುತ್ತಾರೆ ಅವಳಿಗೆ ಅಪ್ರಿಯವಾದ ಯಾವ ಕೆಲಸವನ್ನೂ ಅವರು ಮಾಡುವುದಿಲ್ಲ. ಅದರಿಂದಲೇ ನನ್ನ ಮತ್ತು ಆಕೆಯ ಸ್ನೇಹಕ್ಕೆ ಯಾವ ವಿರೋಧವಾದ ಮಾತನ್ನೂ ಆಡಿಲ್ಲ. ಅಂತಹದರಲ್ಲಿ ನಾನು ಜೈಲಿಗೆ ಹೋಗುವಂತಹ ಕೆಲಸ ಮಾಡಿದರೆ ಮಗಳನ್ನೇ ಕಳೆದುಕೊಳ್ಳಬೇಕಾಗುತ್ತದೆಂಬುದನ್ನು ಅವರು ಬಲ್ಲರು. ಒಂದು ವೇಳೆ ಅವರೇ ಹೀಗೆ ಮಾಡಿಸಿದರು ಎನ್ನುವುದಾದರೆ ಫಾರ್ಚ್ಯೂನ್ ಈರಾನಿಯು ತೆಗೆದುಕೊಂಡು ಹೋದ ನೋಟುಗಳು ಅವರಿಗೆ ಸಿಕ್ಕಿದುದು ಹೇಗೆ ?" ಎಂದ.

"ಆ ಪ್ರಶ್ನೆಗೆ ಉತ್ತರ ಸಿಕ್ಕಿದರೆ ಈ ಪ್ರಕರಣವೇ ಬಗೆಹರಿದಂತೆ ಆಗುವುದು...."

"ಒಂದು ವೇಳೆ ನಾನು ಲತೆಯ ಕೋಣೆಯಲ್ಲಿ ಕೋಟು ಬಿಚ್ಚಿಟ್ಟು ಗುಲಾಬ್ ಚಂದರ ಕೋಣೆಗೆ ಹೋದಾಗ ಯಾರಾದರೂ ಕರೆನ್ಸೀ ನೋಟುಗಳನ್ನು ನನ್ನ ಜೇಬಿನಲ್ಲಿಟ್ಟಿರುವುದೇ ನಿಜವಾದರೆ ಆ ಕೆಲಸವನ್ನು ಯಾವನೋ ದುರಾತ್ಮನು ಮಾಡಿರಬೇಕು. ಖಂಡಿತವಾಗಿ ಅದಕ್ಕೂ, ಗುಲಾಬ್‌ಚಂದರಿಗೂ ಸಂಬಂಧವಿಲ್ಲವೆಂದು ಅಂತರಾತ್ಮ ಸಾಕ್ಷಿಯಾಗಿ ಹೇಳಬಲ್ಲೆ.''

''ಆಗಲಿ, ಪ್ರಕಾಶ್, ಈ ಪ್ರಕರಣದಲ್ಲಿ ನಾನು ಮಾಡಬೇಕಾದ ಕೆಲಸಗಳೂ, ಆಲೋಚಿಸಬೇಕಾದ ವಿಷಯಗಳೂ ಬಹಳವಾಗಿವೆ. ಪುನಃ ಅವಕಾಶವಾದಾಗ ಬಂದು ನೋಡುತ್ತೇನೆ.''

## ೧೦

ಸೋಮವಾರ ಬೆಳಗಾದ ಹನ್ನೊಂದು ಗಂಟೆಯ ಸಮಯದಲ್ಲಿ ಇಬ್ರಾಹಿಂ ಸಾಹೇಬರು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನಲ್ಲಿ ಕುಳಿತುಕೊಂಡಿದ್ದರು. ರಾಜಶೇಖರಪ್ಪನೂ ಅಲ್ಲಿಯೇ ಇದ್ದ. ಕೋರ್ಟಿಗೆ ಸಿಧಾನವಾಗಿ ಬರುತ್ತೇವೆಂದು ಹೇಳಿ ದಫೇದರ್ ಕಾಳಯ್ಯನನ್ನು ಕಳುಹಿಸಿದ್ದರು.

ಹಾಗೆ ಅವರು ಕಾಯುತ್ತಾ ಕುಳಿತಿದ್ದುದಕ್ಕೆ ಬಹಳ ಮುಖ್ಯವಾದ ಕಾರಣವಿತ್ತು. ಇಸ್ಮಾಯಿಲ್‌ನನ್ನು ಹೆಚ್ಚು ಕಾಲ ಪೋಲೀಸ್ ಲಾಕಪ್ಪಿನಲ್ಲಿಟ್ಟುಕೊಳ್ಳಲು ಸಾಹೇಬರಿಗೆ ಇಷ್ಟವಿರಲಿಲ್ಲ. ವಜ್ರದ ಹರಳಿನ ಸಂಬಂಧವಾದ ತನಿಖೆ ಕ್ರಮಗಳು ಮುಗಿದು ಹೋಗಿದ್ದವು. ಶನಿವಾರವೇ ರಾಜಶೇಖರಪ್ಪ ಹೋಗಿ ವಜ್ರದ ಹರಳನ್ನು ಗುಲಾಬ್‌ಚಂದರಿಂದ ವಸೂಲು ಮಾಡಿಕೊಂಡು ಬಂದಿದ್ದ. ಅದು ಸಾಹೇಬರ ಡ್ರಾಯರಿನಲ್ಲಿಯೇ ಇದ್ದಿತು. ಚಾರ್ಜ್‌ಶೀಟು ಸಹ ಬರೆದಿಟ್ಟುಕೊಂಡಿದ್ದರು. ಈ ದಿನ ಇಸ್ಮಾಯಿಲ್‌ನನ್ನು ಸಿಟಿ ಮ್ಯಾಜಿಸ್ಟ್ರೇಟರ ಮುಂದೆ ಹಾಜರು ಮಾಡಿ, ಚಾರ್ಜ್‌ಶೀಟು ಇಟ್ಟು, ಕೇಸು ಹಾಕಿ ಅವನನ್ನು ಜೈಲಿನ ವಶಕ್ಕೆ ಒಪ್ಪಿಸಬೇಕೆಂದಿದ್ದರು.

ಅವರು ಕಾಯುತ್ತಿದ್ದುದು ರಾಜರತ್ನಂ ಶೆಟ್ಟರಿಗೆ. ಬೆಳಗಾಗುತ್ತಿದ್ದಂತೆಯೇ ರಾಜಶೇಖರಪ್ಪ ಶೆಟ್ಟರ ಮನೆಗೆ ಹೋಗಿದ್ದ. ಶೆಟ್ಟರು ಅಷ್ಟು ಹೊತ್ತಿಗೇ ಬ್ಯಾಂಕಿಗೆ ಹೋಗಿ ಇಸ್ಮಾಯಿಲ್ ಚೆಕ್ಕನ್ನು ಡಿಸಾನರ್ ಮಾಡಿಸಿಕೊಂಡು ಬರುವುದಾಗಿ ಮಾತು ಕೊಟ್ಟಿದ್ದರು. ಅವರಿನ್ನೂ ಬಂದಿರಲಿಲ್ಲ.

ಅವರು ರಾಜರತ್ನಂ ಶೆಟ್ಟರಿಗಾಗಿ ಕಾಯುತ್ತಿದ್ದರೆ ರತ್ನವೇಲುನಾಯಿಡು ಬಂದರು. ಅವರು ಬೆಂಗಳೂರಿನ ಕ್ರಿಮಿನಲ್ ಲಾಯರುಗಳಲ್ಲಿ ಒಬ್ಬರು. ತಕ್ಕಮಟ್ಟಿಗೆ ಬುದ್ಧಿವಂತರೆಂದು ಹೆಸರಾಗಿದ್ದರು. ಇನ್ಸ್‌ಪೆಕ್ಟರು, ಸಬ್ ಇನ್ಸ್‌ಪೆಕ್ಟರುಗಳಿಗೆ ಅವರ ಪರಿಚಯವೂ ಇದ್ದಿತು.

ಸಾಹೇಬರು "ಏನು ಸಮಾಚಾರ ನಾಯಿಡೂರವರೇ?" ಎಂದು ಸ್ವಾಗತಿಸಿದರು.

"ಇಲ್ಲಿ ಇಸ್ಮಾಯಿಲ್ ಸೇಟ್ ಎಂಬುವರೊಬ್ಬರು ಲಾಕಪ್ಪಿನಲ್ಲಿದ್ದಾರೆ. ಅವರು ನನ್ನ ಕಕ್ಷಿಗಾರರು. ಅವರನ್ನು ನೋಡುವುದಕ್ಕೆ ಬಂದಿದ್ದೇನೆ."

ಪ್ರಯತ್ನ ಪುರಸ್ಸರವಾಗಿ ತಮಗೆ ಬಂದ ನಗುವನ್ನು ತಡೆದುಕೊಂಡು ಇಬ್ರಾಹಿಂ ಸಾಹೇಬರು "ಆಗಬಹುದು." ಎಂದು ಹೇಳಿ ರಾಜಶೇಖರಪ್ಪನ ಕಡೆಗೆ ನೋಡಿದರು.

ಆತ ರತ್ನವೇಲು ನಾಯಿಡುಗಳನ್ನು ಇಸ್ಮಾಯಿಲ್‌ನ ಲಾಕಪ್ಪಿನ ಬಳಿ ಕರೆದುಕೊಂಡು ಹೋದ. ಲಾಯರು ಸಲಾಕೆಯ ಬಾಗಿಲಿನ ಬಳಿ ನಿಂತುಕೊಂಡರು. ಅವರನ್ನು ನೋಡುತ್ತಲೇ ಇಸ್ಮಾಯಿಲ್ ಸಹ ಬಾಗಿಲಿನ ಬಳಿಗೆ ಬಂದ.

ರತ್ನವೇಲೂರವರು "ನಾವೊಂದೈದು ನಿಮಿಷ ಮಾತನಾಡಬಹುದೋ?" ಎಂದರು.

ರಾಜಶೇಖರಪ್ಪ ಅವರಿಬ್ಬರನ್ನೂ ಬಿಟ್ಟು ಹಿಂದೆ ಬಂದು ನಿಂತ.

ವಕೀಲರು ಮತ್ತು ಕಕ್ಷಿಗಾರರ ಮಾತುಕತೆಗಳು ಐದು ನಿಮಿಷಗಳಿಗಿಂತ ಮೊದಲೇ ಪೂರೈಸಿದವು.

ರತ್ನವೇಲೂರವರು ಮುಗುಳು ನಗೆಯನ್ನು ನಗುತ್ತಾ ಇನ್ಸ್‌ಪೆಕ್ಟರ ಕೋಣೆಯ ಕಡೆಗೆ ಹೊರಟರು. ರಾಜಶೇಖರಪ್ಪನೂ ಅವರನ್ನು ಹಿಂಬಾಲಿಸಿದ.

ಬಂದು ಆಸೀನರಾದ ವಕೀಲರನ್ನು ಕುರಿತು ಸಾಹೇಬರು "ತಾವು ಕಕ್ಷಿಗಾರರನ್ನು ನೋಡಿಯಾಯಿತೋ ?" ಎಂದು ಕೇಳಿದರು.

"ನೋಡಿಯೂ ಆಯಿತು, ಮಾತನಾಡಿಯೂ ಆಯಿತು. ನೀವೂ ಮತ್ತು ರಾಜರತ್ನಂ ಶೆಟ್ಟರೂ ಸೇರಿ ನಮ್ಮ ಕಕ್ಷಿಗಾರರಿಗೆ ಬಹಳ ಅನ್ಯಾಯ ಮಾಡಿದ್ದೀರಿ ?"

ಇನ್ಸ್‌ಪೆಕ್ಟರು "ನೀವು ಮಾತನಾಡುವುದು ಬಹಳ ವಿಚಿತ್ರವಾಗಿದೆ. ನಿಮ್ಮ ಕಕ್ಷಿಗಾರ ಏನು ಕೆಲಸವನ್ನು ಮಾಡಿದ್ದಾನೆಂಬುದನ್ನು ಬಲ್ಲಿರೋ ?" ಎಂದರು.

"ಅವರು ಎಲ್ಲವನ್ನೂ ಹೇಳಿದ್ದಾರೆ. ನಾನು ತಿಂದುಕೊಂಡೂ ಇದ್ದೇನೆ. ಆದರೆ ನೀವು ಏನಾದರೂ ಹೇಳುವುದಿದ್ದರೆ ಅದನ್ನು ಕೇಳಲು ತಯಾರಾಗಿದ್ದೇನೆ."

"ಮೊನ್ನೆಯ ದಿನ ಬ್ಯಾಂಕ್ ಮುಚ್ಚುವ ವೇಳೆಗೆ ಇಸ್ಮಾಯಿಲ್ ರಾಜರತ್ನಂ ಶೆಟ್ಟರ ಅಂಗಡಿಗೆ ಹೋಗಿ ವಜ್ರದ ಹರಳೊಂದನ್ನು ವ್ಯಾಪಾರಮಾಡಿದ. ವಿವರಗಳು ಬೇಕಾದಷ್ಟಿವೆ ಎನ್ನಿ. ಅದರ ಬೆಲೆ ಐದು ಸಾವಿರಗಳಿಗೆ ಚೆಕ್ ಕೊಟ್ಟು ಅದನ್ನು ತೆಗೆದುಕೊಂಡು ಬಂದ."

ರತ್ನವೇಲೂರವರು ನಡುವೆ ಬಾಯಿಹಾಕಿ "ಅದರಲ್ಲಿ ಏನು ತಪ್ಪಿದೆ ?" ಎಂದರು.

"ಬಹಳ ತಪ್ಪಿದೆ. ನಿಮ್ಮ ಕಕ್ಷಿಗಾರ ತಾನು ಬುಕ್ಕಿ ಇಸ್ಮಾಯಿಲ್ ಸೇಟೆಂತೆ ನಟಿಸಿದ್ದಾನೆ. ಅದು ಪರವ್ಯಕ್ತಿತ್ವಾರೋಪಣೆಯ ಅಪರಾಧವಾಗುತ್ತವೆ. ಮತ್ತೊಂದು ಸುಳ್ಳು ಚೆಕ್ ಕೊಟ್ಟಿದ್ದಾನೆ. ಅದು ಮೋಸವಾಗುತ್ತದೆ."

"ಸ್ವಲ್ಪ ಸಮಾಧಾನದಿಂದ ಮಾತನಾಡಿ ಸಾಹೇಬರೇ. ನಮ್ಮ ಕಕ್ಷಿಗಾರ ತಾನು ಬುಕ್ಕಿ ಇಸ್ಮಾಯಿಲ್ ಸೇಟ್ ಎಂಬುದಾಗಿ ಹೇಳಲಿಲ್ಲ. ಹಾಗೆ ನಟಿಸಲೂ ಇಲ್ಲ. ಅದನ್ನು ರಾಜರತ್ನಂ ಶೆಟ್ಟರು ಸಾಬೀತು ಮಾಡಲಾರರು. ಅವೂ ಅಲ್ಲದೆ, ನಮ್ಮ ಕಕ್ಷಿಗಾರರಿಗೆ ಪರವ್ಯಕ್ತಿತ್ವಾರೋಪಣೆ ಮಾಡಿಕೊಳ್ಳುವುದಕ್ಕೆ ಉದ್ದೇಶವು ತಾನೇ ಏನಿದೆ ?"

"ಶೆಟ್ಟರನ್ನು ಮೋಸಮಾಡಿ ವಜ್ರವನ್ನು ಹೊಡೆದುಕೊಂಡು ಹೋಗುವುದಕ್ಕೆ."

"ಅವರು ವಜ್ರವನ್ನು ಹೊಡೆದುಕೊಂಡುಬರಲಿಲ್ಲ, ಕ್ರಮಬದ್ಧವಾಗಿ ವ್ಯಾಪಾರ ಮಾಡಿ ತೆಗೆದುಕೊಂಡುಬಂದರು."

"ನಿಮ್ಮ ಕಕ್ಷಿಗಾರ ಕ್ರಮಬದ್ಧನಾದ ಮನುಷ್ಯನಾಗಿದ್ದಿದ್ದರೆ ಅದೇ ಹರಳನ್ನು ಅದೇ ದಿನ ಗುಲಾಬ್ ಚಂದರಿಗೆ ನಾಲ್ಕುಸಾವಿರ ರೂಪಾಯಿಗಳಿಗೇಕೆ ಮಾರಿದ ?"

"ಯಾಕೆ ಮಾರಿದನೆಂಬುದರ ನಿಜವಾದ ಕಾರಣವು ಬೇಕಾದರೆ ನಿಮಗೆ ಹೇಳುತ್ತೇನೆ. ಕೊಂಡುಕೊಂಡು ಬಂದಮೇಲೆ ಅದೇ ವಜ್ರವನ್ನು ಉಂಗುರದ ರೂಪದಲ್ಲಿ ರಾಜರತ್ನಂ ಶೆಟ್ಟರು ರಾಜಾವೆಂಕಟರಾಂ ಎಂಬುವವರಿಂದ ಎರಡು ಸಾವಿರ ರೂಪಾಯಿಗಳಿಗೆ ತೆಗೆದುಕೊಂಡಿದ್ದರೆಂದು ತಿಳಿಯಿತು. ಎರಡು ಸಾವಿರ ರೂಪಾಯಿಗಳದನ್ನು ಐದುಸಾವಿರ ರೂಪಾಯಿಗಳಿಗೆ ಕೊಂಡೆನಲ್ಲಾ ಎಂದು ದಿಗಿಲಾಯಿತು. ಹೆಚ್ಚು ನಷ್ಟದಿಂದ ಪಾರಾಗಲು ಗುಲಾಬ್ ಚಂದರಿಗೆ ನಾಲ್ಕು ಸಾವಿರಕ್ಕೆ ಮಾರಿದರು. ಇಷ್ಟಕ್ಕೂ ಒಬ್ಬ ಮನುಷ್ಯ ತನ್ನ ಒಡವೆಯನ್ನು ಎಷ್ಟಕ್ಕೆ ಬೇಕಾದರೂ ಮಾರುವ ಅಧಿಕಾರ ಅವನಿಗಿದೆಯಲ್ಲವೇ ?"

"ಬೇಷಕ್ಕಾಗಿ, ಆದರೆ ಕ್ಯಾಷ್ ಆಗದ ಚೆಕ್ ಕೊಟ್ಟವನು ಕೊಂಡ ಪದಾರ್ಥದ ಮಾಲೀಕನು ಹೇಗಾಗುತ್ತಾನೆ ?"

"ಆ ಚೆಕ್ ಕ್ಯಾಷಾಗಲಿಲ್ಲವೆಂದು ನಿಮಗಾರು ಹೇಳಿದರು ?"

"ರತ್ನವೇಲುನಾಡಾರವರೇ ನಿಮಗೆ ವಿಷಯ ಗೊತ್ತಿಲ್ಲ ಇಸ್ಮಾಯಿಲ್ ಹೇಳಿದ ಕತೆ ಕೇಳಿಕೊಂಡು ಮಾತನಾಡುತ್ತಿದ್ದೀರಿ ಅವನು ಶೆಟ್ಟರಿಗೆ ಕೊಟ್ಟದ್ದು ಸುಳ್ಳು ಚೆಕ್. ಅದು ಕ್ಯಾಷಾಗ ವುದಿಲ್ಲ."

"ಇಬ್ರಾಹಿಂ ಸಾಹೇಬರೇ, ಕ್ಷಮಿಸಬೇಕು. ನಾನು ಹೇಳುವುದನ್ನು ಪೂರ್ತಿಯಾಗಿ ಕೇಳಿ. ಈ ಕೇಸು ನಿನ್ನೆಯ ದಿನ ಬೆಳಗಾಗುತ್ತಿದ್ದಹಾಗೆಯೇ ನನ್ನ ಬಳಿಗೆ ಬಂದಿತು ಹಿಂದಿನ ಸಂಜೆ ಇಸ್ಮಾಯಿಲ್ ನಿಮ್ಮಿಂದ ದಸ್ತಗಿರಿ ಮಾಡಲ್ಪಟ್ಟರೆಂದೂ ಅವರನ್ನು ಬಿಡಿಸಿಕೊಡಬೇಕೆಂದೂ ಕೇಳಿದರು. ಎಲ್ಲವನ್ನೂ ಕೇಳಿ ಚೆಕ್ ಕ್ಯಾಷಾಗುವವರೆವಿಗೆ ನಾನು ಇದರಲ್ಲಿ ಪ್ರವೇಶಿಸುವು

ದಿಲ್ಲವೆಂದು ಹೇಳಿದೆ ಅಷ್ಟೇ ಅಲ್ಲ ಚೆಕ್ ಕ್ಯಾಷ್ ಆದಕೂಡಲೇ ನಾನು ಈ ಕೇಸ್ ತೆಗೆದುಕೊಂಡು ಅವರ ನ್ಯಾಯವನ್ನು ಕೊಡಿಸಿಕೊಡುವುದಾಗಿ ವಾಗ್ದಾನಮಾಡಿದೆ. ಅದರಂತೆಯೇ ಈ ಹೊತ್ತು ಇಲ್ಲಿ ಬರುವ ಮೊದಲು ಸಿಟಿ ಬ್ಯಾಂಕಿಗೆ ಹೋಗಿ ಇಸ್ಮಾಯಿಲ್ ಸೇಟರು ರಾಜರತ್ನಂ ಶೆಟ್ಟರಿಗೆ ಕೊಟ್ಟ ಚೆಕ್ ಕ್ಯಾಷಾಗಿದೆಯೇ ಎಂದು ಕೇಳಿದೆ. ಅವರು ನನಗೆ ವಿವರಗಳನ್ನು ಹೇಳಲು ಒಪ್ಪಲಿಲ್ಲ ಇಸ್ಮಾಯಿಲ್ ಸೇಟ್ ನನ್ನ ಕಕ್ಷಿಗಾರರಿಂದೂ, ಲಾಕಪ್ಪಿನಲ್ಲಿರುವ ಅವರ ಬಿಡುಗಡೆಯು ಅದರ ಮೇಲೆಯೇ ಅವಲಂಬಿತವಾಗುತ್ತದೆಂದೂ ಹೇಳಿದಮೇಲೆ ಆ ಚೆಕ್ ಕ್ಯಾಷಾಯಿತೆಂದು ಹೇಳಿದರು.”

ತಮ್ಮ ಜೀವನದಲ್ಲಿಯೇ ಬೀಳದಂತಹ ಪೆಟ್ಟು ಬಿದ್ದ ಹಾಗಾಯಿತು ಇಬ್ರಾಹಿಂ ಸಾಹೇಬರಿಗೆ.

ಬಾಯಿ ಒಣಗಿಹೋಗುತ್ತಿರಲು ಅರ್ಧೋಕ್ತಿಯಿಂದ “ಏನು ಆ ಚೆಕ್ ಕ್ಯಾಷ್ ಆಯಿತೇ ?” ಎಂದರು.

“ಆಗಿದೆ. ಅದರಿಂದಲೇ ನನ್ನ ಕಕ್ಷಿಗಾರರಿಗೆ ನೀವೂ ಮತ್ತು ರಾಜರತ್ನಂ ಶೆಟ್ಟರು ಇಬ್ಬರಿಂದಲೂ ಅನ್ಯಾಯವಾಗಿದೆ ಎಂದು ನಾನು ಹೇಳಿದುದು. ನನ್ನ ಕಕ್ಷಿಗಾರರ ಅಭಿಪ್ರಾಯವನ್ನು ಏನೆಂದು ತಿಳಿದುಕೊಳ್ಳುವುದಕ್ಕಾಗಿಯೇ ನಾನು ಈಗ ಅವರ ಬಳಿ ಹೋಗಿದ್ದುದು. ತಮ್ಮನ್ನು ಅಕ್ರಮವಾಗಿ ಎರಡು ದಿನಗಳು ಲಾಕಪ್‌ನಲ್ಲಿಟ್ಟುದಕ್ಕಾಗಿಯೂ ಕಾನೂನಿನ ಪ್ರಕಾರ ಕಾರ್ಯಾಚರಣೆ ತೆಗೆದುಕೊಳ್ಳಬೇಕೆಂದು ಅವರು ಅಭಿಪ್ರಾಯಪಡುತ್ತಾರೆ.”

ರತ್ನವೇಲು ನಾಯಿಡು ಆ ಮಾತುಗಳನ್ನು ಹೇಳುತ್ತಿದ್ದ ಹಾಗೆಯೇ ಇಬ್ರಾಹಿಂ ಸಾಹೇಬರ ಮುಖದ ಮೇಲೆ ಬೆವರಹನಿಗಳು ಮೂಡಿದವು ಅವರು ತಲೆಯ ಮೇಲಿದ್ದ ಪೇಟಾವನ್ನು ಮೇಜಿನ ಮೇಲಿಟ್ಟು ಜೇಬಿನಿಂದ ಕೈವಸ್ತ್ರ ತೆಗೆದು ಮುಖವನ್ನು ಒರೆಸಿಕೊಂಡರು. ತಲೆಯ ಮೇಲೆಯೂ ಬೆವರಿನ ಹನಿಗಳಿರಬೇಕೆಂದು ತೋರಿರಬೇಕು. ಅದನ್ನೂ ಒರೆಸಿಕೊಂಡರು.

ಗಳಿಗೆಯ ಕಾಲ ಸುಧಾರಿಸಿಕೊಂಡು ರಾಜರತ್ನಂ ಶೆಟ್ಟರಿಗೆ ಟೆಲಿಫೋನ್ ಮಾಡಿ, “ನಾವಿಲ್ಲಿ ಕಾಯುತ್ತಿದ್ದೇವೆ. ನೀವೇಕೆ ಬರಲಿಲ್ಲ ?” ಎಂದರು.

ಶೆಟ್ಟರು ಸಾವಧಾನವಾಗಿ "ಆ ಚಕ್ ಕ್ಯಾಷ್ ಆಯಿತು. ಇನ್ನೇಕೆ ಬರಬೇಕೆಂದುಕೊಂಡವನು ಇರಲಿಲ್ಲ." ಎಂದರು.

ಸಾಹೇಬರಿಗೆ ಹಿಡಿಸುಟ್ಟುವ ಕೋಪ ಬಂದಿತು.

"ಆ ಚಕ ಮನೇ ಹಾಳಾಗಿಹೋಯಿತು. ನೀವು ಸುಳ್ಳು ಕಂಪ್ಲೈಯಿಂಟ್ ಕೊಟ್ಟು ತರಲೆ ತಂದುಕೊಂಡಿದ್ದೀರಿ. ಈ ಕೂಡಲೇ ನೀವು ಬರಬೇಕು. ಇಲ್ಲದಿದ್ದರೆ ಇನ್ನಾರನ್ನಾದರೂ ಕಳಿಸಲೇ ?''

ಶೆಟ್ಟರಿಗೆ ಹೆದರಿಕೆಯಾಯಿತು ಆದರೂ ಧೈರ್ಯವನ್ನು ತಂದುಕೊಂಡು ಹೇಳಿದರು.

"ನೀವಾರನ್ನೂ ಕಳಿಸಬೇಕಾಗಿಲ್ಲ ನಾನೇ ಇನ್ನೈದು ನಿಮಿಷಗಳಲ್ಲಿ ಬರುತ್ತೇನೆ. ಆದರೆ ನಾನಾಗಿ ಕಂಪ್ಲೈಂಟು ಕೊಟ್ಟೆನೆಂದು ನೀವು ಹೇಳುವುದು ಆಶ್ಚರ್ಯಕರವಾಗಿದೆ. ಅಂಗಡಿಯಲ್ಲಿದ್ದವನನ್ನು ಕರೆದು ಹೇಳಿದಿರಿ. ನನಗೇನು ಗೊತ್ತು. ನಾನು ಬರೆದುಕೊಟ್ಟೆ"

ರಾಜರತ್ನಂ ಶೆಟ್ಟರು ಫೋನಿನಲ್ಲಿ ಮಾತನಾಡುತ್ತಿದ್ದುದರಿಂದ ಇಬ್ರಾಹಿಂ ಸಾಹೇಬರ ಮಾನವು ಬಚಾವಾಯಿತು. ಅದು ನಾಯಿಡುರವರಿಗೆ ಕೇಳಿಸಲಿಲ್ಲ.

"ಏನಿದೆಯೋ, ಇಲ್ಲಿ ಬನ್ನಿ. ಮಾತನಾಡೋಣ."

"ಆಗಲಿ, ಬರುತ್ತೇನೆ."

ಆನಂತರ ಸಾವಧಾನವಾಗಿ ಇಬ್ರಾಹಿಂ ಸಾಹೇಬರು, "ನಾಯಿಡುರವರೇ, ನೀವು ಹೇಳುವುದು ನಿಜ ಚೆಕ್ ಕ್ಯಾಷಾಗಿದೆಯಂತೆ. ಆದರೆ ಈ ಇಸ್ಮಾಯಿಲ್ ಇದ್ದಾನೆಯಲ್ಲಾ ಅವನು ಬಹಳ ದಿನಗಳಿಂದಲೂ ಸಂದೇಹಾಸ್ಪದನಾದ ವ್ಯಕ್ತಿ. ಅವನು ಎಲ್ಲಿಯಾದರೂ ಓಡಿಯಾದನೆಂದರೆ ಈ ಬಗೆಯ ಸಂದೇಹಗಳು ಬರುವುದು ಸಹಜ"—ಎಂದು ಆರಂಭ ಮಾಡಿದರು.

"ಸಾಹೇಬರೇ ! ನೀವು ಈ ಧೋರಣೆಯಲ್ಲಿ ಮಾತನಾಡುವದು ಸರಿಯಲ್ಲ. ನಾನು ನಿಮ್ಮ ಸ್ನೇಹಿತನೆಂಬುದೇನೋ ನಿಜ ಆದರೆ ನನ್ನ ಕಕ್ಷಿಗಾರರನ್ನು ಬಿಟ್ಟುಕೊಡುವುದು ಸಾಧ್ಯವಿಲ್ಲ. ನಾನು ಬಂದಾಗಿನಿಂದಲೂ ಗಮನಿಸುತ್ತಿದ್ದೇನೆ. ಇಸ್ಮಾಯಿಲ್ ಸೇಟರನ್ನು ಏಕವಚನದಲ್ಲಿಯೂ, ಹೀನಾಯವಾಗಿಯೂ ಅನ್ನುತ್ತಿದ್ದೀರಿ. ಅವರು ಕೊಟ್ಟ ಚಕ್ ಕ್ಯಾಷ್

ಆಗಿದೆ ಎಂದು ಖಚಿತವಾದ ಮೇಲಾದರೂ ಅವರ ವಿಷಯದಲ್ಲಿ ಗೌರವವಾಗಿ ನಡೆದುಕೊಳ್ಳುವುದು ಸೂಕ್ತವೆಂದು ನನ್ನ ಭಾವನೆ. ಅವರು ಸಂದೇಹಾಸ್ಪದ ರಾದ ವ್ಯಕ್ತಿಗಳೆಂದೂ, ಅವರ ವಿಷಯದಲ್ಲಿ ಸಂದೇಹಗಳು ಬರುವುದು ಸಹಜ ವೆಂದೂ ಹೇಳುತ್ತೀರಿ. ಇವೂ ಸಹ ಸರಿಯಾದ ಮಾತುಗಳಲ್ಲವೆಂದು ನನ್ನ ಅಭಿಪ್ರಾಯ. ಇಸ್ಮಾಯಿಲ್ ಸೇಟರು ಏನಾದರೂ ಅಪರಾಧ ಮಾಡಿ ದ್ದಾರೆಂಬುದಕ್ಕೆ ಎಲ್ಲಿಯಾದರೂ ರುಜುವಾತುಂಟೇ ? ಯಾವ ಸಂದರ್ಭದಲ್ಲಿ ಯಾದರೂ ಎಲ್ಲಿಯಾದರೂ ಅವರಿಗೆ ಶಿಕ್ಷೆಯಾಗಿದೆಯೇ ? ಅವ ಹೋಗಲಿ ಅವರ ಮೇಲೆ ಕೇಸಾದರೂ ಆಗಿದೆಯೇ ? ಇವುಗಳನ್ನೆಲ್ಲಾ ನೀವು ಗಮನಿಸ ಬೇಕು."

"ಅವನ........ಅವರ ವಿಷಯದಲ್ಲಿ ಕೆಲವು ಪುಕಾರುಗಳಿವೆ ಎಂಬುದನ್ನು ನೀವು...."

"ಅದಕ್ಕೇನು ಮಾಡುವುದಕ್ಕಾದೀತು ? ಸಿಕ್ಕಿದವರು ಸಿಕ್ಕಿದಂತೆ ಮಾತನಾಡುವುದನ್ನು ಯಾರು ತಾನೆ ತಡೆಯುವುದಕ್ಕಾಗುತ್ತದೆ. ಈ ಸಂದರ್ಭವನ್ನೇ ತೆಗೆದುಕೊಳ್ಳಿರಿ. ಇಸ್ಮಾಯಿಲ್ ಸೇಟರು ತಮಗಾಗಿರುವ ಅನ್ಯಾಯ ಅಪಮಾನಗಳಿಗಾಗಿ ಪರಿಹಾರವನ್ನು ಕೇಳಿ ಪಡೆಯುತ್ತಾರೆ. ನಾಳೆ ಆ ಶೆಟ್ಟರು ಬೈದುಕೊಂಡು ತಿರುಗಿದರೆ ಅದನ್ನು ಸೇಟರು ತಡೆಯುವುದು ಹೇಗೆ ? ಹಾಗೆಯೇ ಪುಕಾರುಗಳು ಬರುತ್ತವೆ, ಹೋಗುತ್ತವೆ."

ರತ್ನವೇಲು ನಾಯಿಡುರವರ ಮಾತಿನ ಧೋರಣೆಯನ್ನರಿತ ಇಬ್ರಾಹಿಂ ಸಾಹೇಬರು ಮಾತು ಬೆಳೆಸುವುದು ಸರಿಯಲ್ಲವೆಂದುಕೊಂಡು ಸುಮ್ಮನಾದರು.

ಆ ವೇಳೆಗೆ ಸರಿಯಾಗಿ ರಾಜರತ್ನಂ ಶೆಟ್ಟರು ಬಂದರು

ಅನಂತರ ಇಬ್ರಾಹಿಂ ಸಾಹೇಬರು ಅವರನ್ನು ಉದ್ದೇಶಿಸಿ,

"ಶೆಟ್ಟರೇ ! ಇಲ್ಲಿ ಕುಳಿತಿರುವ ರತ್ನವೇಲು ನಾಯಿಡುರವರು ನಿಮ್ಮಲ್ಲಿ ವಜ್ರವ್ಯಾಪಾರವನ್ನು ಮಾಡಿದರಲ್ಲ – ಆ ಇಸ್ಮಾಯಿಲ್ ಸೇಟ್‌ರ ವಕೀಲರು. ಅವರು ಮೊನ್ನೆ ಕೊಟ್ಟಿದ್ದ ಚೆಕ್ ಕ್ಯಾಷ್ ಆಯಿತೆಂದೂ ಆದರಿಂದ ನೀವು ಪೋಲೀಸ್ ಕಂಪ್ಲೈಂಟ್ ಕೊಟ್ಟಿದ್ದು ತಪ್ಪಾಯಿತೆಂದೂ ಹೇಳುತ್ತಾರೆ" ಎಂದು ಮಾತು ಮೊದಲುಮಾಡಿದರು.

ರಾಜರತ್ನಂ ಶೆಟ್ಟರು, "ನಾನು ಕಂಪ್ಲೈಂಟು ಕೊಟ್ಟದ್ದು ತಪ್ಪಾದರೆ ಅದನ್ನು ವಾಪ್ಸು ಕೊಟ್ಟುಬಿಡಿ'' ಎಂದರು

ಆ ಸಮಯದಲ್ಲಿ ರತ್ನವೇಲು ನಾಯಿಡರುವರು "ನೀವು ಈಗ ಕಂಪ್ಲೈಂಟು ವಾಪ್ಸು ತೆಗೆದುಕೊಂಡರೇನಾಯಿತು? ಈ ಎರಡು ದಿನಗಳಿಂದ ನಮ್ಮ ಕಕ್ಷಿಗಾರರಿಗೆ ಆಗಿರುವ ಕಷ್ಟನಷ್ಟಗಳಿಗೆ ಏನು ಹೇಳುತ್ತೀರಿ?" ಎಂದರು.

"ಅಯ್ಯೋ! ಅದಕ್ಕೆಲ್ಲಾ ಏನು ಹೇಳುವುದಕ್ಕೆ ಆಗುತ್ತದೆ? ಐದು ಸಾವಿರ ರೂಪಾಯಿಗಳು ಮುಳುಗಿಹೋದುವಲ್ಲ ಎಂದು ಕೊರಗಿ ನನ್ನ ಮನಸ್ಸಿಗಾಗಿರುವ ಕಷ್ಟವನ್ನು ಭಗವಂತನೇ ಬಲ್ಲ."

"ನೀವೇನು ತಮಾಷೆ ಮಾಡುತ್ತಿದ್ದೀರೋ ಹೇಗೆ? ನಮ್ಮ ಕಕ್ಷಿಗಾರರಿಗೆ ನಿಮ್ಮಗಳಿಂದ ಅಪಮಾನವಾಗಿದೆ ಎನ್ನುತ್ತಿದ್ದರೆ...."

"ಏನಿಲ್ಲ. ಆ ವಿಷಯವನ್ನು ನೀವು ಯೋಚನೆ ಮಾಡಬೇಕಾಗಿಲ್ಲ. ನಾವು ಅವರಿಗೆ ಮರ್ಯಾದೆ ಮಾಡಿ ಕಳಿಸುತ್ತೇವೆ."

ಶೆಟ್ಟರು ಗಂಭೀರವಾಗಿ ಆ ಮಾತು ಹೇಳಲು ಎಲ್ಲರಿಗೂ ನಗು ಬಂದುಬಿಟ್ಟಿತು. ನಗದಿರಲು ಎಷ್ಟೇ ಪ್ರಯತ್ನ ಮಾಡಿದರೂ ಅದು ನಾಯಿಡುರವರಿಂದಲೂ ಆಗಲಿಲ್ಲ.

ಕಡೆಗೆ ನಾಯಿಡುಗಳು "ಹೀಗೆ ನಡುಗುತ್ತಾ ಕುಳಿತುಕೊಂಡಿರಲು ನನಗೆ ಅವಕಾಶವಿಲ್ಲ. ದಯವಿಟ್ಟು ಶೆಟ್ಟರಿಗೆ ವಿಷಯದ ಪ್ರಾಮುಖ್ಯತೆ ಎಷ್ಟಿದೆ ಎಂಬುದನ್ನು ತಿಳಿಸಿದರೆ ಉತ್ತಮ" ಎಂದರು.

"ತಾವೇ ಹೇಳೋಣವಾಗಲಿ."

ನಾಯಿಡುಗಳು ಶೆಟ್ಟರನ್ನು ಉದ್ದೇಶಿಸಿ "ನಮ್ಮ ಕಕ್ಷಿಗಾರರಾದ ಇಸ್ಮಾಯಿಲ್ ಸೇಟ್‌ರವರು ಮೊನ್ನೆಯ ದಿನ ನಿಮ್ಮ ಅಂಗಡಿಗೆ ಬಂದು ಚಕ್ ಕೊಟ್ಟು ವಜ್ರದ ಹರಳೊಂದನ್ನು ತೆಗೆದುಕೊಂಡು ಹೋದರಷ್ಟೇ. ಅದು ಕ್ರಮಬದ್ಧವಾದ ವ್ಯಾಪಾರ. ಆದರೆ ನೀವು ಅದರ ಮೇಲೆ ಕಂಪ್ಲೈಂಟು ಕೊಟ್ಟದ್ದು ಅನವಶ್ಯಕವಾಗಿಯೂ ಅಕಾರಣವಾಗಿಯೂ ಇದೆ. ಅದರಿಂದ ನಮ್ಮ ಕಕ್ಷಿಗಾರರಿಗೆ ವಿಪರೀತ ಅನ್ಯಾಯವೂ, ಮಾನಹಾನಿಯೂ ಆಗಿದೆ.

ಇದಕ್ಕಾಗಿ ನೀವು ಪರಿಹಾರವನ್ನು ಕೊಡುವುದಕ್ಕೆ ಬದ್ಧರಾಗಿದ್ದೀರಿ. ಒಂದು ವೇಳೆ ನೀವು ಕೊಡಲು ತಕರಾರು ಮಾಡುವುದಾದರೆ ನಾವು ಕೋರ್ಟಿಗೆ ಹೋಗಿ ಮಾಡಿ ತೆಗೆದುಕೊಳ್ಳಬೇಕಾಗುತ್ತದೆ. ಇನ್ನೂ ಒಂದು ವಿಷಯವಿದೆ. ಅದು ಇನ್‌ಸ್ಪೆಕ್ಟರ್ ಸಾಹೇಬರಿಗೆ ಸಂಬಂಧಪಟ್ಟದ್ದು. ಸುಳ್ಳು ಕಂಪ್ಲೈಂಟು ಕೊಟ್ಟದ್ದರಿಂದ ಕಾನೂನು ಪ್ರಕಾರವಾಗಿ ಅವರು ನಿಮ್ಮ ಮೇಲೆ ಕ್ರಿಮಿನಲ್ ಕೇಸು ಸಹ ಮಾಡಬೇಕಾಗುತ್ತದೆ." ಎಂದರು.

"ನೀವುಗಳಿಬ್ಬರೂ ಸೇರಿ ನನ್ನನ್ನು ಮುಳುಗಿಸಿದಂತಾಗುತ್ತದೆ."

"ನನಗೆ ಅವೆಲ್ಲಾ ಗೊತ್ತಿಲ್ಲ. ಅಂತೂ ಇರುವ ಪರಿಸ್ಥಿತಿ ಹೇಳಿದ್ದೇನೆ."

ಶೆಟ್ಟರು ಇಬ್ರಾಹಿಂ ಸಾಹೇಬರ ಕಡೆ ತಿರುಗಿ "ಏನು ಇನ್‌ಸ್ಪೆಕ್ಟರೇ! ನೀವೇ ಹೇಳಿ. ನಾನೇನಾದರೂ ಸ್ಟೇಷನ್ನಿಗೆ ಬಂದು ಕಂಪ್ಲೈಂಟು ಕೊಟ್ಟೆನೇ? ನೀನೇ ಕರೆದು ಇಸ್ಮಾಯಿಲ್ ಸೇಟರು ಕೊಟ್ಟಿರುವ ಚೆಕ್ ಖೋಟಾ ಎಂದು ಹೇಳಿದಕ್ಕಲ್ಲವೇ ನಾನು ಬರೆದು ಕೊಟ್ಟಿದ್ದು." ಎಂದರು.

ಇಬ್ರಾಹಿಂ ಸಾಹೇಬರಿಗೆ ಕೊರಳು ಹಿಸುಕಿಕೊಳ್ಳುವಷ್ಟು ವ್ಯಥೆಯಾಯಿತು. ಅವರು ಗತ್ಯಂತರವಿಲ್ಲದೇ ಹೇಳಿದರು.

"ಶೆಟ್ಟರೇ! ನೀವು ಹೇಳುವುದು ನ್ಯಾಯವಾಗಿದೆ. ಆದರೆ ನಾನೂ ನೀವೂ ಇಬ್ಬರೂ ಈ ವ್ಯವಹಾರದಲ್ಲಿ ಮೋಸಹೋಗಿದ್ದೇವೆ. ನನಗೆ ಏನು ಮಾಡಬೇಕೆಂಬುದು ತೋಚದೇ ಆಗಿದೆ."

ನಾಯಿಡುರವರು "ನೀವು ಹೇಳುವುದು ನನಗೆ ಅರ್ಥವಾಗುವುದಿಲ್ಲ." ಎಂದರು.

"ಅದು ನಿಮಗೆ ಸಂಬಂಧಪಟ್ಟದ್ದಲ್ಲ. ವಹಿದಾ ಎಂಬುವವಳು ಬಂದು ನಮ್ಮನ್ನು ಉದ್ದೇಶಪೂರ್ವಕವಾಗಿ ಮೋಸ ಮಾಡಿದ್ದಾಳೆ. ನಾನಂತೂ ಈ ವ್ಯವಹಾರದ ಕೈಯಿಟ್ಟು ಹುಚ್ಚುಮುಂಡೆಯಾದೆ. ಇರಲಿ, ಅವಳು ಪುನಃ ನನ್ನ ಕೈಯಲ್ಲಿ ಸಿಕ್ಕದೇ ಹೋಗುತ್ತಾಳೆಯೇ?"

ರಾಜರತ್ನಂ ಶೆಟ್ಟರಿಗೆ ಪರಿಸ್ಥಿತಿಯು ಪೂರ್ಣವಾಗಿ ಅರ್ಥವಾಯಿತು. ಅವರು ಸಾಹೇಬರೊಡನೆ ಎರಡು ನಿಮಿಷ ರಹಸ್ಯವಾಗಿ ಮಾತನಾಡಲು ಅಪೇಕ್ಷಿಸಿದರು.

ಪೋಲೀಸ್ ಸ್ಟೇಷನ್ನಿನ ಹೊರಗಡೆ ತೋಟದಲ್ಲಿ ನಿಂತು ಶೆಟ್ಟರು "ಇವೆಲ್ಲಾ ಏನು ಇನ್ಸ್ಪೆಕ್ಟರೇ?" ಎಂದು ಕೇಳಿದರು.

"ಮೊನ್ನೆಯ ದಿನ ಸಂಜೆ ವಹಿದಾ ಎಂಬೊಬ್ಬ ಮುಸ್ಲಿಂ ಹೆಂಗಸು ಇಲ್ಲಿಗೆ ಬಂದಿದ್ದಳಷ್ಟೇ. ಅವಳೂ, ಈ ಜಿಗೋಣಾರ್ ಇಸ್ಮಾಯಿಲ್‌ನೂ, ಈ ತರಲೆ ವಕೀಲನೂ ಸೇರಿ ನನ್ನ ಮೇಲೆ ಮಸಲತ್ತು ಮಾಡಿ ನಮ್ಮಿಬ್ಬರನ್ನೂ ತಂತ್ರದಿಂದ ಸಿಕ್ಕಿಹಾಕಿದ್ದಾರೆ. ನಾವಿಬ್ಬರೂ ಮೋಸಹೋಗಿದ್ದೇವೆಂಬುದರಲ್ಲಿ ಸಂದೇಹವಿಲ್ಲ. ನಿಮ್ಮನ್ನೂ ಇದರಲ್ಲಿ ಸಿಕ್ಕಿಹಾಕಿರುವುದರಿಂದ ನನ್ನ ಮನಸ್ಸಿಗಾಗಿರುವ ನೊವು ಅಷ್ಟಿಷ್ಟಲ್ಲ. ಏನು ಮಾಡುವುದಕ್ಕೂ ನನಗೆ ಮಾರ್ಗವೇ ತೋರುತ್ತಿಲ್ಲ."

ಶೆಟ್ಟರು ಗಳಿಗೆಯ ಕಾಲ ಯೋಚನೆ ಮಾಡಿ ಹೇಳಿದರು.

"ನಾನು ಕೇಳುತ್ತಿರುವುದು ಅದಲ್ಲ. ಆ ಲಾಯರು ಹೇಳುತ್ತಿರುವಂತೆ ನನ್ನಿಂದ ಪರಿಹಾರ ಪಡೆಯಲು ಅವರಿಗೆ ಅವಕಾಶವಿದೆಯೋ ಅಂತ"

"ಇರುವಂತೆ ನನಗೆ ತೋರುತ್ತದೆ."

"ಹಾಗಾದರೆ ಅದೆಷ್ಟೆಂಬುದನ್ನು ಇತ್ಯರ್ಥ ಮಾಡಿರಿ. ಕೊಟ್ಟು ಬಿಡುತ್ತೇನೆ."

ಶೆಟ್ಟರ ಉದಾರತೆಯನ್ನು ನೋಡಿ ಇಬ್ರಾಹಿಂ ಸಾಹೇಬರಿಗೆ ಕೊರಳು ಕಟ್ಟಿಕೊಂಡು ಬಂದಿತು.

"ನನ್ನಿಂದ ನಿಮಗಾದ ತೊಂದರೆಗೆ ಹೇಗೆ ಕ್ಷಮಾಯಾಚನೆ ಮಾಡಬೇಕೆಂಬುದೇ ನನಗೆ ಅರ್ಥವಾಗದೇ ಇದೆ."

"ಅದೇನು ಪರವಾಯಿಲ್ಲ, ಬಿಡಿ ಒಂದೊಂದು ವ್ಯಾಪಾರದಲ್ಲಿ ನಷ್ಟವಾಗುತ್ತದೆ. ಎಲ್ಲದರಲ್ಲಿಯೂ ಲಾಭವೇ ಬರಬೇಕೆಂದರೆ ಆಗುತ್ತದೆಯೇ? ಇದರಲ್ಲಿ ಈ ರೂಪವಾಗಿ ನಷ್ಟವಾಯಿತು."

ಒಳಗೆ ಬಂದು ಕುಳಿತುಕೊಂಡನಂತರ ಸಾಹೇಬರು "ನಿಮ್ಮ ಕಕ್ಷಿಗಾರರು ಏನು ಪರಿಹಾರವನ್ನು ಕೊಡಬೇಕೆಂದು ಕೇಳುತ್ತಾರೆ?" ಎಂದರು.

ನಾಯಿಡುರವರು "ಆ ವಿಷಯವನ್ನು ನಾನಿನ್ನೂ ಮಾತನಾಡಿಲ್ಲ. ಕೇಳಿಕೊಂಡು ಬರುತ್ತೇನೆ." ಎಂದು ಹೇಳಿ ಲಾಕಪ್ಪಿನಲ್ಲಿ ಇಸ್ಮಾಯಿಲ್‌ನನ್ನು ನೋಡಿಕೊಂಡು ಬಂದು "ಹತ್ತು ಸಾವಿರ ಕೇಳುತ್ತಾರೆ." ಎಂದರು.

ಕೂಡಲೇ ಶೆಟ್ಟರು ಎದ್ದು ನಿಂತುಕೊಂಡು "ಇನ್ನೂರೋ ಮುನ್ನೂರೋ ಕೇಳುತ್ತಾನೆಂದು ಒಪ್ಪಿಕೊಂಡೆ. ಅದು ಸಾವಿರಗಟ್ಟಲೆ ಮಾತಾದರೆ ಇನ್‌ಸ್ಪೆಕ್ಟರಿದ್ದೀರಿ, ವಕೀಲರಿದ್ದೀರಿ. ನೀವು ನೀವೇ ಮಾತನಾಡಿಕೊಳ್ಳಿ. ನಾನು ಹೋಗುತ್ತೇನೆ." ಎಂದು ಹೇಳಿದರು.

ಇಬ್ರಾಹಿಂ ಸಾಹೇಬರು ಅವರ ಕೈಹಿಡಿದು ಕೂರಿಸುತ್ತಾ "ಇಷ್ಟಕ್ಕೆಲ್ಲಾ ಕೋಪಮಾಡಿಕೊಂಡರೆ ಹೇಗೆ ಸ್ವಾಮಿ? ಕುಳಿತುಕೊಳ್ಳಿ, ಮಾತನಾಡೋಣ." ಎಂದು ಕೂರಿಸಿದರು.

ರಾಜರತ್ನಂ ಶೆಟ್ಟರು ಗಂಭೀರವಾಗಿ "ಅಷ್ಟಲ್ಲದೇ ಏನು ? ಒಂದು ರಾತ್ರಿ ಲಾಕಪ್ಪಿನಲ್ಲಿದ್ದುದಕ್ಕೆ ಐದು ಸಾವಿರ ಕೊಡಬೇಕೆ ? ಹಾಗೆ ಸಿಕ್ಕುವುದಾದರೆ ನಾನೂ ಎಂಟು ದಿನ ಲಾಕಪ್ಪಿನಲ್ಲಿರಲು ಸಿದ್ಧವಾಗಿದ್ದೇನೆ " ಎಂದರು.

ರತ್ನವೇಲೂರವರು ಅವರನ್ನು ಸಮಾಧಾನಪಡಿಸುತ್ತಾ "ಹಾಗೆ ಮಾತನಾಡಬೇಡಿ ಶೆಟ್ಟರೇ. ಲಕ್ಷ ರೂಪಾಯಿ ಕೊಟ್ಟರೂ ನೀವು ಒಂದು ರಾತ್ರೀ ಲಾಕಪ್ಪಿನಲ್ಲಿರುತ್ತೀರಾ ! ನನಗೆ ಗೊತ್ತಿಲ್ಲವೇ ?" ಎಂದರು.

"ಈಗ ಅದೇನಿಲ್ಲ ಸ್ವಾಮಿ. ಈ ಬಿಳೀ ಟೋಪಿಯವರ ರಾಜ್ಯ ಬಂದ ಮೇಲೆ ವ್ಯಾಪಾರ ಸಾಪಾರದಲ್ಲಿ ಸುಖವಿಲ್ಲ. ಹೀಗೆ ಲಾಕಪ್ಪಿನಲ್ಲಿದ್ದು ಸಂಪಾದನೆ ಮಾಡಿದರೇ ಮಾಡಿದ ಹಾಗೆ "

ವಕೀಲರೂ, ಇನ್‌ಸ್ಪೆಕ್ಟರೂ ಬಹಳ ಚೌಕಾಶೀ ಮಾಡಿ ಪರಿಹಾರ ದ್ರವ್ಯವನ್ನು ಐದು ಸಾವಿರಕ್ಕೆ ಇಳಿಸಿದರು. ರತ್ನವೇಲು ನಾಯಿಡುರವರು ತಮ್ಮ ಕಕ್ಷಿಗಾರನಾದ ಇಸ್ಮಾಯಿಲ್‌ನನ್ನು ಬಹಳ ಕಷ್ಟದಿಂದ ಒಪ್ಪಿಸಿದರು.

ವಿಷಯಗಳು ಇತ್ಯರ್ಥವಾಗುವ ಕಡೆಯ ಹಂತಕ್ಕೆ ಬಂದಾಗ ವಜ್ರದ ಮಾತು ಬಂದಿತು.

ಇಸ್ಮಾಯಿಲ್‌ನು "ನಾನು ಅದರಲ್ಲಿ ಒಂದು ಸಾವಿರ ರೂಪಾಯಿಗಳನ್ನು ಕಳೆದುಕೊಂಡಿದ್ದೇನೆ. ಪರಿಹಾರ ದ್ರವ್ಯದೊಂದಿಗೆ ಅದನ್ನೂ ಸೇರಿಸಿ ಕೊಡಬೇಕು." ಎಂದ.

ರಾಜರತ್ನಂ ಶೆಟ್ಟರು "ಉಹುಂ, ಹಾಗಾಗುವುದಿಲ್ಲ. ನೀವು ಯಾವಾಗ ಪರಿಹಾರ ದ್ರವ್ಯವನ್ನು ತೆಗೆದುಕೊಳ್ಳುತ್ತೀರೋ ಆಗ ನಾನು ವಜ್ರವನ್ನು ಮಾರುವುದಕ್ಕೆ ತಯಾರಾಗಿಲ್ಲ. ನನ್ನ ವಜ್ರವನ್ನು ನನಗೆ ವಾಪ್ಸು ಕೊಟ್ಟು

ಬಿಡಿರಿ. ಅದರ ಮೇಲೆ ತೆಗೆದುಕೊಂಡ ಬೆಲೆ ಮತ್ತು ಪರಿಹಾರ ದ್ರವ್ಯಗಳನ್ನು ಕೊಟ್ಟುಬಿಡುತ್ತೇನೆ." ಎಂದರು.

ಆಗ ವಿಷಯ ತಂಟೆಗೆ ಬಂದಿತು. ವಜ್ರದ ವಾರಸುದಾರರು ಗುಲಾಬ್ ಚಂದ್‌ರು. ರಾಜಶೇಖರಪ್ಪ ಅವರಿಗೆ ಕಾಗದವನ್ನು ಬರೆದುಕೊಟ್ಟು ವಜ್ರ ವನ್ನು ತಂದಿದ್ದ. ಪೋಲೀಸಿನವರ ಬಳಿಯೇ ಇದ್ದರೂ ಅದನ್ನು ಶೆಟ್ಟರಿಗೆ ಕೊಡುವುದು ಹೇಗೆ?

ಹೇಗಾದರೂ ತಂಟೆ ಹರಿದುಹೋಗಲಿ – ಎಂದುಕೊಂಡಿದ್ದ ಇಬ್ರಾಹಿಂ ಸಾಹೇಬರಿಗೆ ತಲೆನೋವು ಬಂದ ಹಾಗಾಯಿತು

ಅವರು ಮತ್ತೊಮ್ಮೆ ಪ್ರಯತ್ನ ಮಾಡಬೇಕೆಂದು ನಿರ್ಧರಿಸಿ ಗುಲಾಬ್ ಚಂದರಿಗೆ ಫೋನ್ ಮಾಡಿ ಸೂಕ್ಷ್ಮವಾಗಿ ವಿಷಯ ತಿಳಿಸಿದರು. ದಯಮಾಡಿ ನಾಲ್ಕು ಸಾವಿರ ರೂಪಾಯಿಗಳನ್ನು ತೆಗೆದುಕೊಂಡು ವಜ್ರವನ್ನು ಕೊಡ ಬೇಕೆಂದು ಪ್ರಾರ್ಥಿಸಿದರು. ಪುಣ್ಯಕ್ಕೆ ಆತ ಒಪ್ಪಿಕೊಂಡರು.

ಅಲ್ಲಿಂದ ಮುಂದೆ ಕೆಲಸಗಳು ಸುಸೂತ್ರವಾಗಿ ನೆರವೇರಿದವು. ಎಲ್ಲರೂ ಹೋಗಿ ರಾಜರತ್ನಂ ಶೆಟ್ಟರ ಅಂಗಡಿಯಲ್ಲಿ ಹೋಗಿ ಕುಳಿತರು ರಾಜ ಶೇಖರಪ್ಪ, ಗುಲಾಬಚಂದರ ಬಳಿ ಹೋಗಿ ಹಣ ಕೊಟ್ಟು ತಾನು ಬರೆದು ಕೊಟ್ಟಿದ್ದ ಕಾಗದ ವಾಪ್ಸು ತಂದ. ಶೆಟ್ಟರು ಪರಿಹಾರ ದ್ರವ್ಯ ಐದು ಸಾವಿರ ಗಳೂ ಬಂದುವೆಂದು ಇಸ್ಮಾಯಿಲ್‌ನಿಂದ ಬರೆಸಿಕೊಂಡು ಅವನಿಗೆ ಆರು ಸಾವಿರ ರೂಪಾಯಿಗಳನ್ನು ಕೊಟ್ಟುಬಿಟ್ಟರು. ವಕೀಲರೂ, ಕಕ್ಷಿಗಾರನೂ ಗೆದ್ದವರಂತೆ ಅಲ್ಲಿಂದ ತೆರಳಿದರು.

ಅಲ್ಲಿಗೆ ಇಬ್ರಾಹಿಂ ಸಾಹೇಬರು ತಮ್ಮ ತಲೆಯ ಮೇಲಿದ್ದ ದೊಡ್ಡ ದೊಂದು ಕಲ್ಲುಬಂಡೆಯು ಕೆಳಗಿಳಿದಂತೆ ದೀರ್ಘವಾದ ನಿಟ್ಟುಸಿರು ಬಿಟ್ಟರು.

ಅನಂತರ "ಶೆಟ್ಟರೇ, ನನ್ನಿಂದ ನಿಮಗೆ ತೊಂದರೆಯಾಯಿತು, ಕ್ಷಮಿಸಿ. ಸಾಧ್ಯವಿದ್ದಿದ್ದರೆ ನಿಮಗೆ ನಷ್ಟವಾಗಿರುವ ಐದು ಸಾವಿರ ರೂಪಾಯಿಗಳನ್ನು ನಾನೇ ಕೊಡುತ್ತಿದ್ದೆ. ಆದರೆ ನಾನೊಬ್ಬ ಬಡ ಪೋಲೀಸ್ ನೌಕರ. ಅಷ್ಟು ಹಣವನ್ನು ಕೊಡಲಾರೆ." ಎಂದರು.

"ಪರವಾಯಿಲ್ಲ. ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡಿ. ಗ್ರಹ

ಚಾರ ವಶದಿಂದ ಆಗಾಗ ಇಂತಹ ದುರ್ಘಟನೆಗಳು ನಡೆಯುತ್ತವೆ. ಯಾರೇನೂ ಮಾಡಲಾದೀತು."

"ಸರಿ. ಇನ್ನು ಅಪ್ಪಣೆ ಕೊಟ್ಟರೆ ನಾವಿಬ್ಬರೂ ಹೋಗಿಬರುತ್ತೇವೆ."

"ಕುಳಿತುಕೊಳ್ಳಿ ಸ್ವಲ್ಪ ಕಾಫೀ ತೆಗೆದುಕೊಂಡು ಹೋಗುವಿರಂತೆ."

ಸಾಹೇಬರಿಗೆ ಏನಾದರೂ ಕುಡಿಯುವುದಕ್ಕೆ ಬೇಕಾಗಿತ್ತು. ಆದರೆ ಸಂಕೋಚದಿಂದ ಯಾವುದೂ ಬೇಡವೆಂದರು.

"ನೀವು ಹಾಗೇ ಹೊರಟು ಹೋದರೆ ನನ್ನ ಮನಸ್ಸಿಗೆ ಸಂಕೋಚ ವಾಗುತ್ತದೆ."

"ಹಾಗಾದರೆ ತರಿಸಿ, ಅಡ್ಡಿಯಿಲ್ಲ."

ಹೋಟಲು ಹತ್ತಿರವಾಗಿಯೇ ಇದ್ದಿತು. ಬೇಗ ಕಾಫಿಯು ಬಂದಿತು.

ಕುಡಿಯುತ್ತಾ ಸಾಹೇಬರು "ರಾಜರತ್ನಂ ಶೆಟ್ಟರೇ, ಇಷ್ಟೊಂದು ನಷ್ಟ ಪಟ್ಟವರು ಆ ವಜ್ರದ ಹರಳು ಪುನಃ ಬೇಕೆಂದು ಯಾಕೆ ಹಟ ಮಾಡಿದಿರಿ?" ಎಂದು ಕೇಳಿದರು.

"ಅದೇನು ಹೀಗೆ ಹೇಳುತ್ತೀರಿ? ಒಂದು ಸಾವಿರ ರೂಪಾಯಿ ಮಿಗಿಸಿ ಕೊಳ್ಳುವುದಕ್ಕೆ."

ರಾಜಶೇಖರಪ್ಪನು "ಅಷ್ಟೂ ಗೊತ್ತಾಗುವುದಿಲ್ಲವೇ? ಅದು ಸರಿ. ಆ ಮಾತಿನಿಂದ ಕುದುರಿದ್ದ ವ್ಯವಹಾರ ಮುರಿದುಹೋಗುವಂತೆ ಆಗಿತ್ತು. ಐದು ಸಾವಿರಗಳನ್ನೇ ಕಳೆದುಕೊಳ್ಳಲು ತಯಾರಾಗಿದ್ದ ನೀವು ಇನ್ನೊಂದು ಸಾವಿರಕ್ಕೆ ಯಾಕೆ ಹಿಂದೇಟು ಹೊಡಿದಿರಿ – ಎಂಬುದು ಇನ್ಸ್ಪೆಕ್ಟರ ಸಂದೇಹ ವಾಗಿರಬೇಕು." ಎಂದ.

ರಾಜರತ್ನಂ ಶೆಟ್ಟರು "ಅದು ಹಿಂದೇಟು ಹೊಡೆಯುವುದಲ್ಲ. ಒಟ್ಟಿ ನಲ್ಲಿ ಆ ವಜ್ರದ ಹರಳನ್ನು ಬಿಡುವುದು ನನಗೆ ಇಷ್ಟವಿರಲಿಲ್ಲ. ವಾಸ್ತವ ವಾದ ವಿಷಯ ಹೇಳುತ್ತೇನೆ, ಕೇಳಿರಿ. ನೀವುಗಳು ಪೋಲೀಸ್ ಸ್ಟೇಷನ್ನಿಗೆ ಕರೆದು ಇವೆಲ್ಲವನ್ನೂ ಹೇಳಿದಾಗ ನನಗೆ ಬಹಳ ಅಸಮಾಧಾನವಾಯಿತು. ಆ ಲಾಯರು ಕೇಸುಹಾಕಿ ಪರಿಹಾರ ದ್ರವ್ಯವನ್ನು ತೆಗೆದುಕೊಳ್ಳುತ್ತೇನೆಂದು ಹೇಳಿದಾಗ ಕೋಪವೇ ಬಂದಿತು. ನಾನಾಗಿ ಸ್ಟೇಷನ್ನಿಗೆ ಬರಲಿಲ್ಲ. ತಪ್ಪು

ನಿಮ್ಮ ಮೇಲೆ ಹಾಕಿ ಕುಳಿತುಕೊಳ್ಳುವುದು. ಏನಾದರೆ ಅದಾಗಲಿ ಎಂದು ಸಹ ತೀರ್ಮಾನ ಮಾಡಿದ್ದೆ. ಅಷ್ಟರಲ್ಲಿ ನನಗೊಂದು ಯೋಚನೆ ತೋರಿತು. ಈ ವಜ್ರವನ್ನು ನಾನು ಎರಡು ಸಾವಿರ ರೂಪಾಯಿಗಳಿಗೆ ಕೊಂಡಿದ್ದರೂ ಇಸ್ಮಾಯಿಲ್‌ಗೆ ಐದು ಸಾವಿರ ರೂಪಾಯಿಗಳಿಗೆ ಮಾರಿದ್ದರಲ್ಲಿ ಅನ್ಯಾಯ ವಿಲ್ಲ. ಹೇಗಾದರೂ ಇದಕ್ಕೆ ನಾಲ್ಕೈದು ಸಾವಿರ ರೂಪಾಯಿಗಳ ಬೆಲೆ ಯಾಗಿಯೇ ಆಗುತ್ತದೆ. ಇದರಲ್ಲಿ ಇನ್ನೊಂದಿದೆ. ಈ ವಜ್ರವೇ ಮುಂತಾ ದವುಗಳಿಗೆ ಅವುಗಳ ಬೆಲೆಯು ಮಾತ್ರವೇ ಅಲ್ಲ. ಅದರೊಂದಿಗೆ ಅದೃಷ್ಟವೂ ಇರುತ್ತದೆ. ಯಾವುದೋ ಅದೃಷ್ಟದಿಂದಲೇ ಈ ವಜ್ರವು ನನ್ನ ಬಳಿಗೆ ಬಂದಿದೆ. ಅದರಿಂದಲೇ ಅಷ್ಟು ಬೆಲೆ ಬಾಳುವಂತಹದು ಇಷ್ಟು ಕಡಿಮೆ ಬೆಲೆಗೆ ಸಿಕ್ಕಿದುದು. ಸಾಧಾರಣವಾಗಿ ನಾನು ಮಾರಿದ್ದು ಪುನಃ ನಮ್ಮ ಕೈಗೆ ಬರುತ್ತದೆಯೇ ಹೇಳಿ. ಅಂಥಾದ್ದರಲ್ಲಿ ಇದು ಬರುತ್ತಿದೆ. ಒಂದು ಬಾರಿ ಕೈಗೆ ಬಂದುದನ್ನು ಬಿಟ್ಟುದರಿಂದ ಇಷ್ಟೊಂದು ಕಷ್ಟನಷ್ಟಗಳಿಗೆ ಕಾರಣ ವಾಯಿತು ಪುನಃ ಅದನ್ನು ಕೈಬಿಟ್ಟರೆ ಏನೇನು ತೊಂದರೆಗಳು ಬರು ತ್ತವೆಯೋ? ಅದನ್ನು ಬಿಡಬಾರದೆಂದು ತೋರಿತು. ಇನ್ನು ಎಂತಹ ಸಂದರ್ಭವು ಬಂದರೂ ನಾನೀ ವಜ್ರದ ಹರಳನ್ನು ಮಾರುವುದಿಲ್ಲ." ಎಂದರು.

## ೧೨

ಬೆಳಗಾದಮೇಲೆಯೂ ಚಲಂ ತನ್ನ ಆಫೀಸುರೂಂನಲ್ಲಿಯೇ ಕುಳಿತಿದ್ದ. ಕೋಣೆಯಲ್ಲಿ ಎಲ್ಲೆಲ್ಲಿಯೂ ಸಿಗರೇಟ್ ತುಂಡುಗಳು ಬಿದ್ದಿದ್ದವು. ಆ ತುಂಡು ಗಳನ್ನು ಯಾರಾದರೂ ನೋಡಿದ್ದರೆ ನಾಲ್ಕೈದು ಪ್ಯಾಕುಗಳಷ್ಟು ಸಿಗರೇಟು ಸೇದಲ್ಪಟ್ಟಿದೆ ಎಂದು ಸುಲಭವಾಗಿ ಊಹಿಸುತ್ತಿದ್ದರು. ಮಂಜಿನಂತೆ ಮುಚ್ಚಿಕೊಂಡಿದ್ದ ಸಿಗರೇಟು ಹೊಗೆಯು ಆ ಕೋಣೆಯಲ್ಲಿ ಉರಿಯುತ್ತಿದ್ದ ದೀಪದ ಪ್ರಕಾಶವನ್ನೂ ಸಹ ಮಂಕುಗೊಳಿಸಿತ್ತು.

ಅವನು ಯೋಚಿಸುತ್ತಿದ್ದ ವಿಷಯವು ಘನೀಭೂತವಾಗಿ ಎದುರಿಗೆ ಕುಳಿ ತಿದೆಯೋ ಎಂಬಂತೆ ಮೇಜದ ಮೇಲೆ ಚೆಕ್ ಇತ್ತು. ನೂರು ರೂಪಾಯಿ

ಗಳದೊಂದು ಕರೆನ್ಸೀ ನೋಟಿತ್ತು. ಅವೆರಡೂ ಎರಡು ದಿನಗಳ ಹಿಂದೆ ಎಂದರೆ ಶನಿವಾರ ರಾತ್ರಿ ಇಬ್ರಾಹಿಂ ಸಾಹೇಬರ ಬಳಿ ಕೇಳಿ ತೆಗೆದುಕೊಂಡು ಬಂದಿದ್ದವುಗಳು. ಚಕ್ಕು ಮಹಮುದಾಲಿಯಿಂದ ಫೌಜೀಖಾನ್ ಈರಾನಿಗೆ ಕೊಡಲ್ಪಟ್ಟಿದ್ದುದು. ನೋಟು ಪ್ರಕಾಶನ ಜೇಬಿನಲ್ಲಿ ಸಿಕ್ಕಿದ ನೋಟುಗಳಲ್ಲಿ ಮೇಲುಗಡೆ ಇದ್ದುದು.

ಸುಮಾರು ಎಂಟೂವರೆ ಗಂಟೆಯ ವೇಳೆಗೆ ಮಾಮೂಲಿನಂತೆ ಕುಪ್ಪುಸ್ವಾಮಿಯು ಆಫೀಸಿಗೆ ಬಂದ. ಹಜಾರದಲ್ಲಿ ಎಲ್ಲವೂ ದಿನದಂತೆಯೇ ಯಥಾಸ್ಥಿತಿಯಲ್ಲಿದ್ದುವು. ಉಷೆಯು ಇನ್ನೂ ಬಂದಿರಲಿಲ್ಲ. ರಾಗವಾಗಿ ಶಿಳ್ಳು ಹೊಡೆಯುತ್ತಾ ಸಿಗರೇಟು ಹಚ್ಚಿಕೊಂಡು ತನ್ನ ಕುರ್ಚಿಯಮೇಲೆ ಕುಳಿತ.

ಎದುರಿಗಿದ್ದ ಚಲಂನ ಕೋಣೆಯಲ್ಲಿ ದೀಪದ ಬೆಳಕು ಕಾಣುತ್ತಿದೆ. ಬಾಗಿಲ ಸಂದಿಯಿಂದ ಒಳಗೆ ಅಡಗಿರುವ ಹೊಗೆಯು ತಪ್ಪಿಸಿಕೊಂಡು ಬರುತ್ತಿದೆ.

ಈ ಅಸಹಜವಾದ ಸ್ಥಿತಿಯು ಕುಪ್ಪುಸ್ವಾಮಿಗೆ ವಿಸ್ಮಯವನ್ನುಂಟು ಮಾಡಿತು. ಚಲಂ ಇದ್ದಾನೆಂಬುದಷ್ಟೇ ಗಮನಕ್ಕೆ ಬಂದಿದ್ದರೆ ಅವನಿಗೆ ಆಶ್ಚರ್ಯವಾಗುತ್ತಿರಲಿಲ್ಲ. ದೀಪವು ಇನ್ನೂ ಉರಿಯುತ್ತಿರುವುದೇ ಅಸಹಜವಾಗಿ ಕಂಡುದು.

ಕೂಡಲೇ ಬಾಗಿಲು ತೆಗೆದುಕೊಂಡು ಒಳಗೆ ಹೋಗಿ ನೋಡಿ, "ಇದೇನು, ರಾತ್ರಿಯೆಲ್ಲ ಇಲ್ಲಿಯೇ ಕುಳಿತಿರುವಂತಿದೆ?" ಎಂದ.

ಚಲಂ ಅದಕ್ಕೆ ಉತ್ತರ ಹೇಳಲಿಲ್ಲ.

"ಬೆಳಗಾಗ ಇಲ್ಲಿಯೇ ಕಾಫಿಯಾದಂತೆ ಕಾಣುತ್ತದೆ."

ಅದಕ್ಕೆ ಸಾಕ್ಷಿಯಾಗಿ ಎರಡು ಕಾಫೀ ಗ್ಲಾಸುಗಳೂ ಮೇಜದ ಮೇಲೆ ಕುಳಿತಿದ್ದವು.

ಚಲಂ ಬಾಯಿ ಬಿಟ್ಟು ಹೇಳದಿದ್ದರೂ ಅವನು ಯಾವ ವಿಷಯ ಕುರಿತು ಯೋಚನೆ ಮಾಡುತ್ತಾ ರಾತ್ರಿಯನ್ನೆಲ್ಲಾ ಕಳೆದನೆಂಬುದನ್ನು ಊಹಿಸುವುದು ಪತ್ತೇದಾರನ ಆ ಸಹಚರನಿಗೆ ಪ್ರಯಾಸವಾಗಲಿಲ್ಲ. ಚಕ್ ಮತ್ತು ನೋಟುಗಳು ಆ ವೇಳೆಗಾಗಲೇ ಕಣ್ಣಿಗೆ ಬಿದ್ದಿದ್ದವು.

ಕುಪ್ಪುಸ್ವಾಮಿಯು ಕುಳಿತುಕೊಂಡು "ಈ ಕೇಸಿನ ಸಂಬಂಧವಾದ ನೀವು ವೃಥಾ ಶ್ರಮಪಡುತ್ತಿರುವಂತೆ ತೋರುತ್ತಿದೆ." ಎಂದ.

ಅದು ತಾನು ಮಾಡುತ್ತಿದ್ದ ಯೋಚನೆಗೆ ಸಂಬಂಧಪಟ್ಟುದಾದುದರಿಂದ ಕೂಡಲೇ ಚಲಂ, "ಅದೇಕೆ ಹಾಗೆ ಹೇಳುತ್ತೀಯೆ, ಕುಪ್ಪು?" ಎಂದ.

"ನಿನ್ನೆಯ ದಿನ ರಮಾನಂದ ಪೈಗಳು ಬಂದಿದ್ದರಲ್ಲ, ಆ ಮುದುಕ ನನ್ನು ನೋಡಿ ಅಯ್ಯೋ ಪಾಪ–ಎಂದೆನಿಸಿತು. ಇರುವ ಒಬ್ಬನೇ ಮಗ, ಹೀಗೆ ಮಾಡಿ ವೃದ್ಧಾಪ್ಯದಲ್ಲಿ ಅವನಿಗೆ ಕಷ್ಟ ಬಂದಿದೆಯಲ್ಲಾ ಎಂದುಕೊಂಡೆ. ನೀವು ಆ ಮುದುಕನ ಮುಖವನ್ನು ನೋಡಿ ಏನಾದರೂ ಮಾಡೋಣವೆಂದು ಪ್ರಯತ್ನಮಾಡುತ್ತಿದ್ದೀರಿ. ಇಂತಹ ವಿಷಯದಲ್ಲಿ ಕೇವಲ ಸದ್ಭಾವನೆ ಯೊಂದರಿಂದಲೇ ಏನೂ ಆಗುವುದಿಲ್ಲವಷ್ಟೇ ?"

"ಪ್ರಕಾಶ್ ಅಪರಾಧಿಯೆಂದೇ ನಿನಗೆ ಕಾಣುತ್ತದೆಯೇನು ?"

"ನನಗೆ ಮಾತ್ರವೇ ಏನು ? ಈ ಕೇಸಿನ ವಿವರಗಳನ್ನು ಗಮನಿಸಿದವ ರೆಲ್ಲರೂ ಅದೇ ಅಭಿಪ್ರಾಯಪಡುತ್ತಾರೆ. ನಿಮಗೆ ಮಾತ್ರ ಈ ವಿಷಯದಲ್ಲಿ ವಿಭಿನ್ನವಾಗಿ ಕಂಡುಬರುತ್ತಿರುವುದೇಕೆ ಎಂಬುದೇ ನನಗೆ ಆಶ್ಚರ್ಯವಾಗಿದೆ. ಪ್ರಕಾಶನ ಬಗ್ಗೆ ನೀವು ಸಹಾನುಭೂತಿಯನ್ನು ತೋರಿಸುವುದು, ಅವನಿ ಗೇನಾದರೂ ಸಹಾಯ ಮಾಡಬೇಕೆಂದುಕೊಳ್ಳುವುದು ಪರವಾಯಿಲ್ಲ. ಆದರೆ ಇದನ್ನೇ ತಲೆಗೆ ಹಚ್ಚಿಕೊಂಡು ನಿದ್ದೆಯನ್ನು ಬಿಟ್ಟು ರಾತ್ರಿಯೆಲ್ಲಾ ಯೋಚನೆ ಮಾಡುವುದು ಮಾತ್ರ ಸರಿಯಲ್ಲ."

ಚಲಂ ನಗುತ್ತಾ, "ಕುಪ್ಪುಸ್ವಾಮಿ, ವಯಸ್ಸಾದರೂ ಹುಡುಗನಂತೆ ಮಾತನಾಡುತ್ತಿದ್ದೀಯೆ ? ನಾನು ಈ ಯೋಚನೆಯಲ್ಲಿ ರಾತ್ರಿ ಕಳೆದುದು ಸರಿಯಲ್ಲವೆಂದು ಹೇಳಿದೆಯಲ್ಲವೇ ? ನಾನು ಈ ಗಡುತರವಾದ ಸಮಸ್ಯೆ ಯನ್ನು ಬಿಡಿಸಬಲ್ಲೆನಾದರೆ ಒಂದು ರಾತ್ರಿಯೇಕೆ, ಒಂದು ತಿಂಗಳು ಹಗಲು ರಾತ್ರಿಗಳು ಊಟ, ನಿದ್ದೆಗಳನ್ನು ಬಿಟ್ಟು ಯೋಚನೆಮಾಡುತ್ತಾ ಕುಳಿತಿರುವು ದಕ್ಕೆ ಸಿದ್ಧನಾಗಿದ್ದೇನೆ."

"ಹಾಗಾದರೆ ಇದರಲ್ಲಿ ಯೋಚನೆ ಮಾಡುವುದಕ್ಕೆ ಅವಕಾಶವಿದೆ— ಎನ್ನುತ್ತೀರಾ ?"

"ಇದೆ ಕುಪ್ಪುಸ್ವಾಮಿ, ಬೇಕಾದಷ್ಟು ಅವಕಾಶಗಳಿವೆ. ಈ ಸಮಸ್ಯೆಯು "ನೀನು ಹೆಚ್ಚೋ ನಾನು ಹೆಚ್ಚೋ" ಎಂದು ನನ್ನ ಮುಂದೆ ಸವಾಲು ಹಾಕಿ ಕುಳಿತಿದೆ. ನಾನು ಇದನ್ನು ಬಿಡಿಸಲಾರದೇ ಇದ್ದರೆ ನನ್ನ ಬುದ್ಧಿ, ನನ್ನ ಅನುಭವಗಳು ವ್ಯರ್ಥವೆಂದು ಭಾವಿಸುತ್ತೇನೆ."

ಈ ಪ್ರಸಂಗವು ತಾನು ತಿಳಿದುಕೊಂಡಿರುವಷ್ಟೇ ಅಲ್ಲವೆಂದೂ ಗಮನಿಸಬೇಕಾದ ಇನ್ನೂ ಎಷ್ಟೋ ಅಂಶಗಳು ಇವೆಯೆಂದೂ ಕುಪ್ಪುಸ್ವಾಮಿಗೆ ಅನ್ನಿಸಿತು. ಕೇಳಿ ತಿಳಿದುಕೊಳ್ಳಬೇಕೆಂದು ಅವನಿಗೆ ಆಸಕ್ತಿಯುಂಟಾಯಿತು. ಆದರೆ ಚಲಂನ ಸ್ವಭಾವವು ಕುಪ್ಪುಸ್ವಾಮಿಗೆ ಚೆನ್ನಾಗಿ ಗೊತ್ತಿತ್ತು. ಪತ್ತೇದಾರನು ಏನಾದರೂ ಆಲೋಚನೆ ಮಾಡಿದರೆ ಅವುಗಳನ್ನು ಸ್ಥಿರಗೊಳಿಸಲು ಬಾಯಲ್ಲಿ ಹೇಳುತ್ತಿದ್ದ. ಈಗವನಿಗೆ ಮಾತನಾಡುವ ಮನಃಪ್ರವೃತ್ತಿಯುಂಟಾಗಿದೆ ಎಂದುಕೊಂಡವನು ಸುಮ್ಮನೆ ಕುಳಿತುಕೊಂಡ.

"ಇದರಲ್ಲಿ ಯೋಚನೆ ಮಾಡುವ ಅವಕಾಶಗಳು ಎಲ್ಲಿದೆ ಎಂದು ಕೇಳಿದೆಯಲ್ಲವೇ, ಕುಪ್ಪುಸ್ವಾಮಿ. ಇದೆ. ಅದೇನೆಂಬುದನ್ನು ಹೇಳುತ್ತೇನೆ ಕೇಳು. ಈಗ ಮೊದಲಿನಿಂದ ವಿಷಯವನ್ನು ಪರ್ಯಾಲೋಚಿಸೋಣ. ಈಗ ನಾವೇನು ಮಾಡುತ್ತಿದ್ದೇವೆಂದುಕೊಂಡಿದ್ದೀಯೋ ?"

ಪ್ರಶ್ನೆಯು ವಿಸ್ಮಯಾತ್ಮಕವಾಗಿ ಕಂಡರೂ ಅವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಪಟ್ಟು ಆಗದೇ "ನಿಮ್ಮ ಪ್ರಶ್ನೆಯೇ ನನಗೆ ಅರ್ಥವಾಗಲಿಲ್ಲ" ಎಂದನು ಕುಪ್ಪುಸ್ವಾಮಿ.

"ಯಾವುದೋ ಅಪರಾಧವು ನಡೆದು ಅದನ್ನು ಮಾಡಿರುವ ಅಪರಾಧಿ ಯಾರೆಂದು ನಾವು ಹುಡುಕುತ್ತಿಲ್ಲ. ಮುಂದೆ ನಾವು ಅದನ್ನೂ ಮಾಡಬೇಕಾಗಿ ಬರಬಹುದು. ಈಗ ನಮ್ಮ ಮುಂದಿರುವುದು ಆ ವಿಷಯವಲ್ಲ. ನಾನು ಹೇಳುವುದನ್ನು ಸರಿಯಾಗಿ ಅರ್ಥಮಾಡಿಕೋ. ಅಪರಾಧ ನಡೆದಿರಬಹುದಾದ ಬಗೆ ಯಾವುದೆಂಬುದನ್ನು ನಾವು ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದೇವೆ."

"ಹುಂ. ಈ ಪ್ರಕರಣದ ಖಚಿತವಾದ ಭಾಗವೊಂದನ್ನು ಮಾತ್ರ ನಾವು ಪರಿಶೀಲಿಸಬೇಕೆಂದು ನಿಮ್ಮ ಅಭಿಪ್ರಾಯ."

"ಸರಿ. ಟರ್ವ ಬ್ಯಾಂಕಿನಲ್ಲಿ ಮೂವತ್ತಾರು ಸಾವಿರ ರೂಪಾಯಿಗಳ ಛಪಾವಣೆಯಾಗಿದೆ. ಇದು ಹೇಗಾಯತೆಂದು ಮೊದಲು ನೋಡಬೇಕು."

"ಅದದ್ನು ಬ್ಯಾಂಕಿನವರ ಬಾಯಿಂದಲೇ ಮೊನ್ನೆ ಕೇಳಿದ್ದೇವಲ್ಲಾ."

"ತಡೆದುಕೋ. ನಿಧಾನವಾಗಿ ಆಲೋಚನೆ ಮಾಡೋಣ. ಲೆಡ್ಜರ್ ಕ್ಲಾರ್ಕೂ, ಮ್ಯಾನೇಜ್ಜರೂ ತಾವು ಆ ಚಕ್ಕನ್ನೂ ಮೊದಲೇ ನೋಡಿದು ದಾಗಿಯೂ, ಅದು ನಾಲ್ಕು ಸಾವಿರ ರೂಪಾಯಿಗಳ ಚಕ್ಕೆಂದೂ ಹೇಳುತ್ತಾರೆ. ಹಾಗೆ ಬರೆದುಕೊಂಡೂ ಇದ್ದಾರೆ. ಆ ಬರವಣಿಗೆಯು ಯಾವಾಗ ಬರೆ ದುದೋ ಕಾಣೆವು. ಅಂತೂ ನಾವು ಬ್ಯಾಂಕಿಗೆ ಹೋಗುವುದಕ್ಕಿಂತ ಮೊದಲು ಬರೆದುದು ಎಂದು ಹೇಳಬಹುದು. ಈಗ ನಮ್ಮೆದುರಿಗೆ ಇರುವ ಚಕ್ಕೂ ನಾಲ್ಕು ಸಾವಿರ ರೂಪಾಯಿಗಳದೇ. ಇದರ ಮೇಲೆ ಪ್ರಕಾಶ ನಲವತ್ತು ಸಾವಿರಗಳನ್ನು ಹೇಗೆ ಕೊಟ್ಟ ?"

"ಅದರಿಂದಲೇ ಅಲ್ಲವೇ ಅವನು ಹೇಳುವ ಮಾತು ನಂಬುವುದಕ್ಕೆ ಅಸಾಧ್ಯವಾಗಿದೆ ಎನ್ನುವುದು.''

"ಹಾಗೆನ್ನುವುದಾದರೆ ನಾನು ಈ ವಿಷಯವನ್ನೇ ಕುರಿತು ಯೋಚನೆ ಮಾಡಬೇಕಾಗಿಲ್ಲ. ಪ್ರಕಾಶನು ತಾನು ನಿರಪರಾಧಿ ಎನ್ನುತ್ತಾನೆ. ಅಷ್ಟೇ ಅಲ್ಲ. ತಾನು ಹೇಳುವ ಮಾತು ಯಾರಿಂದಲೇ ಆಗಲಿ ನಂಬುವುದಕ್ಕೆ ಅಸಾಧ್ಯವಾಗಿದೆ ಎಂದು ಅವನೇ ಹೇಳುತ್ತಾನೆ. ಅವನು ಹೇಳುವುದನ್ನು ನಂಬಿಯೇ ನಾವು ಮುಂದೆ ಆಲೋಚನೆ ಮಾಡಬೇಕು. ನಾನು ಸ್ವಲ್ಪ ಹೊತ್ತಿನ ಮೊದಲು ಹೇಳಿದಂತೆ ಅವನನ್ನು ನಂಬದಿದ್ದರೆ ಆಲೋಚನೆ ಮಾಡು ವುದಕ್ಕೆ ನಮ್ಮ ಮುಂದೆ ವಿಷಯವೇ ಇಲ್ಲ. ಈಗ ವಿಷಯವಿಷ್ಟು. ಲೆಡ್ಜರ್ ಕ್ಲಾರ್ಕ್ ಮತ್ತು ಮ್ಯಾನೇಜರುಗಳು ನೋಡಿದಾಗ ಚೆಕ್ಕು ನಾಲ್ಕು ಸಾವಿರ ಗಳದಾಗಿತ್ತು. ಪ್ರಕಾಶ್ ಆ ಸಮಯದಲ್ಲಿ ತಾನು ಯಾವ ರೀತಿಯಲ್ಲಿಯೂ ಭ್ರಾಂತನಾಗಿರಲಿಲ್ಲವೆಂದೂ, ಜಾಗ್ರತನಾಗಿಯೇ ಇದ್ದೆನೆಂದೂ, ಮೂರು ಬಾರಿ ನೋಡಿ ಚೆಕ್‌ಗೆ ಹಣ ಕೊಟ್ಟನೆಂದೂ ಹೇಳುತ್ತಾನೆ. ಅಂದರೆ ಈ ಪ್ರಸಂಗದಲ್ಲಿ ನಾಲ್ಕು ಸಾವಿರಗಳವೂ, ನಲವತ್ತು ಸಾವಿರಗಳದೂ, ಹೀಗೆ ಎರಡು ಚೆಕ್‌ಗಳಿದ್ದುವೆಂದು ಇಟ್ಟುಕೊಳ್ಳೋಣ. ಫಾಜೀಖಾ್ ಈಯಾನೀ ನಲವತ್ತು ಸಾವಿರಗಳ ಚೆಕ್ ತಂದು ಲೆಡ್ಜರ್ ಕ್ಲಾರ್ಕ್ ಕೈಗೆ ಕೊಟ್ಟ. ಆ

ಕ್ಲಾರ್ಕೂ, ಮ್ಯಾನೇಜರೂ ನಾಲ್ಕು ಸಾವಿರಗಳದೆಂದು ಬರೆದುಕೊಂಡು ಅದನ್ನು ಪಾಸುಮಾಡಿದರು. ಪ್ರಕಾಶ್ ಆದರ ಮೇಲೆ ನಲವತ್ತು ಸಾವಿರ ಗಳನ್ನು ಕೊಟ್ಟ. ಅನಂತರ ಲೆಡ್ಜರ್ ಕ್ಲಾರ್ಕೂ, ಮ್ಯಾನೇಜರೂ ಆ ಚೆಕ್ಕನ್ನು ಮುಚ್ಚಿಹಾಕಿ ಅದರ ಬದಲು ನಾಲ್ಕು ಸಾವಿರಗಳ ಚೆಕ್ ಇಟ್ಟರು. ತಮ್ಮ ಲೆಡ್ಜರುಗಳಲ್ಲಿ ನಾಲ್ಕು ಸಾವಿರಗಳ ಚೆಕ್‌ನ ಮೇಲೆ ಪ್ರಕಾಶ್ ರುಜುವನ್ನೂ, ಕೈಬರಹಗಳನ್ನೂ ಬರೆಯಬೇಕಾಯಿತು. ಅದನ್ನು ಫೋರ್ಜರಿ ಮಾಡಿದರು. ಯಾವ ಚಕ್ ಈಗ ನಮ್ಮ ಮುಂದೆ ಇದೆಯೋ ಅದರ ಮೇಲೆ ಪ್ರಕಾಶ್ ಹಣ ವನ್ನು ಕೊಡಲಿಲ್ಲ. ಹೀಗೆ ಇಟ್ಟುಕೊಂಡರೆ ಈ ಸಮಸ್ಯೆ ಒಂದು ವಿಧವಾಗಿ ಬಗೆಹರಿಯುತ್ತದೆ."

"ಹಾಗಾದರೆ ಈರಾನಿಯು ತೆಗೆದುಕೊಂಡು ಹೋದ ನೋಟುಗಳು ಪ್ರಕಾಶನ ಜೇಬಿನಲ್ಲಿ ಕಂಡುಬರಲು ಕಾರಣವೇನು ?"

"ಈ ಭಪಾವಣೆಯಲ್ಲಿ ಈರಾನಿಯೂ ಸೇರಿದ್ದಾನೆಯಲ್ಲಾ. ಪ್ರಕಾಶನ ಮೇಲೆ ಅಪರಾಧವು ಬಂದರೆ ತಾವು ಬಚಾಯಿಸಿಕೊಳ್ಳಬಹುದೆಂದು ಹೇಗೋ ತಂತ್ರದಿಂದ ಅವನಿಗೆ ತಿಳಿಯದಂತೆ ಅವನ ಜೇಬಿನಲ್ಲಿ ಹಣವನ್ನಿಟ್ಟಿರುವರು."

"ಈ ರೀತಿಯಾಗಿಯೂ ಆಲೋಚನೆ ಮಾಡಬಹುದು. ಅಲ್ಲಿಗೆ ಲೆಡ್ಜರ್ ಕ್ಲಾರ್ಕು, ಮ್ಯಾನೇಜರು, ಫಾಜೀಖಾ ಮತ್ತು ಮಹಮುದಾಲಿ ಇವರು ನಾಲ್ಕು ಮಂದಿಯೂ ಸೇರಿ ಈ ಭಪಾವಣೆಯನ್ನು ಮಾಡಿದರು ಎಂದಾಗುತ್ತದೆ."

"ಸರಿಯಾಗಿ ಊಹಿಸಿದೆ. ಆದರೆ ಇನ್ನೊಂದು ವಿಷಯ ಮರೆತೆ. ನಾಲ್ಕು ಸಾವಿರಗಳ ಎರಡನೆಯ ಚೆಕ್ ಮೇಲೆ ಪ್ರಕಾಶನ ಕೈಬರಹ ಮತ್ತು ರುಜುಗಳನ್ನು ಮಾಡಬಲ್ಲವನು ಒಬ್ಬ ಬೇಕು. ಅಲ್ಲಿಗೆ ನಾಲ್ಕು ಮಂದಿಯೇ ಅಲ್ಲ, ಇನ್ನೂ ಒಬ್ಬನು ಬೇಕು. ಅಥವಾ ಈ ನಾಲ್ಕು ಮಂದಿಯಲ್ಲಿಯೇ ಒಬ್ಬನಿಗೆ ಫೋರ್ಜರಿಯು ಬರುತ್ತದೆ...."

"ಹಾ, ನಾನು ಹೇಳಿದುದರಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಯಿತು. ಫೋರ್ಜರಿ ಮಾಡುವವನು ಒಬ್ಬ ಬೇಕೇ ಬೇಕು. ಅಲ್ಲಿಗೆ ಮಹಮುದಾಲಿಯು ಬೇಕಾಗಿಲ್ಲ. ಅವನ ರುಜುವನ್ನೂ ಚೆಕ್‌ನ ಮೇಲೆ ರುಜು ಮಾಡಿರ ಬಹುದಲ್ಲ."

"ಅದಾಗುವುದಿಲ್ಲ. ಮಹಮುದಾಲಿಗೆ ಬ್ಯಾಂಕ್‌ನಿಂದ ಕೊಡಲ್ಪಟ್ಟಿರುವ ಚೆಕ್ಕುಗಳ ನಂಬರುಗಳು ಅವನ ಖಾತೆಯಿರುವ ಹಾಳೆಯಲ್ಲಿ ಗುರುತು ಮಾಡಲ್ಪಟ್ಟಿವೆ. ಆ ಲೀಫ್‌ಗಳಿಂದ ಒಂದರಲ್ಲಿಯೇ ಈ ಚೆಕ್ ಬರೆಯಲ್ಪಟ್ಟಿದೆ. ಅವನ ಕಡೆಯವನಾರೋ ಆ ಚೆಕ್ ಲೀಫ್ ಕಳ್ಳತನ ಮಾಡಿಕೊಂಡು ಬಂದು ಕೊಟ್ಟಿರಬಾರದೇಕೆ ಎಂದು ಕೇಳುತ್ತೀಯೇನೋ? ಅದಾಗುವುದಿಲ್ಲ. ಯಾಕೆಂದರೆ ಚೆಕ್ ಪುಸ್ತಕಗಳಲ್ಲಿ ಒಂದು ಹಾಳೆ ಗೈರುವಿಲೆಯಾಗಿರುವುದು ಮಹಮುದಾಲಿಗೆ ತಿಳಿಯದೆಯೇ ಇರುತ್ತದೆಂದೂ, ತಿಳಿದರೂ ಸುಮ್ಮನಿದ್ದು ಬಿಡುತ್ತಾನೆ ಎಂದೂ ಭಾವಿಸುವುದಕ್ಕಾಗುವುದಿಲ್ಲ. ಆ ಹಾಳೆಯನ್ನು ಅವನು ಹುಡುಕುತ್ತಾನೆ. ಆದರಿಂದ ಮಹಮುದಾಲಿಯೇ ಇದರಲ್ಲಿ ಸೇರಿದ್ದಾನೆಂದು ಕೊಳ್ಳುವುದು ಅನುಕೂಲ."

"ಸರಿ, ಮುಂದೆ ಹೇಳಿ...."

"ಅಲ್ಲಿಗೆ ನಾಲ್ಕು ಅಥವಾ ಐದು ಮಂದಿ ಈ ಛಪಾವಣೆಗೆ ಭಾಗಸ್ಥರಾದ ಹಾಗಾಯಿತು. ಈ ವ್ಯಕ್ತಿಗಳ ವಿಷಯ ಕುರಿತು ಆಲೋಚಿಸೋಣ. ಬ್ಯಾಂಕು ಮ್ಯಾನೇಜರು ಮತ್ತು ಲೆಡ್ಜರು ಕ್ಲಾರ್ಕು ಕಡಿಮೆ ಆದಾಯವುಳ್ಳವರು. ಇವರು ಈ ಕ್ಷುದ್ರ ದ್ರವ್ಯಕ್ಕೆ ಬಾಯಿಬಿಡುತ್ತಾರೆಂದುಕೊಂಡರೂ ಇನ್ನಿಬ್ಬರ ವಿಷಯದಲ್ಲಿ ಹಾಗೆ ಹೇಳುವುದಕ್ಕಾಗುತ್ತದೆಯೇ? ಘಾಜೀಖಾನ್ ಈರಾನಿಯು ನಲವತ್ತು ಸಾವಿರಗಳನ್ನು ಎಣಿಸಿಕೊಂಡರೂ ತಿರಸ್ಕಾರದಿಂದ ಅದನ್ನು ಜೇಬಿನಲ್ಲಿ ಹಾಕಿಕೊಂಡು ಹೋದನೆಂದು ಪ್ರಕಾಶ್ ಹೇಳುತ್ತಾನೆ. ಅವನು ನೋಡುವುದಕ್ಕೆ ರೇಸ್‌ಗೆ ಸಂಬಂಧಪಟ್ಟ ವ್ಯಕ್ತಿಯಂತೆ ಕಾಣುತ್ತಿದ್ದನೆಂದು ಎಲ್ಲರೂ ಹೇಳುತ್ತಾರೆ. ಬುಕ್ಕಿಯಾದ ಮಹಮುದಾಲಿಯಿಂದ ಚೆಕ್ ತೆಗೆದುಕೊಂಡು ಬಂದನೆಂದರೆ ಅವನು ರೇಸ್‌ಗೆ ಸಂಬಂಧಿಸಿದ ವ್ಯಕ್ತಿಯೆಂದು ನಾವೂ ಒಪ್ಪಬಹುದು. ರೇಸ್‌ಗೆ ಸಂಬಂಧಪಟ್ಟವನೂ, ಪ್ರಕಾಶ್ ಕೊಟ್ಟ ನಲವತ್ತು ಸಾವಿರಗಳನ್ನು ತಾತ್ಸಾರದಿಂದ ಜೇಬಿನಲ್ಲಿ ಹಾಕಿಕೊಂಡು ಹೋದವನೂ ಆದ ಈರಾನಿಯು ಮೂವತ್ತು ಸಾವಿರದಲ್ಲಿ ಒಂದು ಭಾಗಕ್ಕೆ ಕೈಯೊಡ್ಡುತ್ತಾನೆಯೇ? ಅವನು ನಮಗೆ ಅಪರಿಚಿತನಾದ ವ್ಯಕ್ತಿ. ಅವನು ಹೇಗೆಯಾದರೂ ಹೋಗಲಿ ಎಂದರೆ ದಿನಕ್ಕೆ ಸಹಸ್ರಾರು ರೂಪಾಯಿಗಳನ್ನು ಕಳೆಯುವ ಮತ್ತು ಅದಕ್ಕಿಂತ ಹೆಚ್ಚಾಗಿ ಸಂಪಾವನೆ ಮಾಡುವ ಮಹಮು

ದಾಲಿ ಈ ಸಣ್ಣ ಕೆಲಸಕ್ಕೆ ಕೈಹಾಕಲಾರನೆಂದೇ ನನ್ನ ಭಾವನೆ. ಇದರಲ್ಲಿ ಇನ್ನೂ ಒಂದು ದೊಡ್ಡ ದೋಷವಿದೆ. ನಾನು ಮೇಲೆ ಹೇಳಿದ ರೀತಿಯಾಗಿ ಛಪಾವಣೆಯಾಗಬೇಕಾಗಿದ್ದರೆ ಅದರಲ್ಲಿ ಮುಖ್ಯವಾದ ಕೈವಾಡ ಬ್ಯಾಂಕಿನವರದು. ಕೇವಲ ವಿಭಿನ್ನ ವೃತ್ತಿಯವರೂ, ಸಾಧಾರಣವಾಗಿ ಹೊಸಬರೂ ಆದ ಈ ರೇಸ್ ಜನದ ಸಹಾಯದಿಂದ ಅವರೇಕೆ ಮಾಡಬೇಕು? ಹಾಗೆ ಮಾಡಬೇಕಾಗಿದ್ದರೆ ಈ ರೇಸ್ ಜನಕ್ಕಿಂತಲೂ ಸುಲಭ ಸಾಧ್ಯರಾದವರನ್ನು ಹಿಡಿಯುವುದು ಅವರಿಂದ ಆಗುತ್ತಿರಲಿಲ್ಲವೇ?"

"ನೀವು ಇದುವರೆವಿಗೂ ಯಾವ ವಾದವನ್ನು ಬೆಳೆಯಿಸಿಕೊಂಡು ಬಂದಿರೋ ಅದಕ್ಕೆ ವಿರೋಧವಾಗಿ ನೀವೇ ಮಾತನಾಡುತ್ತಿದ್ದೀರಲ್ಲಾ."

"ಈ ವಿರೋಧವನ್ನು ದೃಢಪಡಿಸುವುದಕ್ಕಾಗಿಯೇ ಆ ವಾದವನ್ನು ಹೇಳಿದೆ. ಈಗ ಮತ್ತೊಂದು ವಿಧವಾಗಿ ನೋಡೋಣ ಕುಪ್ಪುಸ್ವಾಮಿ. ನಮ್ಮೆದುರಿಗೆ ಇರುವ ಅಂಶಗಳನ್ನೂ, ನಮ್ಮೆದುರಿಗೆ ಬಂದಿರುವ ಹೇಳಿಕೆಗಳನ್ನೂ ಇದ್ದಕ್ಕಿದ್ದ ಹಾಗಿಯೇ ಫಾಜೀಖಾ ಈರಾನಿಯ ಹೆಸರಿಗೆ, ಎದುರಿಗೆ ಇಲ್ಲವಾದುದರಿಂದ ಅವನು ಏನು ಹೇಳುತ್ತಾನೆಂಬುದು ನಮಗೆ ತಿಳಿಯದು. ಈ ಎದುರಿಗೆ ಇರುವ ಚೆಕ್‌ನಲ್ಲಿ ನಾಲ್ಕು ಸಾವಿರವೆಂದೇ ಬರೆಯಲ್ಪಟ್ಟಿರುವುದರಿಂದಲೂ ಆಮೇಲೆ ನಾವು ಕೇಳಿದ ಹೇಳಿಕೆಗಳಿಂದಲೂ ಫಾಜೀಖಾನ್ ಈರಾನಿಯು ತಂದುಕೊಟ್ಟ ಚೆಕ್ ನಾಲ್ಕು ಸಾವಿರಗಳದೆಂದೇ ಇಟ್ಟು ಕೊಳ್ಳೋಣ. ಆ ಕೂಡಲೇ ಅದನ್ನು ನೋಡಿದ ಲೆಡ್ಜರ್ ಕ್ಲಾರ್ಕೂ, ಮ್ಯಾನೇಜರೂ ಹಾಗೆಯೇ ಹೇಳುತ್ತಾರೆ. ಪ್ರಕಾಶನ ಕೈಗೆ ಬಂದಾಗ ಮಾತ್ರ ಅದು ನಲವತ್ತು ಸಾವಿರ ರೂಪಾಯಿಗಳದಾಗಿತ್ತು. ಪುನಃ ನಾಲ್ಕು ಸಾವಿರಗಳದೇ ಆಯಿತು...."

ಚಲಂ ಮುಂದೆ ಮಾತನಾಡುವುದರಲ್ಲಿ ಕುಪ್ಪುಸ್ವಾಮಿಯು "ಅದು ಅಸಂಭವ. ಇಂತಹ ಪ್ರಮೇಯವನ್ನು ನಂಬುವುದು ಹೇಗೆ?" ಎಂದ.

'ಆದಷ್ಟು ನಂಬುವುದಕ್ಕೆ ಅಸಾಧ್ಯವೇ ಆಗಿರಬಹುದು. ಆದರೆ ಅದನ್ನು ಕ್ಷಣಕಾಲ ನಂಬಿಕೊಂಡು ಮುಂದಕ್ಕೆ ಆಲೋಚನೆ ಮಾಡಿ ನೋಡೋಣ. ಅಂದರೆ ಕೆಲವು ಕ್ಷಣಗಳು ಮಾತ್ರ ಚೆಕ್‌ನ ನಲವತ್ತು

ಸಾವಿರಗಳದಾಗಿ ಕಂಡುಬರುವಂತಹ ಯಾವುದೋ ತಂತ್ರವನ್ನು ಮಾಡಿರ ಬೇಕು. ಇನ್ನು ಈ ತಂತ್ರ ಯಾಕೆ ಮಾಡಲಾಯಿತೆಂದೂ, ಯಾರಿಂದ ಮಾಡಲಾಯಿತೆಂದೂ ನೋಡಬೇಕಾಗಿದೆ...."

"ಅದನ್ನು ಊಹಿಸುವುದೇನೂ ಕಷ್ಟವಿಲ್ಲ. ಹಾಗೆ ಮಾಡಿದುದರಿಂದಾ ಗಿರುವ ಪೂರ್ಣ ಪ್ರಯೋಜನವನ್ನು ಪಡೆದವನು ಫಾಜೀಖಾ ಈರಾನಿ. ಅದರಿಂದ ಅವನೇ ಮಾಡಿರಬೇಕು. ನಾಲ್ಕು ಸಾವಿರಗಳ ಬದಲಾಗಿ ನಲ ವತ್ತು ಸಾವಿರಗಳನ್ನು ಹೊಂದುಕೊಂಡು ಹೋಗಲು ಮಾಡಿರಬೇಕು.

"ನನಗೂ ಅದೇ ರೀತಿ ತೋರಿತು. ಆದರೆ ನನ್ನಂತೆಯೇ ಇನ್ನೊಂದು ಸ್ವಲ್ಪ ಯೋಚನೆ ಮಾಡಿದ್ದಿದ್ದರೆ ಇನ್ನೂ ಕೆಲವು ಸ್ವಾರಸ್ಯವಾದ ವಿಷಯಗಳು ನಿನಗೆ ತಿಳಿಯುತ್ತಿದ್ದವು. ಈಗ ನೋಡು, ನಾಲ್ಕು ಸಾವಿರಗಳ ಬದಲಾಗಿ ನಲವತ್ತು ಸಾವಿರಗಳನ್ನು ಹೊಡೆದುಕೊಂಡು ಹೋಗುವುದು ಫಾಜೀಖಾನನ ಉದ್ದೇಶವಾಗಿದ್ದಿತೆಂದು ಹೇಳಿದೆಯಲ್ಲವೇ?" ಅದಷ್ಟೇ ಅವನ ಉದ್ದೇಶ ವಾಗಿರಲಾರದು. ಯಾಕೆಂದರೆ ಇತರರಿಗೆ "ನಾಲ್ಕು ಸಾವಿರಗಳಂತೆಯೂ ಕಂಡುಬರುವಂತೆ ಮಾಡಬೇಕಾದರೂ ಈರಾನಿಯು ಅತ್ಯಂತ ಚತುರನಾಗಿ ದ್ದಿರಬೇಕು. ಅಂತಹವನಿಗೆ ಚೆಕ್ಕನ್ನು ತಿದ್ದುವುದು ಒಂದು ಕಷ್ಟವಾಗಿದ್ದಿತೇ?"

ಕುಪ್ಪುವು ಏನೋ ಹೇಳುವಷ್ಟರಲ್ಲಿ ಚಲಂ ಮುಂದೆ ಹೇಳಿದ.

"ಈ ಚೆಕ್ ತೆಗೆದು ನೋಡು. ಇದಕ್ಕೆ ರುಜು ಮಾಡಿರುವವನ ಕೈ ಬರಹಕ್ಕೂ, ಇತರ ಬರಹಗಳನ್ನು ಬರೆದಿರುವವರ ಕೈಬರಹಕ್ಕೂ ಬಹಳ ಬದ ಲಾವಣೆಯಿದೆ. ಅಂದರೆ ಯಾರೋ ಗುಮಾಸ್ತರು ಬರೆದಿಟ್ಟುದಕ್ಕೆ ಮಹಮ ದಾಲಿಯವರು ರುಜು ಮಾಡಿದ್ದಾರೆ. ಆ ಗುಮಾಸ್ತನಿಗೆ ಚೆಕ್ ಬರೆಯುವ ಅನುಭವವಿಲ್ಲವೆಂದು ಕಾಣುತ್ತದೆ. ಸಾಧಾರಣವಾಗಿ ಚೆಕ್‌ಗಳನ್ನು ಬರೆಯು ವವರು ಪದ ಪದಗಳ ನಡುವೆ ಹೆಚ್ಚು ಸ್ಥಳವನ್ನು ಬಿಡುವುದಿಲ್ಲ. ಇಲ್ಲಿ ಬರೆ ದಿರುವ ಫೋರ್ ಎಂಬ ಪದಕ್ಕೂ, ಥೌಸಂಡ್ಸ್ ಎಂಬ ಪದಕ್ಕೂ ನಡುವೆ ಎಷ್ಟು ಸ್ಥಳವನ್ನು ಬಿಟ್ಟಿದೆ ನೋಡು. ಹಾಗೆಯೇ ಕೆಳಗಡೆ ಬರೆದಿರುವ ಅಂಕಿಗಳ ಬಳಿಯೂ ಅಷ್ಟೇ. ಅಂಕಿಗಳಿಗೂ ಮತ್ತು ಪಕ್ಕದ ಗೆರೆಗೂ ನಡುವೆ ಎಷ್ಟು ಸ್ಥಳವಿದೆ. ಈ ನಡುವೆ ಎರಡು ಅಕ್ಷರಗಳನ್ನೂ ಒಂದು ಸೊನ್ನೆಯನ್ನೂ ಫೋರ್ಜರಿ ಮಾಡುವುದಕ್ಕೆ ಅವಕಾಶವಿರಲಿಲ್ಲವೇ?"

"ಚಕ್ ಬರೆದ ಗುಮಾಸ್ತ ಉದ್ದೇಶಪೂರ್ವಕವಾಗಿಯೇ ಹಾಗೆ ಅಕ್ಷರ ಗಳಿಗೂ ಮತ್ತು ಅಂಕಿಗಳಿಗೂ ನಡುವೆ ಸ್ಥಳವನ್ನು ಬಿಟ್ಟಿದ್ದಾನೆನ್ನುತ್ತೀರಾ ?"

"ನೀನು ಹೇಳಿರುವುದು ಆಗಿರಬಹುದು, ಅಥವಾ ಆಗದೇ ಇರಬಹುದು. ಆದರೆ ನಮ್ಮೆದುರಿಗೆ ಬಂದಿರುವ ವಿಷಯುಗಳು ಹೇಗೇಗೆ ಬಂದಿವೆಯೋ ಹಾಗೆ ಹಾಗೆಯೇ ಅವುಗಳನ್ನು ಸ್ವೀಕರಿಸುತ್ತೇವೆಂದಲ್ಲವೇ ನಾವು ಒಪ್ಪಿಕೊಂಡಿರು ವುದು. ಆ ಚಕ್ ನಾಲ್ಕು ಸಾವಿರಗಳದೆಂದು ಬ್ಯಾಂಕಿನವರು ಹೇಳುತ್ತಾರೆ. ಅದು ಸಾಚಾವೆಂದೂ ಅಭಿಪ್ರಾಯ ಪಡುತ್ತಾರೆ. ಅದರಿಂದ ನಾವೂ ಅಷ್ಟೇ ಇಟ್ಟುಕೊಳ್ಳಬೇಕು. . . . "

ವಿಷಯ ಎಲ್ಲೆಲ್ಲಿಗೋ ಹೋಯಿತು ಫೌಜೀಖಾ ಈರಾನಿಯು ಫೋರ್ಜರೀ ಮಾಡದೇ ಇದ್ದುದಕ್ಕೆ ಏನ. ಕಾರಣ ಹೇಳುತ್ತೀರಿ ?"

"ಆ ಮನುಷ್ಯ ನಲವತ್ತು ಸಾವಿರ ರೂಪಾಯಿಗಳನ್ನು ಹೊಡೆದು ಕೊಂಡು ಹೋಗಿದ್ದರೂ ಅಷ್ಟೇ ಅವನ ಉದ್ದೇಶವಾಗಿರಲಿಲ್ಲ. ನನ್ನನ್ನು ಕೇಳಿದರೆ ಹಣ ಹೊಡೆದುಕೊಂಡು ಹೋಗುವುದು ಅವನ ಉದ್ದೇಶವೇ ಆಗಿರ ಲಿಲ್ಲವೆಂದೂ, ಪ್ರಕಾಶನನ್ನು ಅಪರಾಧಿಯನ್ನಾಗಿ ಮಾಡಿ ಅವನಿಗೆ ತೊಂದರೆ ಯನ್ನು ಉಂಟುಮಾಡುವುದಕ್ಕಾಗಿಯೇ ಹೀಗೆ ಮಾಡಿದನೆಂದೂ ಹೇಳು ತ್ತೇನೆ. . . ."

ಕುಪ್ಪುಸ್ವಾಮಿ ಬೆರಗಾಗಿ ಚಲಂನ ಕಡೆ ನೋಡತೊಡಗಿದ.

"ಹೌದು. ಹಣವನ್ನು ಹೊಡೆದುಕೊಂಡು ಹೋಗುವುದಷ್ಟೇ ಉದ್ದೇಶ ವಾಗಿ ಉಳ್ಳವನು ಫೋರ್ಜರಿಯೋ ಮತ್ತೇನಾದರೂನೋ ಮಾಡಿ ಹಣ ತೆಗೆದುಕೊಂಡು ಹೊರಟು ಹೋಗುತ್ತಾನೆ. ಒಬ್ಬರಿಗೆ ಒಂದು ಕಾಣಿಸು ವುದು, ಮತ್ತೊಬ್ಬರಿಗೆ ಮತ್ತೊಂದು ಕಾಣಿಸುವುದು ಇಂತಹ ಮಾಯಾ ಜಾಲಗಳನ್ನು ನಿರ್ಮಿಸಲು ಅವನು ಯಕ್ಷಿಣಿಯವನಲ್ಲ. ಅದರಿಂದ ಅವನಿಗೆ ಪ್ರಯೋಜನವೂ ಇಲ್ಲ. ಅವನು ಮಾಡಿದ ಕೆಲಸ ಮತ್ತು ಅದರ ಪರಿಣಾಮ ವೇನೆಂಬುದನ್ನು ನೋಡೋಣ. ಅವನು ಒಂದು ಚಕ್ ತೆಗೆದುಕೊಂಡು ಬಂದು ಬ್ಯಾಂಕಿಗೆ ಕೊಟ್ಟ. ಆಗದು ನಾಲ್ಕುಸಾವಿರಗಳದಾಗಿಯೇ ಇತ್ತು. ಪ್ರಕಾಶನ ಬಳಿಗೆ ಬಂದಾದ ನಲವತ್ತು ಸಾವಿರಗಳದಾಯಿತು. ಅವನು

ಅವಕ್ಕನುಸಾರವಾಗಿಯೇ ಪೇಮೆಂಟ್ ಮಾಡಿದ ಆಮೇಲೆ ಅದು ಪುನಃ ನಾಲ್ಕುಸಾವಿರಗಳದೇ ಆಯಿತು. . . . ."

"ಹಾಗಾದರೆ ಫೌಜೀಖಾ ಈರಾನಿಯು ರೇಸ್‌ಗೆ ಸಂಬಂಧಪಟ್ಟವ ನೆನ್ನುವುದಕ್ಕಿಂತಲೂ ಯಕ್ಷಣಿಯುವನೆನ್ನುವುದು ಸರಿಹೋಗುತ್ತದೆ."

"ಅದು ಹೇಗಾದರೂ ಇರಲಿ. ಅದರ ಪರಿಣಾಮವೇನಾಯಿತು. ಪ್ರಕಾಶ ಅಪರಾಧಿಯಾದ. ಇಷ್ಟೇ ಆದರೆ ಅವನು ಸಿಕ್ಕಿಕೊಳ್ಳುತ್ತಾನೆಯೋ ಇಲ್ಲವೋ ಎಂದುಕೊಂಡು ಆ ಅಪರಾಧವನ್ನು ಮತ್ತಷ್ಟು ಬಿಗಿ ಮಾಡಲು ತಾನು ತೆಗೆದುಕೊಂಡು ಹೋದ ನೋಟುಗಳಲ್ಲಿ ಕೆಲವನ್ನು ಪ್ರಕಾಶನಿಗೆ ತಿಳಿಯದಂತೆ ಅವನ ಜೇಬಿನಲ್ಲಿಟ್ಟ. ಅಂದರೆ ಇದನ್ನೆಲ್ಲಾ ಮಾಡುವುದಕ್ಕೆ ಮುಖ್ಯವಾದ ಕಾರಣವೆಂದರೆ ಪ್ರಕಾಶನನ್ನು ಅಪರಾಧಿಯಾಗಿ ಮಾಡಿ ಅವ ನನ್ನು ಜೈಲಿಗೆ ಕಳುಹಿಸುವುದೇ ಆಗಿದೆ."

"ಸರಿ. ಪ್ರಕಾಶನ ಮೇಲೆ ಫೌಜೀಖಾ ಈರಾನಿಗೆ ಹೊಟ್ಟೆಯುರಿ ಇರಲು ಕಾರಣವೇನು ?"

"ಅವನಿಗೆ ಹೊಟ್ಟೆಯುರಿ ಇರಬಹುದು. ಅಥವಾ ಮತ್ತಾರಿಂದ ಲಾದರೂ ನಿಯೋಜಿತನಾಗಿ ಈ ಕೆಲಸ ಮಾಡಿರಬಹುದು. ಅದೇನೆಂಬು ದನ್ನು ಕಂಡುಹಿಡಿಯುವುದೂ ನಮ್ಮ ಕೆಲಸವೇ ಆಗಿದೆ."

ಕುಪ್ಪುವು ಏನೂ ಮಾತನಾಡದೇ ಸುಮ್ಮನೆ ಕುಳಿತುಕೊಂಡ.

"ಯಾಕೆ ಕುಪ್ಪುಸ್ವಾಮಿ. ನಾನು ಹೇಳಿದುದು ನಿನಗೆ ಸಮಂಜಸ ವಾಗಿ ಕಂಡುಬರಲಿಲ್ಲವೇ ?"

"ಯಾವುದಾದರೊಂದು ವ್ಯಕ್ತಿಯು ತನಗೆ ಬೇಕಾದ ಕೆಲವು ಕ್ಷಣಗಳ ಕಾಲ ಮಾತ್ರ ಚಕ್ಕಿನ ಬರವಣಿಗೆಗಳು ಬದಲಾಯಿಸಲ್ಪಡುವಂತೆ ಮಾಡು ವುದು ಸಾಧ್ಯವೆಂಬುದನ್ನು ಮನಸ್ಸಿನಲ್ಲಿ ಯೋಚಿಸುವುದು ಸಹ ನನ್ನಿಂದ ಅಸಾಧ್ಯವಾಗಿದೆ "

ಚಲಂ ನಗುತ್ತಾ, "ಕಾಗದದ ಮೇಲೆ ಬರೆದಿಡುವುದು ಕೆಲವು ಕ್ಷಣ ಗಳು ಮಾತ್ರ ಬದಲಾವಣೆಯಾಗುವಂತೆ ಮಾಡುವುದು ಹೇಗೆಂಬುದನ್ನು ಕಂಡುಹಿಡಿಯುವುದೇ ನಮ್ಮ ಮುಂದಿರುವ ಸಮಸ್ಯೆಯಾಗಿದೆ" ಎಂದ.

ಎದ್ದು ನಿಂತುಕೊಂಡು ಚಲಂ ಆಕಳಿಸಿ ಮೈಮುರಿದ. ರಾತ್ರಿಯಿಂದ ಒಂದೇ ಸಮನಾಗಿ ಕುಳಿತುಕೊಂಡಿದ್ದ ಅವನಿಗೆ ಅದರಿಂದ ಬಹಳ ಸುಖವಾಗಿರ ಬೇಕು. ಕರೆನ್ಸೀ ನೋಟನ್ನೂ ಚಕ್ಕನ್ನೂ ತೆಗೆದುಕೊಂಡು ಒಳಗಡೆ ಹೊರಟ

ಬಾಯಲ್ಲಿ ಹೇಳದಿದ್ದರೂ ಪತ್ತೇದಾರನು ಏನು ಮಾಡಬಹುದೆಂಬುದರ ಬಗ್ಗೆ ಕುಪ್ಪುಸ್ವಾಮಿ ಊಹಿಸಿ ಅವನ ಹಿಂದೆಯೇ ಹೋದ. ಕುಪ್ಪುವಿನ ಊಹೆಯು ತಪ್ಪಾಗಲಿಲ್ಲ.

ಒಳಗಡೆ ಹಜಾರದಲ್ಲಿಯೇ ಚಲಂ ಮಲಗುತ್ತಿದ್ದುದು. ಅಲ್ಲಿ ಕಿಟಕಿಯ ಮಗ್ಗುಲಲ್ಲಿ ಮಂಚವೂ ಅದರ ಮೇಲೆ ಹಾಸಿಗೆಯೂ ಇದ್ದಿತು. ಅದರ ಮೇಲೆ ನಾಲ್ಕೈದು ಸುಖಾಸನಗಳನ್ನು ಹಾಕಿತ್ತು. ಸುಖಾಸನಗಳಷ್ಟೇ ಟೀಪಾಯಿಗಳು ಅವುಗಳಮೇಲೆ ಆಷ್‌ಟ್ರೇಗಳೂ ಇದ್ದುವು. ಅದಕ್ಕೆ ಎದು ರಾಗಿ ಒಳಗೆ ಪ್ರವೇಶಿಸುವ ಬಾಗಿಲಿನ ಮಗ್ಗುಲಾಗಿ ಉದ್ದವಾದುದೊಂದು ಮೇಜವನ್ನಿರಿಸಿದ್ದರು. ಅದರ ಮೇಲೆ ಕೆಲವು ಪುಸ್ತಕಗಳೂ ಟೇಬಲ್ ಲ್ಯಾಂಪೂ ಇದ್ದವು. ಸಿಗರೇಟು ಬೆಂಕೀಪಟ್ಟಣ, ಹ್ಯಾಟು, ಓದುವ ಪುಸ್ತಕ ಮುಂತಾಗಿ ಕೂಡಲೇ ಕೈಗೆ ಸಿಕ್ಕಬೇಕಾದ ಪದಾರ್ಥಗಳನ್ನು ಅಲ್ಲಿಡು ತಿದ್ದ. ಮನೆಯ ಕೆಲಸಗಾರನಾಗಲೀ, ಮತ್ತಾರೇ ಆಗಲಿ ಆ ಮೇಜ ವನ್ನು ಮುಟ್ಟಬಾರದೆಂದು ಕಟ್ಟಪ್ಪಣೆಯಾಗಿತ್ತು. ಯಾವಾಗಲಾದರೊಮ್ಮೆ ಚಲಮ್ಮೇ ಆ ಮೇಜನ್ನು ಸರಿಮಾಡುತ್ತಿದ್ದ. ಆಗ ಒಂದು ಮೊರದಷ್ಟು ಕಸ ಅದರ ಮೇಲೆ ಸಿಕ್ಕುತ್ತಿತ್ತು. ಆ ಮೇಜದ ಮುಂದೆ ಪ್ರತ್ಯೇಕವಾಗಿ ಮೂರು ಕುರ್ಚಿಗಳನ್ನು ಇಡಲಾಗಿತ್ತು. ಕೆಲವು ಬಾರಿ ಅವುಗಳಲ್ಲಿ ಒಂದರ ಮೇಲೆ ಕುಳಿತು ಟೇಬಲ್ ಲ್ಯಾಂಪ್ ಎಳೆದುಕೊಂಡು ಓದುತ್ತಾ ಕುಳಿತಿರುವ ಚಲಂ ನನ್ನು ಅವನ ಮನೆಗೆ ಹೋಗುವವರು ನೋಡಬಹುದಾಗಿತ್ತು.

ಆಫೀಸು ಕೋಣೆಯಿಂದ ಹೊರಟ ಚಲಂ ಒಳಗೆ ಬಂದು ಉದ್ದವಾದ ಮೇಜುವಿನ ಮುಂದಿದ್ದ ಕುರ್ಚಿಗಳಲ್ಲಿ ಒಂದರಮೇಲೆ ಕುಳಿತುಕೊಂಡು ಮೇಜುವಿನ ಕೆಳಗಿನ ಟ್ರಂಕಿನಲ್ಲಿದ್ದ ಡಬ್ಬಿಯನ್ನು ತೆಗೆದ. ಬೂದಿಯಂತಿದ್ದ ಪುಡಿಯನ್ನು ನೋಟಿನ ಮತ್ತು ಚಕ್‌ನ ಮೇಲೆ ಉದುರಿಸಿದ. ಸ್ವಲ್ಪ

ಹೊತ್ತು ಬಿಟ್ಟುಕೊಂಡು ಪುಡಿ ಕೆಳಗೆ ಉದುರಿಸಲು ಅವುಗಳ ಮೇಲೆ ಅನೇಕ ಕೈಬೆರಳ ಗುರುತುಗಳು ಕಂಡುಬಂದವು.

ಅದನ್ನೇ ಸ್ವಲ್ಪ ಹೊತ್ತು ನೋಡುತ್ತಿದ್ದು ತೃಪ್ತನಾಗಿ ದೀರ್ಘ ನಿಶ್ವಾಸವನ್ನು ಬಿಟ್ಟ.

ಆ ಸಮಯದಲ್ಲಿ ತನಗೆ ಸಮೀಪದಲ್ಲಿ ನಿಂತಿದ್ದ ಕುಪ್ಪುಸ್ವಾಮಿಯನ್ನು ನೋಡಿದ.

"ಕುಪ್ಪುಸ್ವಾಮಿ, ನಾನು ರಾತ್ರಿಯಿಂದ ಮಾಡಿದ ಆಲೋಚನೆಗಳು ಎಷ್ಟು ಸರಿಹೋದುವು ಎನ್ನುತ್ತೀಯೋ ?"

ಕೈಬೆರಳ ಗುರುತುಗಳನ್ನು ಕುಪ್ಪುಸ್ವಾಮಿಯೂ ನೋಡಿದ್ದರೂ, ಚಲಂನಷ್ಟು ಅವನಿಗೆ ಅರ್ಥವಾಗಿರಲಿಲ್ಲ. ಅದರಿಂದ ಏನು ಎಂಬಂತೆ ಪತ್ತೇದಾರನ ಕಡೆಗೆ ನೋಡಿದ.

"ನೋಡು, ಈ ಕರೆನ್ಸೀ ನೋಟಿನ ಮೇಲೆ ಕೆಲವು ಕೈಬೆರಳ ಗುರುತುಗಳು ಕಂಡುಬರುತ್ತವೆ. ಮೊನ್ನೆಯ ದಿನ ರಾತ್ರಿ ಇಬ್ರಾಹಿಂ ಸಾಹೇಬರು ಪ್ರಕಾಶನ ಜೇಬಿನಿಂದ ಕರೆನ್ಸೀ ನೋಟುಗಳನ್ನು ತೆಗೆದರಷ್ಟೇ. ಅವುಗಳಲ್ಲಿ ಮೇಲಿನ ನೋಟು ನೋಡುತ್ತಿದ್ದಾಗ ಅದರ ಮೇಲೆ ಎಣ್ಣೆಯ ಕೈಯಿಂದ ಆದ ಕೆಲವು ಕೈಬೆರಳ ಗುರುಗಳು ಕಂಡುಬಂದವು. ಅದರಿಂದಲೇ ಈ ನೋಟನ್ನು ಅವರಿಂದ ತೆಗೆದುಕೊಂಡು ಬಂದೆ. ನಮಗೆ ಗೊತ್ತಿರುವಂತೆ ನಾನೂ, ಇಬ್ರಾಹಿಂ ಸಾಹೇಬರೂ ಇದನ್ನು ಮುಟ್ಟಿದ್ದೇವೆ. ಹಾಗೆಯೇ ನೋಟು ಯಾರ ಯಾರ ಕೈಗೆ ಹೋಗಿದೆಯೋ, ಅವರೆಲ್ಲರೂ ಮುಟ್ಟಿರಬಹುದು. ಆದರೆ ಯಾರ ಕೈಬೆರಳ ಗುರುತುಗಳೂ ಅದರ ಮೇಲೆ ಮೂಡದೇ ಈ ಕೈಬೆರಳ ಗುರುತುಗಳು ಮಾತ್ರವೇ ಅದರ ಮೇಲೆ ಮೂಡಲು ಕಾರಣವೇನು ? ಅದನ್ನು ಮುಟ್ಟಿದಾಗ ಆ ವ್ಯಕ್ತಿಯ ಕೈಬೆರಳುಗಳ ಮೇಲೆ ಎಣ್ಣೆಯ ಅಂಶವಿದ್ದಿರಬೇಕು. ಅದಿರಲಿ, ಇವುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸು. ಆ ವಕ್ತಿಯು ದೀರ್ಘವಾಗಿಯೂ, ಉದ್ದವಾಗಿಯೂ ಇರುವ ಸೂಕ್ಷ್ಮವಾದ ಕೈಬೆರಳುಗಳನ್ನೂ ಹೊಂದಿದೆ ಎಂದು ಹೇಳಬಹುದು. ಆ ವ್ಯಕ್ತಿ ಯಾರು ಎಂಬುದನ್ನು ಅನಂತರ ಪರಿಶೀಲಿಸೋಣ. ಈಗ ಸದ್ಯದಲ್ಲಿ ಅದೊಂದು ಅಪರಿಚಿತ ವ್ಯಕ್ತಿ ಎಂದಿಟ್ಟುಕೋ."

ಆ ಕೈಬೆರಳ ಗುರುತುಗಳನ್ನು ನೋಡಿ, ಆ ಮಾತುಗಳನ್ನು ನೋಡಿ, ಕುಪ್ಪುಸ್ವಾಮಿಗೆ ಆಶ್ಚರ್ಯವಾಯಿತು.

"ಕುಪ್ಪುಸ್ವಾಮಿ, ಇನ್ನು ಈ ಚೆಕ್ಕಿನ ಕಡೆ ನೋಡು. ಇದು ಗಟ್ಟಿಯಾದ ಕಾಗದದ ಮೇಲೆ ಮುದ್ರಿಸಿದ್ದರೂ ಆ ಕಾಗದವು ಗಾಜಿನಂತೆ ನಯ್ಯನಾಗಿಯೂ, ಹೊಳಪಾಗಿಯೂ ಇರುವುದು ಈ ಸಂದರ್ಭದಲ್ಲಿ ನಮಗೆ ಒದಗಿಬಂದ ದೈವದತ್ತ ಸಹಾಯದಿಂದ ಆಗಿದೆ. ಇದನ್ನು ಯಾರು ಯಾರು ಕೊಟ್ಟಿದ್ದಾರೆಯೋ ಅವರೆಲ್ಲರ ಕೈಬೆರಳ ಗುರುತುಗಳನ್ನೂ ಸಂಗ್ರಹಿಸಿದೆ. ಅವುಗಳು ಯಾವ ಯಾವುವು, ಯಾರ ಯಾರವು ಎಂದು ನಿರ್ದಿಷ್ಟವಾಗಿ ಹೇಳಲಾಗದೇ ಇದ್ದರೂ, ಅವುಗಳನ್ನು ಕುರಿತು ಕೆಲವು ಊಹಾಪೋಹಗಳನ್ನು ಮಾಡುವುದು ಸಾಧ್ಯವಿದೆ. ಸೂಕ್ಷ್ಮವಾಗಿ ಇವುಗಳನ್ನು ಪ್ರತ್ಯೇಕಿಸಿದರೆ ಹತ್ತು ಬಗೆಯ ಕೈಬೆರಳ ಗುರುತುಗಳಿವೆ.

ಚಲಂ ಪ್ರತ್ಯೇಕವಾಗಿ ಬೇರ್ಪಡಿಸಿ ತೋರಿಸಿದುದೆಲ್ಲವನ್ನೂ ನೋಡಿದ ನಂತರ ಕುಪ್ಪುಸ್ವಾಮಿಯು ಹೇಳಿದ.

"ಸಂತೆಯಲ್ಲಿ ಕಾಣುವ ಹೆಜ್ಜೆಯ ಗುರುತುಗಳಂತೆ ಇದರಲ್ಲಿ ಕಂಡು ಬರುವ ಬಗೆಬಗೆಯಾದ ಈ ಕೈಬೆರಳ ಗುರುತುಗಳನ್ನು ಪ್ರತ್ಯೇಕವಾಗಿ ಬೇರ್ಪಡಿಸುತ್ತಾ, ನೀವು ಏನನ್ನು ಸಾಧಿಸುವುದಕ್ಕೆ ಪ್ರಯತ್ನ ಪಡುತ್ತಿದ್ದೀರಿ?"

"ಸ್ವಲ್ಪ ತಡೆದುಕೋ. ತಾನು ಯಾರ ಯಾರ ಕೈಗಳನ್ನು ತಟಾಯಿಸಿದೆಯೋ ಅವರ ಕೈಬೆರಳ ಗುರುತುಗಳೆಲ್ಲವನ್ನೂ ಈ ಚೆಕ್ ಸಂಗ್ರಹಿಸಿದೆಯೆಂದು ನಾನು ಹೇಳಿಸಿದುದು ಜ್ಞಾಪಕವಿದೆ ತಾನೇ. ಇದು ಯಾರ ಯಾರ ಕೈದಾಟಿ ಬಂದಿದೆ ಎಂಬುದನ್ನು ಊಹಿಸಲು ಪ್ರಯತ್ನ ಮಾಡೋಣ. ಮಹಮುದಾಲಿಯದು ಮತ್ತು ಅವನ ಗುಮಾಸ್ತನದು, ಬ್ಯಾಂಕಿನ ಮ್ಯಾನೇಜರು, ಲೆಡ್ಜರ್ ಕ್ಲಾರ್ಕು ಮತ್ತು ಅಕೌಂಟೆಂಟ್ ಶ್ರೀಧರನದು, ಪ್ರಕಾಶನದು ಮತ್ತು ಬ್ಯಾಂಕ್ ಜವಾನ ಕೆಂಪಯ್ಯನದು. ಇನ್ನು ಮೂರು ಬಗೆಯ ಕೈಬೆರಳ ಗುರುತುಗಳಿವೆ. ಇದು ನನ್ನ ಕೈಬೆರಳಿನಿಂದಾದ ಗುರುತುಗಳು. ಇವು ಇಬ್ರಾಹಿಂ ಸಾಹೇಬರದಿರಬೇಕು. ದಪ್ಪವೂ, ಒರಟಾಗಿ ಕಂಡುಬರುವಂತಹವೂ ಆದ ಅವರ ಕೈಬೆರಳುಗಳನ್ನು ನೀನು ನೋಡಿದ್ದೀಯಲ್ಲಾ. ಸರಿ, ಇನ್ನು ಉಳಿದಿರುವುದು ಒಂದೇ ಒಂದು ಬಗೆಯ ಕೈಬೆರಳ ಗುರುತುಗಳು.

ಇವು ದೀರ್ಘವಾಗಿಯೂ, ಉದ್ದವಾಗಿಯೂ ಇದ್ದು ನಾವು ನೋಟಿನ ಮೇಲೆ ಕಂಡ ಅಪರಿಚಿತ ವ್ಯಕ್ತಿಯ ಕೈಬೆರಳ ಗುರುತುಗಳಾಗಿವೆ."

"ನೀವು ಇನ್ನೊಬ್ಬ ಮುಖ್ಯವಾದ ವ್ಯಕ್ತಿಯ ಹೆಸರನ್ನು ಬಿಟ್ಟುಬಿಟ್ಟಿರಿ.- ಚಕ್ಕನ್ನು ಘಾಜೀಖಾನ್ ಈರಾನಿಯೂ ಮುಟ್ಟಿದ್ದಾನೆ. ಇದರ ಮೇಲೆ ಅವನ ಕೈಬೆರಳ ಗುರುತುಗಳೂ ಇರಬೇಕು."

"ಸರಿಯಾಗಿ ಹೇಳಿದೆ. ಅವು ಘಾಜೀಖಾನ್ ಈರಾನಿಯದೇ. ಅವನೇ ಪ್ರಕಾಶನ ಜೇಬಿನಲ್ಲಿ ಅವನಿಗೆ ತಿಳಿಯದಂತೆ ಕೆಲವು ಕರೆನ್ಸೀ ನೋಟುಗಳನ್ನು ಇಟ್ಟ ಅಪರಿಚಿತ ವ್ಯಕ್ತಿ."

ಕುಪ್ಪುಸ್ವಾಮಿಯು ಅತ್ಯಂತ ಉತ್ಸಾಹದಿಂದ "ಓಹೋ ಈಗ ಗೊತ್ತಾಯಿತು. ಈ ಬಗೆಬಗೆಯಾದ ಕೈಬೆರಳ ಗುರುತುಗಳು ಘಾಜೀಖಾನ್ ಈರಾನಿಯನ್ನು ತೋರಿಸಿಕೊಡುತ್ತದೆಂದು ನಾನು ಸರ್ವಥಾ ನಿರೀಕ್ಷಿಸಿರಲಿಲ್ಲ. ಈಗ ಬಹುಮಟ್ಟಿಗೆ ಈ ಕೇಸು ಪತ್ತೆಯಾದಂತೆಯೇ ಆಯಿತು ಎಂದು ತೋರುತ್ತದೆ. ಈರಾನಿಯನ್ನು ನೋಡಿದವರು ಹಲಸರಿದ್ದಾರೆ. ಸ್ವಲ್ಪ ಪ್ರಯತ್ನ ಪಟ್ಟರೆ ಅವನನ್ನು ಹುಡುಕುವುದಕ್ಕಾಗುತ್ತದೆ. ಅವನನ್ನು ಹಿಡಿದರೆ ಎಲ್ಲವನ್ನೂ ಅವನ ಬಾಯಿಂದಲೇ ಹೊರಡಿಸಬಹುದು." ಎಂದ.

ಚಲಂ ನಗುತ್ತಾ "ಸಾಧ್ಯವಿಲ್ಲ. ಶನಿವಾರದ ದಿನ ಮಧ್ಯಾಹ್ನ ಎರಡು ಗಂಟೆಯ ಒಳಗಾಗಿಯೇ ಘಾಜೀಖಾನ್ ಈರಾನಿಯ ಅವತಾರವು ಪರಿಸಮಾಪ್ತಿಯಾಯಿತು." ಎಂದ.

ಮತ್ತಷ್ಟು ವಿಸ್ಮಯದಿಂದ "ಹಾಗಾದರೆ ಆ ವ್ಯಕ್ತಿ ಸತ್ತುಹೋದನೇ? ಇಷ್ಟೊಂದು ಅನ್ಯಾಯವನ್ನು ಮಾಡಿದರೂ ಶಿಕ್ಷೆಯನ್ನು ತಪ್ಪಿಸಿಕೊಂಡನೇ? ಅವನು ಸತ್ತಿದ್ದಾನೆಂಬುದು ನಿಮಗೆ ಹೇಗೆ ಗೊತ್ತಾಯಿತು?" ಎಂದು ಕೇಳಿದ.

"ಘಾಜೀಖಾನ್ ಈರಾನಿಯು ಅವತಾರ ಪರಿಸಮಾಪ್ತಿಯೆಂದು ಹೇಳಿದೆನೇ ವಿನಾ ಅವನು ಸತ್ತುಹೋದನೆಂದು ಹೇಳಲಿಲ್ಲ. ಯಾವುದೋ ವ್ಯಕ್ತಿ ಆ ವೇಷ ಹಾಕಿಕೊಂಡು, ಆ ಹೆಸರನ್ನಿಟ್ಟುಕೊಂಡು ಕೆಲವು ಗಂಟೆಗಳ ಕಾಲ ಓಡಿಯಾಡಿದ. ಆನಂತರ ಅದನ್ನು ತೆಗೆದುಹಾಕಿದ.

"ಅದನ್ನು ಹೇಗೆ ನಿಖರವಾಗಿ ಹೇಳುತ್ತೀರಿ?"

"ನಾನು ಹೇಳಬೇಕಾಗಿಲ್ಲ. ಕರೆನ್ಸೀ ನೋಟಿನ ಮೇಲಿರುವ ಎಣ್ಣೆಯಿಂದಾಗಿರುವ ಕೈಬೆರಳ ಗುರುತುಗಳೇ ಹೇಳುತ್ತವೆ. ಈ ನೋಟುಗಳು ಪ್ರಕಾಶನ ಜೇಬಿನಲ್ಲಿ ಶನಿವಾರದ ದಿನ ಎರಡೂವರೆ ಗಂಟೆಯ ಒಳಗಾಗಿ ಇಡಲ್ಪಟ್ಟವು. ಅದು ಹೇಗೆಂಬುದನ್ನು ಆಮೇಲೆ ಹೇಳುತ್ತೇನೆ. ಅಂತೂ ಹಾಗೆ ಇಟ್ಟುಕೋ. ಹನ್ನೊಂದೂಕಾಲು ಗಂಟೆಯ ಸಮಯದಲ್ಲಿ ಟವನ್ ಬ್ಯಾಂಕಿಗೆ ಚೆಕ್ ಕೊಟ್ಟು ಹಣ ತೆಗೆದುಕೊಂಡು ಹೋದ. ಚೆಕ್ಕಿನ ಮೇಲೆ ಎಣ್ಣೆಯಿಂದಾದ ಕೈಬೆರಳ ಗುರುತಿಲ್ಲ. ಅಂದರೆ ಹನ್ನೊಂದೂವರೆಯ ಮೇಲೆ ಎರಡೂವರೆ ಗಂಟೆಯ ಒಳಗೆ ಅವನ ಕೈಗಳು ಎಣ್ಣೆಯನ್ನು ಮುಟ್ಟಿದ್ದವು. ಸಾಧಾರಣವಾಗಿ ಅವನು ಎಣ್ಣೆಯನ್ನು ಮುಟ್ಟಬೇಕಾದ ಪ್ರಮೇಯವೆಲ್ಲಿ ಬಂದಿರಬೇಕು? ಆ ವ್ಯಕ್ತಿಯು ವೇಷಧಾರಣೆ ಮಾಡಿಕೊಂಡಿದ್ದನೆಂದೂ, ಅದನ್ನು ತೆಗೆಯುವಾಗ ಎಣ್ಣೆಯನ್ನು ಉಪಯೋಗಿಸಿದನೆಂದೂ, ಅನಂತರ ನೋಟುಗಳನ್ನು ಮುಟ್ಟಿದುದರಿಂದ ಅದರ ಮೇಲೆ ಎಣ್ಣೆಯ ಅಂಶವನ್ನು ಒಳಗೊಂಡ ಕೈಬೆರಳ ಗುರುತಾಯಿತೆಂದೂ ಹೇಳುತ್ತೇನೆ."

"ಹಾಗಾದರೆ ಫಾಜೀಖಾನ್ ಈರಾನಿಯ ವೇಷಧಾರಿಯು ಸಿಕ್ಕುವುದು ಕಷ್ಟವೆಂದು ಹೇಳುತ್ತೀರಾ?"

"ಇಲ್ಲ, ಅವನು ನನ್ನ ಕೈಲೇ ಇದ್ದಾನೆ. ಅವನಾರು ಎಂದು ತಿಳಿದುಕೊಳ್ಳಲು ಸ್ವಲ್ಪವೂ ಕಷ್ಟವಿಲ್ಲ. ಹಾಗೆ ತಿಳಿದುಕೊಂಡನಂತರ ಅವನನ್ನು ಹಿಡಿಯುವುದು ಎಷ್ಟು ಹೊತ್ತು? ಅದಕ್ಕಿಂತ ಮೊದಲು ಬಿಡಿಸಬೇಕಾದ ಎರಡು ಸಮಸ್ಯೆಗಳಿವೆ. ಒಂದು ಪ್ರಕಾಶನಿಗೆ ತೊಂದರೆಯುಂಟುಮಾಡಬೇಕೆಂದು ಇಷ್ಟೊಂದು ಪ್ರಯತ್ನಗಳನ್ನು ಮಾಡಿದಂತಹ ವ್ಯಕ್ತಿ ಯಾರು, ಅವನಿಗೆ ಅಷ್ಟು ದ್ವೇಷ ಉಂಟಾಗಲು ಕಾರಣವೇನೆಂಬುದು. ಎರಡನೆಯದು ಕೆಲವು ಕ್ಷಣಗಳು ಮಾತ್ರ ಈ ಚೆಕ್ ನಲವತ್ತು ಸಾವಿರ ರೂಪಾಯಿಗಳದಾಗಿ ಕಂಡುಬರುವುದು ಹೇಗೆ ಸಾಧ್ಯವಾಯಿತೆಂದು."

ಚಲಂ ಎದ್ದು ಹೊರಡಲು ಸಿದ್ಧನಾಗಿ "ಕುಪ್ಪುಸ್ವಾಮಿ, ನೀನೆಲ್ಲಿಯೂ ಹೋಗಬೇಡ. ಎಷ್ಟೇ ಹೊತ್ತಾಗಲಿ, ನಾನು ಬರುವವರೆಗೆ ಇಲ್ಲಿಯೇ ಇರು." ಎಂದ.

"ಹುಂ, ಇರುತ್ತೇನೆ." ಎಂದು ಹೇಳಿದನಾದರೂ ಎಲ್ಲಿ ಹೋಗುತ್ತೀರಿ – ಎಂಬಂತೆ ಕುಪ್ಪುಸ್ವಾಮಿ ಚಲಂ ಕಡೆಗೆ ನೋಡಿದ.

"ಈಗ ಮೊದಲು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಹೋಗಿ ಪ್ರಕಾಶನನ್ನು ನೋಡಿಕೊಂಡು ಬರುತ್ತೇನೆ. ಅವನ ಮೇಲೆ ಯಾರಿಗಾದರೂ ದ್ವೇಷ ಉಂಟಾಗಲು ಕಾರಣವೇನೆಂದೂ, ಆ ವ್ಯಕ್ತಿ ಯಾರೆಂದೂ ತಿಳಿದುಕೊಂಡು ಬರುತ್ತೇನೆ."

"ಅಲ್ಲಿಗೆ ಇನ್ನೂ ಒಂದು ಕೆಲಸ ಉಳಿಯಿತಲ್ಲ."

"ಹುಂ, ಉಳಿಯಿತು. ಅದಕ್ಕಾಗಿ ಮತ್ತೊಂದು ರಾತ್ರಿ ನಿದ್ದೆ ಗೆಡಬೇಕೆಂದು ತೋರುತ್ತದೆ."

## ೧೩

ಚಲಂ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ಬಂದಾಗ ಇಬ್ರಾಹಿಂ ಸಾಹೇಬರಾಗಲೀ, ರಾಜಶೇಖರಪ್ಪನಾಗಲೀ ಇರಲಿಲ್ಲ. ದಫೇದಾರ್ ಕಾಳಯ್ಯನನ್ನು ಕರೆದು ತಾನು ಜರೂರಾಗಿ ಪ್ರಕಾಶನನ್ನು ನೋಡಬೇಕಾಗಿದೆ ಎಂದು ಹೇಳಿದ.

ಇನ್‌ಸ್ಪೆಕ್ಟರ ಮೇಲೆ ಪತ್ತೇದಾರನಾಗಿದ್ದ ಪ್ರಭಾವವನ್ನು ಅರಿತಿದ್ದ ಕಾಳಯ್ಯ "ಸಾರ್, ಬೀಗದ ಕೈಯಂತೂ ಮೇಜದ ಡ್ರಾಯರಿನಲ್ಲಿದೆ. ಆದರೆ ಯಾರೂ ಆ ಕೋಣೆಯ ಬಾಗಿಲನ್ನು ತೆಗೆಯಬಾರದೆಂದು ಇನ್‌ಸ್ಪೆಕ್ಟರ್ ಸಾಹೇಬರು ಹೇಳಿದ್ದಾರೆ. ನೀವು ಜವಾಬ್ದಾರಿ ತೆಗೆದುಕೊಂಡು ಅವರಿಗೆ ಹೇಳುವುದಾದರೆ ಬಾಗಿಲನ್ನು ತೆರೆಯುವುದಕ್ಕೆ ನನ್ನ ಅಡ್ಡಿಯೇನೂ ಇಲ್ಲ." ಎಂದ.

ಇಬ್ರಾಹಿಂ ಸಾಹೇಬರು ಏನಾದರೂ ಹೇಳಿದರೆ, ತಾನು ನೋಡಿಕೊಳ್ಳುವುದಾಗಿ ಚಲಂ ಭರವಸೆಯನ್ನು ಕೊಟ್ಟ ಮೇಲೆ ಕಾಳಯ್ಯ ಆ ಕೋಣೆಯ ಬಾಗಿಲು ತೆರೆದ.

ಪ್ರಕಾಶ್ ಚಾಪೆಯ ಮೇಲೆ ಉತ್ಸಾಹರಹಿತನಾಗಿ ಕುಳಿತಿದ್ದ. ಅವನ

ಮುಖಮ್ಲಾನವಾಗಿತ್ತು. ಚಲಂನನ್ನು ನೋಡಿದೊಡನೆಯೇ ಅವನ ಮುಖ ಸ್ವಲ್ಪ ಕಳೆಗೂಡಿತು.

ಚಲಂ ಅಲ್ಲಿ ಕುಳಿತುಕೊಂಡು ಮಾತನಾಡುವುದನ್ನು ಆರಂಭಿಸುವುದರಲ್ಲಿ ಪ್ರಕಾಶ್ "ನನ್ನ ಕೆಲಸವೇನಾದರೂ ಮುಂದುವರಿಯುತ್ತಿದೆಯೇ? ನಾನೇನಾದರೂ ಇಲ್ಲಿಂದ ಹೊರಗೆ ಬರುವ ಸಂಭವವಿದೆಯೇ?" ಎಂದು ಕೇಳಿದ.

"ನಿಮ್ಮ ಕೆಲಸ ಬಹಳ ಮುಂದುವರಿದಿದೆ, ಪ್ರಕಾಶ್. ಆದರೆ ಈಗಲೇ ವಿವರಗಳನ್ನೇನೂ ಹೇಳುವಂತಹ ಸ್ಥಿತಿಯಲ್ಲಿಲ್ಲ. ನೀವು ನಿರಪರಾಧಿಗಳೆಂಬುದು ನನಗೆ ಚೆನ್ನಾಗಿ ಮನವರಿಕೆಯಾಗಿದೆ. ಅದನ್ನು ಕ್ಷಿಪ್ರದಲ್ಲಿಯೇ ಸಾಬೀತು ಮಾಡುತ್ತೇನೆ. ಅಲ್ಲಿಯವರೆಗೆ ಸ್ವಲ್ಪ ಅವಕಾಶವನ್ನು ಕೊಡಿರಿ."

ಸಂತೋಷದ ಭರದಲ್ಲಿ ಪ್ರಕಾಶನ ಬಾಯಿಂದ ಮಾತೇ ಹೊರಡಲಿಲ್ಲ.

"ನಿನ್ನ ಮೇಲೆ ದ್ವೇಷ ಸಾಧನೆ ಮಾಡುವಂತಹವರು ಯಾರೆ"ಂಬುದನ್ನು ಕೇಳುವುದಕ್ಕಾಗಿಯೇ ಚಲಂ ಬಂದಿದ್ದುದು ಹಠಾತ್ತನೆ ಆ ಪ್ರಶ್ನೆಯನ್ನು ಕೇಳಿಬಿಟ್ಟರೆ ಪ್ರಕಾಶ ಗಾಬರಿಯಾಗಬಹುದೆಂದೂ, ಏನಾದರೂ ಮಾತನಾಡುತ್ತಿದ್ದು, ಅನಂತರ ಆ ಮಾತು ಕೇಳಬೇಕೆಂದೂ ನಿರ್ಧರಿಸಿದ.

"ಪ್ರಕಾಶ್, ಮೊನ್ನೆಯ ದಿನ ಫಾಜೀಖಾನ್ ಈರಾನಿಯು ನಿಮ್ಮ ಬ್ಯಾಂಕಿಗೆ ಬಂದು ಹಣವನ್ನು ಪಡೆದುಕೊಂಡು ಹೋದನಷ್ಟೇ. ಆ ಸಂದರ್ಭದಲ್ಲಿ ನಡೆದುದೆಲ್ಲವನ್ನೂ ನೆನೆಸಿಕೊಂಡು ಹೇಳಿದರೆ ನನಗೆ ಎಷ್ಟೋ ಸಹಾಯವಾಗುತ್ತದೆ."

"ನನಗೆ ಗೊತ್ತಿರುವುದನ್ನೆಲ್ಲಾ ಹೇಳಿಯೇ ಇದ್ದೇನಲ್ಲಾ."

"ಹೇಳಿದ್ದೀರಿ. ಆದರೆ ನೆನಪಿಗೆ ಬರದೇ ನುಣಿಚಿಕೊಂಡು ಹೋಗಿರುವ ವಿಷಯಗಳೆಷ್ಟೋ ಇರುತ್ತವೆ, ನೋಡಿ. ಫಾಜೀಖಾನ್ ಈರಾನಿಯು ಮೊನ್ನೆಯ ದಿನ ನಿಮ್ಮ ಬ್ಯಾಂಕಿಗೆ ಬಂದನಲ್ಲ. ಅವನು ಒಳಗೆ ಬಂದವನೇ ನಿಂತುಕೊಂಡು ಸುತ್ತಲೂ ನೋಡಿದ ಎಂದು ನಿನ್ನೆಯ ದಿನ ಬೆಳಗಾಗ ನೀವು ಹೇಳಿದಿರಿ. ಆ ಸಮಯದಲ್ಲಿ ಅವನು ನಿಮ್ಮ ಕಡೆಗೇ ನೋಡಿದನೋ?"

"ಹುಂ, ನೋಡಿದ. ಆಗ ಹೆಚ್ಚಾಗಿ ಬ್ಯಾಂಕಿಗೆ ಹೋಗಿ ದುಡ್ಡು ತೆಗೆದುಕೊಂಡ ಅಭ್ಯಾಸವಿಲ್ಲದವನಂತೆ ಕಂಡುಬಂದ. ಅವನು ನನ್ನ ಕಡೆ

ನೋಡಿದ್ದರಲ್ಲಿ ನನ್ನ ಕೌಂಟರಿನ ಬಳಿಗೇ ಬಂದು ಚೆಕ್ ಕೊಟ್ಟು ಹಣ ಕೇಳು ತ್ತಾನೆಯೋನೋ ಎಂದುಕೊಂಡೆ"

"ಆಮೇಲೆ ಏನು ಮಾಡಿದ?"

"ಎದುರುಗಿದ್ದ ಕೌಂಟರುಗಳಲ್ಲಿ ಒಂದರ ಬಳಿಗೆ ಹೋಗಿ ಚೆಕ್ ಎಲ್ಲಿ ಕೊಡಬೇಕೆಂದು ಕೇಳಿದ. ಅವನಿಗೆ ಹೆಚ್ಚಾಗಿ ಬ್ಯಾಂಕಿಗೆ ಬಂದು ಅಭ್ಯಾಸ ವಿಲ್ಲವೆಂದುಕೊಂಡುದು ಸರಿಹೋಯಿತು – ಎಂದು ಭಾವಿಸಿದೆ. ಅನಂತರ ಅಕೌಂಟೆನವರು ಕರೆಂಟ್ ಅಕೌಂಟ್‌ನ ಲೆಡ್ಜರ್ ಕ್ಲಾರ್ಕ್ ಬಳಿ ಕಳಿಸಿದರು ಎಂದು ತೋರುತ್ತದೆ. ಅಲ್ಲಿ ಚೆಕ್ ಕೊಟ್ಟು ಟೋಕನ್ ತೆಗೆದುಕೊಂಡ."

"ಅನಂತರ ಅಲ್ಲಿಯೇ ನಿಂತುಕೊಂಡಿದ್ದನೋ?"

"ಇಲ್ಲ, ಕ್ಯಾಷ್ ಕೌಂಟರಿಗೆ ಎದುರಾಗಿ ಒಂದು ಬೆಂಚ್ ಹಾಕಿದೆ. ಅಲ್ಲಿ ಕಾಯುತ್ತಾ ಕುಳಿತಿದ್ದ."

"ಅಲ್ಲಿ ಏನು ಮಾಡುತ್ತಾ ಕುಳಿತುಕೊಂಡಿದ್ದ?"

"ರೇಸ್ ಬುಕ್ ತೆಗೆದು ನೋಡುತ್ತಾ ಪೆನ್ಸಿಲ್‌ನಲ್ಲಿ ಗುರುತು ಮಾಡು ತ್ತಿದ್ದ. ಗೆಲ್ಲಬಹುದಾದ ಕುದುರೆಗಳನ್ನು ಗುರುತು ಮಾಡುತ್ತಿದ್ದಾನೆಂದು ತೋರುತ್ತದೆ. ಆ ಇನ್ನೊಂದು ವಿಷಯ ಮರೆತುಬಿಟ್ಟೆ. ಈರಾನಿ ಚುಟ್ಟಾ ಸೇದುತ್ತಿದ್ದನಷ್ಟೇ. ಅದು ಸರಿಯಾಗಿ ಉರಿಯುತ್ತಿರಲಿಲ್ಲ. ಹೊಸ ಚುಟ್ಟಾ ಹಚ್ಚಿಕೊಂಡ."

"ಇನ್ನೂ ಅವನು ಏನು ಮಾಡಿದನೆಂಬುದನ್ನು ಜ್ಞಾಪಕ ಮಾಡಿ ಕೊಂಡು ಹೇಳಿರಿ...."

"ಉಹುಂ. ಅವನು ಇನ್ನೇನೂ ಮಾಡಿದಂತೆ ಕಂಡುಬರಲಿಲ್ಲ. ಜವಾನ ಕೆಂಪಯ್ಯ ಬಂದು ಕರೆಯುವವರೆವಿಗೆ ಅಲ್ಲಿಯೇ ಕುಳಿತುಕೊಂಡಿದ್ದ."

"ಅಲ್ಲಿಂದಲೇ ಮುಖ್ಯವಾಗಿ ನನಗೆ ಪ್ರತಿಯೊಂದು ವಿಷಯವೂ ಬೇಕಾ ಗಿರುವುದು. ಕೈಯಾಡಿಸಿದ್ದು, ತಲೆ ತಿರುಗಿಸಿದ್ದು, ಕಣ್ಣು ಮಿಟುಕಿಸಿದ್ದು ಯಾವುದನ್ನೂ ಬಿಡದೇ ನಿಮಗೆ ಜ್ಞಾಪಕವಿರುವುದನ್ನೆಲ್ಲಾ ಹೇಳಿ."

"ಮ್ಯಾನೇಜರ್‌ರ ಕೋಣೆಯಿಂದ ಚೆಕ್ ತೆಗೆದುಕೊಂಡು ಕ್ಯಾಷ್ ಕೌಂಟರಿನ ಕಡೆಗೆ ಬರುತ್ತಿದ್ದ ಕೆಂಪಯ್ಯ ಈರಾನಿಯನ್ನು ಉದ್ದೇಶಿಸಿ "ಬನ್ನಿ ಸ್ವಾಮಿ, ಇದರ ಮೇಲೆ ಇಂಗ್ಲಿಷ್‌ನಲ್ಲಿದೆಯಂತೆ. ರುಜು ಮಾಡಿ ಎಂದ.

ಕೆಂಪಯ್ಯ ಚೆಕ್ಕನ್ನು ತಿರುಗಿಸಿ ಈರಾನಿಯು ರುಜು ಮಾಡುವುದಕ್ಕಾಗಿ ಕ್ಯಾಷ್ ಕೌಂಟರಿನ ಹಲಗೆಯ ಮೇಲೆ ಇಟ್ಟ. ಆ ವೇಳೆಗೆ ಈರಾನೀ ಅಲ್ಲಿಗೆ ಬಂದ. ಇನ್ನಿಬ್ಬರು ಕ್ಯಾಷ್ ಪಡೆಯಲು ಅಲ್ಲಿ ನಿಂತಿದ್ದರು. ಅಲ್ಲಿ ಸಾಕಷ್ಟು ಜಾಗ ವಿರಲಿಲ್ಲವೆಂದು ಕಾಣುತ್ತದೆ. ಚೆಕ್ ಎಳೆದುಕೊಳ್ಳಲು ಹೋದ. ಅದು ಕೆಳಗೆ ಬಿದ್ದುಹೋಯಿತು. ಕೆಳಗೆ ಬಗ್ಗಿ ಅವನೇ ಚೆಕ್ಕನ್ನು ಮೇಲೆ ತೆಗೆದ. ಅವರ ಮೇಲೆ ಇಂಗ್ಲಿಷ್‌ನಲ್ಲಿ ರುಜು ಮಾಡಿದ ಕೆಂಪಯ್ಯ ಆ ಚೆಕ್ ತೆಗೆದು ಕೌಂಟರಿನ ಒಳಗಡೆ ಹಾಕಿ ಹೊರಟುಹೋದ. ಟೋಕನ್ ತೆಗೆದುಕೊಂಡು ಹಣ ಕೊಟ್ಟೆ."

"ಸರಿ, ಪ್ರಕಾಶ್. ಈ ಈರಾನಿಯು ನೋಡುವುದಕ್ಕೆ ಯಾರ ಹಾಗಿದ್ದಾನೆಂದು ಹೇಳಬಲ್ಲಿರಾ?"

"ಇಲ್ಲ. ನನಗೆ ಪರಿಚಯವಿರುವ ಯಾವ ವ್ಯಕ್ತಿಗಳಂತೆಯೂ ಅವನಿಲ್ಲ."

"ಅವನು ಎಷ್ಟು ಎತ್ತರವಿರಬಹುದು?"

"ನಾಲ್ಕೂವರೆ ಅಡಿಗಳಿರಬಹುದು."

"ಅದೇನು ಅಷ್ಟು ನಿಖರವಾಗಿ ಹೇಳುತ್ತೀರಿ?"

"ನಮ್ಮ ಬ್ಯಾಂಕಿನ ಕೌಂಟರುಗಳ ಮುಂದೆ ಮೇಜದ ಹಾಗೆ ಜೋಡಿಸಿರುವ ಹಲಗೆಯು ನಾಲ್ಕು ಅಡಿಗಳ ಎತ್ತರವಾಗಿದೆ. ಅದರ ಹತ್ತಿರ ಅವನು ಬಂದು ನಿಂತುಕೊಂಡಾಗ ಕೊರಳಿನಿಂದ ಸ್ವಲ್ಪ ಭಾಗ ಮಾತ್ರವೇ ಕಂಡುಬರುತ್ತಿದ್ದುದು. ಅವನು ನಿಸ್ಸಂದೇಹವಾಗಿ ಕುಳ್ಳ. ನಾಲ್ಕೂವರೆ ಅಡಿಗಳಿಗಿಂತ ಎತ್ತರವಾಗಿಲ್ಲ. ಅದರಿಂದಲೇ ಕೌಂಟರಿನ ಮೇಲಿಟ್ಟ ಚೆಕ್ಕಿನ ಮೇಲೆ ಸರಿಯಾಗಿ ರುಜು ಮಾಡಲಾರದೇ ಅದನ್ನು ಕೆಡವಿಕೊಂಡನೆಂದು ಕಾಣುತ್ತದೆ."

"ನೀವು ಗುಲಾಬ್‌ಚಂದರನ್ನು ನೋಡಿದ್ದೀರಲ್ಲಾ, ಅವರ ಎತ್ತರ ವೆಷ್ಟಿರಬಹುದು?"

"ಅದೇನು, ಅದಕ್ಕೂ ಇದಕ್ಕೂ ಸಂಬಂಧವೇನು?"

"ಸಂಬಂಧವಿಲ್ಲದಂತಹ ಎಷ್ಟೋ ವಿಷಯಗಳನ್ನು ಕೇಳುತ್ತೇವೆ ಪ್ರಕಾಶ್. ಪತ್ತೇದಾರರಾದ ನಮಗೆ ನಿರರ್ಥಕವಾದ ಅಂಶಗಳಿಂದಲೂ ಎಷ್ಟೋ ಪ್ರಯೋಜನವಿರುತ್ತದೆ."

''ಆತ ಐದೂವರೆ ಅಡಿಗಳಿಗೆ ಕಡಿಮೆಯಿಲ್ಲದ ಮನುಷ್ಯ. ಎತ್ತರವಾದ ಆಳುಗಳಲ್ಲಿಯೇ ಜಮಾ ಆಗುವಂತಹವರು. ಬೆಳ್ಳಗೆ ನೀಳವಾಗಿದ್ದ ದೇಹ, ಲಕ್ಷಣವಾಗಿದ್ದಾರೆ.''

''ಸರಿ, ರೇಸ್‌ಗೆ ಸಂಬಂಧಪಟ್ಟ ಕೆಲವು ಮಂದಿ ನಿಮಗೆ ಸ್ನೇಹವೆಂದು ಎಲ್ಲರೂ ಹೇಳುತ್ತಾರೆಯಲ್ಲಾ. ಅಂತಹ ಸ್ನೇಹಿತರು ಯಾರು ಯಾರು ?"

ಪ್ರಕಾಶ್ ಸ್ವಲ್ಪ ಹೊತ್ತು ಯೋಚನೆ ಮಾಡಿ ''ಒಂದಿಷ್ಟು ಜನ ಜಾಕಿಗಳೂ ಮತ್ತು ಕುದುರೆಯ ಮಾಲೀಕರೂ ಪರಿಚಯವಿದ್ದಾರೆ ಆದರೆ ಅವರೆಲ್ಲರನ್ನೂ ಸ್ನೇಹಿತರೆಂದು ಹೇಳುವುದಕ್ಕೆ ಆಗುವುದಿಲ್ಲ. ಮೂರು ಮಂದಿಯದು ಮಾತ್ರ ಬಹಳ ಸ್ನೇಹವಿದೆ. ಲತಾದೇವಿ ಮತ್ತು ಆಕೆಯ ತಂದೆ ಗುಲಾಬ್‌ಚಂದರು ನನಗೆ ಚೆನ್ನಾಗಿ ಪರಿಚಯವೆಂದು ನಿಮಗೆ ಗೊತ್ತೇ ಇದೆಯಲ್ಲಾ. ಇನ್ನೊಬ್ಬರು ವಹಿದಾ ಬೇಗಂರವರು.'' ಎಂದ.

''ವಹಿದಾ ಬೇಗಂ ಯಾರು ?"

''ಆಕೆ ಇಂತಹವರೆಂದು ಹೇಗೆ ಹೇಳಲಿ. ಸಾಧಾರಣವಾಗಿ ಅವರಿಗೆ ರೇಸಿಂಗ್ ವರ್ತುಲಗಳಲ್ಲಿ ಬಹಳ ಪರಿಚಯವಿದೆ. ನಾನೆಂದುಕೊಂಡಿರುವಂತೆ ಆಕೆ ಎಲ್ಲೆಲ್ಲಿ ರೇಸ್ ನಡೆಯುತ್ತದೆಯೋ ಅಲ್ಲೆಲ್ಲಾ ಹೋಗುತ್ತಿರುತ್ತಾರೆ. ಸಾಧಾರಣವಾಗಿ ಪ್ರತಿ ದಿನವೂ ರೇಸ್ ಆಡುತ್ತಾರೆ. ಅದರಿಂದಲೇ ಅವರಿಗೆ ಜೀವನವೆಂದು ತೋರುತ್ತದೆ.''

"ಸರಿಯಾಗಿ ಜ್ಞಾಪಿಸಿಕೊಂಡು ಹೇಳಿ. ಅವರು ನಿಮಗೆ ಪರಿಚಯವಾದುದು ಹೇಗೆ ?''

''ನಾನು ಈ ಬಾರಿಯ ಎಲ್ಲ ರೇಸ್ ಮೀಟಿಂಗುಗಳಿಗೂ ಹೋಗುತ್ತಿರುವುದಾಗಿ ಹೇಳಿದೆನಲ್ಲ ಮೊದಲನೆಯ ದಿನ ಆಕೆ ರೇಸ್ ಕೋರ್ಸಿನಲ್ಲಿ ಓಡಿಯಾಡುತ್ತಿರುವುದನ್ನು ಗಮನಿಸಿದೆ. ಅನಂತರ ಎರಡು ಬಾರಿ ನಮ್ಮ ಬ್ಯಾಂಕ್‌ಗೆ ಕ್ಯಾಷ್ ಮಾಡಲು ಚೆಕ್‌ಗಳನ್ನು ತೆಗೆದುಕೊಂಡು ಬಂದಿದ್ದರು. ರೇಸ್ ಕೋರ್ಸ್‌ನಲ್ಲಿ ನಾವುಗಳು ಪರಸ್ಪರ ನೋಡಿದುದಾಗಿ ಗುರ್ತಿಸಿದರೂ ಸಹ ಮಾತನಾಡಲಿಲ್ಲ. ನಾನು ಎರಡನೆಯ ಮೀಟಿಂಗ್‌ಗೆ ಹೋದಾಗ ಮೂರನೆಯ ರೇಸ ನಲ್ಲಿಯೋ, ನಾಲ್ಕನೆಯ ರೇಸ್‌ನಲ್ಲಿಯೋ ಬಂದು ''ಯಾವ ಕುದುರೆಗೆ ಆಡುತ್ತಿದ್ದೀರಿ ?''ಎಂದು ಕೇಳಿದರು. ನಾನು ಹೇಳಿದೆ. ''ಅದು

ಫೇವರಿಟ್ ಹಾರ್ಸ್." "ನಾನು ಒಳ್ಳೆಯ ಕುದುರೆ ಕೊಡುತ್ತೇನೆ. ಆಡು ತ್ತೀರಾ ?" ಎಂದರು. ಒಪ್ಪಿಕೊಂಡೆ. ಅದರಂತೆಯೇ ಅವರೊಂದು ಕುದುರೆ ಯನ್ನು ಕೊಟ್ಟರು, ಆಡಿದೆ. ಚೆನ್ನಾಗಿ ಹಣ ಬಂದಿತು. ಅದೇ ನನಗೂ ಆಕೆಗೂ ನಡೆದ ಪ್ರಥಮ ಸಂಭಾಷಣೆ. ಹಾಗೆಯೇ ನನಗೆ ಆಕೆಯ ಪರಿಚಯವಾದುದು. ನನಗೆ ರೇಸಿಂಗ್ ವರ್ತುಲಗಳಲ್ಲಿರುವ ಪರಿಚಯಕ್ಕೆಲ್ಲಾ ಆಕೆಯೇ ಕಾರಣ ವೆಂದು ಹೇಳಬಹುದು. ಲತಾದೇವಿಯವರ ಪರಿಚಯವನ್ನು ಮಾಡಿಸಿದವರೂ ಅವರೇ. ಆಗಾಗ ಅವರು ಆಡುವುದಕ್ಕೆ ಒಳ್ಳೆಯ ಕುದುರೆಗಳನ್ನು ಕೊಡುತ್ತಲೇ ಇದ್ದಾರೆ."

ತನಗೆ ಬೇಕಾದ ಎಲ್ಲ ವಿವರಗಳೂ ತಿಳಿಯಿತೆಂಬುವಂತೆ ಚಲಂ ಪ್ರಫುಲ್ಲವದನನಾಗಿ "ಇದುವರೆವಿಗೂ ನಿಮಗೆ ಸ್ನೇಹಿತರಾದವರ ವಿಷಯವನ್ನು ಕೇಳಿ ತಿಳಿದುಕೊಂಡಂತೆ ಆಯಿತು. ಈಗ ಆಗದವರ ವಿಷಯವನ್ನು ಕೇಳೋಣ. ನಿಮಗೆ ಆಗದವರೂ, ನಿಮ್ಮ ಸರ್ವನಾಶವನ್ನು ಅಪೇಕ್ಷಿಸು ವವರು ಯಾರಾದರೂ ಇದ್ದಾರೇನು ?" ಎಂದು ಕೇಳಿದ.

ಈ ಕಡೆಯಿಂದ ಆ ಕಡೆಯವರೆವಿಗೆ ತಲೆಯಾಡಿಸುತ್ತಾ "ಇಲ್ಲ. ನನಗೆ ಯಾವ ದ್ವೇಷಿಗಳೂ ಇಲ್ಲ. ನಾನು ಯಾರಿಗೆ ತಾನೇ ಯಾವ ಅನ್ಯಾಯ ವನ್ನು ಮಾಡಿದ್ದೇನೆ ?" ಎಂದ ಪ್ರಕಾಶ.

"ಉಹುಂ, ಸ್ವಲ್ಪ ಆಲೋಚನೆ ಮಾಡಿ ಹೇಳಿ. ನಿಮಗೆ ಅಲ್ಲದಿದ್ದರೆ ನಿಮ್ಮ ಕುಟುಂಬಕ್ಕೆ ಆಗದವರು ಇರಬಹುದಲ್ಲವೇ ?"

"ಇಲ್ಲ, ನನಗೆ ನೀವು ಹೇಳುವುದೇ ಅರ್ಥವಾಗುವುದಿಲ್ಲ. ನಮ್ಮ ಕುಟುಂಬಕ್ಕೆ ಆಗದವರೂ ಸಹ ಯಾರೂ ಇಲ್ಲವೆಂದೇ ನನ್ನ ಭಾವನೆ."

"ನಿಮ್ಮ ತಂದೆಯವರಿಗೆ ಆಗದವರು ಯಾರಾದರೂ ಇದ್ದಾರೇನು ?"

"ಈ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ. ನಮ್ಮ ತಂದೆ ಬ್ಯಾಂಕಿನ ಡೈರೆಕ್ಟರೆಂಬುದು ನಿಮಗೆ ಗೊತ್ತೇ ಇರಬಹುದು. ಬ್ಯಾಂಕಿನ ಡೈರೆಕ್ಟರು ಎಂದರೆ ಎಷ್ಟೋ ಮಂದಿ ಬಂದು ಎಷ್ಟೋ ಕೆಲಸಗಳಿಗೆ ಸಹಾಯವನ್ನು ಅಪೇಕ್ಷಿಸುತ್ತಾರೆ. ಬಂದು ಕೇಳಿದವರೆಲ್ಲರಿಗೂ ಸಹಾಯ ಮಾಡಲಾಗುವು ದಿಲ್ಲ. ಹೀಗೆ ಅನೇಕ ಜನರ ಮನಸ್ಸಿಗೆ ಬೇಜಾರಾಗಿರಬಹುದು."

"ಇಲ್ಲ, ನಾನು ಕೇಳುತ್ತಿರುವುದು ಅಸಾಧಾರಣವಾದ ವಿಷಯ ವೇನಲ್ಲ...."

"ಇನ್ನು ಅಸಾಧಾರಣವಾದ ವಿಷಯಗಳಾವುವೂ ಇದ್ದಂತೆ ನನಗೆ ಕಂಡು ಬರುವುದಿಲ್ಲ."

ಇದರ ಮೇಲೆ ಅವನನ್ನು ಕೇಳಿ ತಿಳಿದುಕೊಳ್ಳಬೇಕಾದ ಅಂಶಗಳು ಯಾವುವೂ ಇಲ್ಲವೆಂದೂ, ತಾನಿನ್ನು ಹೊರಡಬೇಕೆಂದೂ ಚಲಂ ಆಲೋಚನೆ ಮಾಡುತ್ತಿರುವಾಗ ಪ್ರಕಾಶ್ ಕೇಳಿದ.

"ನೀವು ಈ ದಿನ ಮೂರು ಅಂಶಗಳನ್ನು ಕೇಳಿದಿರಿ. ಒಂದು ಘಾಜೀ ಖಾನ್ ಈರಾನಿಯನ್ನು ಕುರಿತು, ಮತ್ತೊಂದು ವಹೀದಾ ಬೇಗಂರ ವಿಷಯ. ಇವರ ಬಗ್ಗೆ ನೀವು ಸಂದೇಹಗೊಂಡಿರುವುದು ಆಶ್ಚರ್ಯವೇ ಸರಿ. ಆದರೆ ಕಡೆಯದಾಗ ಕೇಳಿದ ಅಂಶವು ಅತ್ಯಂತ ವಿಸ್ಮಯವನ್ನು ಉಂಟು ಮಾಡುತ್ತದೆ."

"ಹೌದು ಪ್ರಕಾಶ್. ವಿಸ್ಮಯಕರವಾದ ಘಟನೆಗಳ ಹಿನ್ನೆಲೆಯು ವಿಸ್ಮಯಕರವಾಗಿಯೇ ಇರುತ್ತದೆ. ನನ್ನ ಮನಸ್ಸಿಗೆ ಬಂದಿರುವ ಅನೇಕ ವಿಷಯಗಳು ಇನ್ನೂ ಸಂದೇಹಕರವಾಗಿಯೇ ಇವೆ. ಅದರಿಂದ ಅವುಗಳ ನ್ನೆಲ್ಲಾ ನಿಮಗೆ ವಿವರಿಸಲು ಇಚ್ಛಿಸುವುದಿಲ್ಲ. ವಿವರಿಸಿದರೂ ಅದರಿಂದ ಪ್ರಯೋಜನವಿಲ್ಲ. ಆದರೆ ಒಂದು ವಿಷಯವನ್ನು ಮಾತ್ರ ಹೇಳಿರುತ್ತೇನೆ. ಯಾರಿಗೋ ಉಂಟಾಗಿರಬಹುದಾದ ಭಯಂಕರವಾದ ಅನ್ಯಾಯಕ್ಕೆ ಪ್ರತೀ ಕಾರರೂಪವಾಗಿಯೇ ನೀವಿಂದು ಈ ಕಷ್ಟ ಮತ್ತು ಅಪಕೀರ್ತಿಯನ್ನು ಅನು ಭವಿಸುತ್ತಿದ್ದೀರಿ."

## ೧೪

"ನಿಮ್ಮಿಂದ ಅಥವಾ ನಿಮ್ಮ ಕುಟುಂಬದಿಂದ ಯಾರಿಗೋ ಭಯಂಕರ ವಾದ ಅನ್ಯಾಯವಾಗಿದೆ. ಆ ದ್ವೇಷ ಸಾಧನೆಯ ಉದ್ದೇಶದಿಂದಲೇ ಯಾರೋ ನಿಮ್ಮ ಮಗನನ್ನು ಜೈಲಿಗೆ ಕಳಿಸುವಂತಹ ಹಂಚಿಕೆಯನ್ನು ಮಾಡಿದ್ದಾರೆ. ನೀವು ಮನಸ್ಸು ಮಾಡಿದರೆ ಅದೇನೆಂದು ಜ್ಞಾಪಕ ಮಾಡಿಕೊಂಡು ಹೇಳು ವುದು ಕಷ್ಟವಾಗಲಾರದು."

ಚಲಂ ಹೇಳಿದ ಮಾತುಗಳನ್ನು ಕೇಳಿದ ರಮಾನಂದ ಪೈಗಳ ಮುಖ್ಯ ವಿವರ್ಣವಾಯಿತು. ಆತ ಹೇಳಿದರು,

"ಚಲಂರವರೇ! ಪ್ರಕಾಶನು ನಿರಪರಾಧಿಯೆಂದು ನಿಮ್ಮ ಮನಸ್ಸಿಗೆ ಬಂದಿದೆ. ಅದನ್ನು ಸಾಬೀತು ಮಾಡುವುದಕ್ಕೆ ಆವಶ್ಯಕವಾದ ಕೆಲವು ಸಾಕ್ಷ್ಯಗಳು ಸಿಕ್ಕಿರುವುದಾಗಿ ಹೇಳುತ್ತೀರಿ. ಅವನನ್ನು ತೊಂದರೆಗೀಡು ಮಾಡಿದವರಾರೆಂದು ಪತ್ತೆ ಮಾಡಿ ಅವರಿಗೆ ಶಿಕ್ಷೆಯನ್ನು ಮಾಡಿಸಿದರೂ ಸರಿಯೆ, ಅದೂ ಸಹ ನನಗೆ ಮುಖ್ಯವಲ್ಲ. ನಮಗೆ ತೊಂದರೆಯನ್ನು ಮಾಡಿದವರು ನೋವು ಪಡಬೇಕೆಂಬುದು ನನ್ನ ಅಭಿಮತವಲ್ಲ. ಪಾಪ ಪುಣ್ಯಗಳೇನಿವೆಯೋ ಅದನ್ನು ಭಗವಂತನು ನೋಡಿಕೊಳ್ಳುತ್ತಾನೆ. ನಿಮಗೆ ಸಿಕ್ಕಿರುವ ಸಾಕ್ಷ್ಯಗಳಿಂದ ನಮ್ಮ ಹುಡುಗನ ನಿರಪರಾಧಿತ್ವವನ್ನು ಸಾಬೀತು ಮಾಡಿ ಅವನನ್ನು ಬಿಡುಗಡೆ ಮಾಡಿಸಿದರೆ ಅದೇ ನನಗೆ ಸಾಕು. ಅದಕ್ಕಾಗಿ ನೀವು ಏನು ಕೇಳಿದರೂ ಕೊಡಲು ತಯಾರಾಗಿದ್ದೇನೆ."

"ನಾನು ಕೇಳಿದ್ದು ಅದನ್ನಲ್ಲ. ನಿಮ್ಮಿಂದ ಅಥವಾ ನಿಮ್ಮ ಕುಟುಂಬ ದಿಂದ ಯಾರಿಗಾದರೂ ಅನ್ಯಾಯವಾಗಿದೆಯೇ? ಅಥವಾ ಯಾರಿಗಾದರೂ ನಿಮ್ಮ ಮೇಲೆ ದ್ವೇಷ ಉಂಟಾಗಲು ಕಾರಣವಿದೆಯೇ? ಹಾಗಿದ್ದರೆ ಅದೇನು ಪ್ರಸಂಗ, ಆ ವ್ಯಕ್ತಿ ಯಾರು? ಎಂದು"

"ನನಗೆ ಸರಿಯಾಗಿ ಜ್ಞಾಪಕವಿಲ್ಲ. ವ್ಯವಹಾರದಲ್ಲಿ ದ್ವೇಷಾಸೂಯೆ

ಗಳಿಗೆ ಎಷ್ಟೋ ಅವಕಾಶಗಳಿರುತ್ತದೆ. ನಮಗಾಗದವರು ಎಷ್ಟೋ ಜನರು ಇರುತ್ತಾರೆ. ಇಂತಹ ಪ್ರಸಂಗವೇ ಇಂತಹ ಜನವೇ ಎಂಬುದನ್ನು ಹೇಗೆ ಹೇಳಲಿ ?"

ಈ ಮನುಷ್ಯನಿಗೆ ಏನು ಹೇಳುವುದೆಂದು ತಿಳಿಯದೇ ಚಲಂ ಗಳಿಗೆಯ ಕಾಲ ಸುಮ್ಮನೆ ಕುಳಿತುಕೊಂಡ.

"ನಾನು ತಮ್ಮನ್ನು ಒಂದು ಮಾತು ಕೇಳಲೇ ?"

"ಒಂದೇಕೆ, ಹತ್ತು ಮಾತು ಕೇಳಿರಿ."

"ಯಾವುದಾದರೂ ಒಂದು ಅಪರಾಧವು ನಡೆಯುತ್ತದೆಂದು ಕೊಳ್ಳೋಣ. ವಿಷಯ ಗೋಚರವಾಗದೇ ಇದ್ದರೂ, ಸತ್ಯವಂತೂ ಇದ್ದೇ ಇರುತ್ತದೆಯಲ್ಲ. ಸಾಮಾನ್ಯರಾದ ನಮ್ಮಂತಹ ಜನದ ವಿಷಯ ಬಿಡಿ. ಬುದ್ಧಿವಂತರಾದ ನಿಮ್ಮಂತಹವರು ಅಗೋಚರವಾದ ಸತ್ಯವನ್ನು ಕಂಡುಹಿಡಿಯುವುದು ದೊಡ್ಡ ಮಾತೇನಲ್ಲ. ಹಾಗೆ ನಮ್ಮ ಹುಡುಗನ ಮೇಲೆ ಬಂದಿರುವ ಅಪಕ್ರಾಂತಿಯನ್ನು ಕಳೆಯುವುದು ಸಾಧ್ಯವಿಲ್ಲವೇ ?"

ಚಲಂ ನಕ್ಕು "ಸಾಧ್ಯವಿದೆ. ಅಷ್ಟೇ ಅಲ್ಲ, ಈ ಅನ್ಯಾಯವನ್ನು ಯಾರು ಮಾಡಿದರು, ಯಾಕೆ ಮಾಡಿದರು ? ಎಂಬುದನ್ನು ಕಂಡುಕೊಳ್ಳುವುದೂ ಸಾಧ್ಯವಿದೆ. ಅದನ್ನು ಮಾಡಿಯೂ ಮಾಡುತ್ತೇನೆ. ಆದರೆ ನೇರವಾಗಿ ಕಂಡುಕೊಳ್ಳುವುದಕ್ಕೆ ದ್ರಾವಿಡ ಪ್ರಾಣಾಯಾಮವು ಯಾಕೆಂದು ನಿಮ್ಮನ್ನು ಕೇಳಿದೆ." ಎಂದ.

"ಚಲಂ ಅವರೇ ! ನೀವು ನಮ್ಮ ಹುಡುಗನನ್ನು ಬಿಡಿಸುವುದಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ಅಂದರೆ ನೀವು ನಮಗೆ ಪರಮಾಪ್ತರೆಂದಾಯಿತು. ಯಾವ ವಿಷಯವಿದ್ದರೂ ನಿಮ್ಮಂತಹವರೊಡನೆ ಹೇಳುವುದಕ್ಕೆ ಅಡ್ಡಿಯೇನಿದೆ ? ಆದರೆ ನೀವು ಸಂದೇಹ ಪಡುತ್ತಿರುವಂತೆ ಯಾವ ವಿಷಯವೂ ಇಲ್ಲ."

ಸಿಗರೇಟು ಹಚ್ಚಿಕೊಂಡು ಎದ್ದುನಿಂತು ಚಲಂ "ಸರಿ, ನಾನು ಬಂದ ಕೆಲಸವಾಗಲಿಲ್ಲ. ಇನ್ನು ಹೊರಡುತ್ತೇನೆ." ಎಂದು ಹೇಳಿದ.

ಅವನಿಗೆ ಅಸಮಾಧಾನವಾಯಿತೆಂದು ಕಂಡುಕೊಂಡ ಸೂಕ್ಷ್ಮಮತಿ

ಗಳಾದ ರಮಾನಂದ ಪೈಗಳು ಗೋಗರೆಯುವ ಧ್ವನಿಯಿಂದ "ಒಂದು ನಿಮಿಷ ಕುಳಿತುಕೊಳ್ಳಿ.'' ಎಂದ ಹೇಳಿ ಕೈಹಿಡಿದು ಕೂರಿಸಿದರು.

ಅನಂತರ "ನಮ್ಮ ಹುಡುಗನ ವಿಷಯ ಏನು ಮಾಡುತ್ತೀರಿ ? ಹೇಳಲೇ ಇಲ್ಲವಲ್ಲ.'' ಎಂದರು.

"ಆ ವಿಷಯದಲ್ಲಿ ನಾನೇನೂ ಮಾಡುವುದಕ್ಕೆ ಆಗುವುದಿಲ್ಲ. ನೀವೇನು ಮಾಡಿಕೊಳ್ಳುತ್ತೀರೋ ಮಾಡಿಕೊಳ್ಳಿ."

"ಅಯ್ಯೋ ! ಹೀಗೆ ನೀವು ಕೈಬಿಟ್ಟರೆ ನಮ್ಮ ಗತಿಯೇನು ?"

"ಇಲ್ಲ, ನಾನು ಆ ವಿಷಯದಲ್ಲಿ ತೀರ್ಮಾನ ಮಾಡಿಬಿಟ್ಟಿದ್ದೇನೆ.''

''ಹಾಗೆ ಹೇಳಬೇಡಿ ಚಲಂರವರೇ ! ನಾನು ಅವನಿಗೊಂದು ಮಾರ್ಗ ವನ್ನು ಮಾಡಬೇಕೆಂದಿದ್ದೆ. ನನ್ನ ಉದ್ದೇಶ ಸಫಲವಾಗಲಿಲ್ಲ...."

"ಏನು ?" ಎಂಬಂತೆ ಚಲಂ ಆತನ ಕಡೆಗೆ ನೋಡಿದ.

"ನಮ್ಮ ಪ್ರಕಾಶನನ್ನು ಹುಡುಗನಾಗಿದ್ದಾಗಿನಿಂದ ನೋಡುತ್ತಿದ್ದೇನೆ ಅವನು ಬುದ್ಧಿವಂತ ಆದರೆ ವ್ಯಾಪಾರ ಸಾಪಾರಕ್ಕೆ ಪ್ರಯೋಜನವಿಲ್ಲ. ನಾನು ಕಣ್ಣು ಮುಚ್ಚಿಕೊಳ್ಳುವುದರೊಳಗಾಗಿ ಬ್ಯಾಂಕ್‌ನಲ್ಲಿ ಅವನಿಗೊಂದು ಒಳ್ಳೆಯ ಕೆಲಸ ಮಾಡಿಸಬೇಕೆಂದು ತೀರ್ಮಾನಿಸಿದೆ. ಅದರಿಂದಲೇ ಅನುಭವವಾಗ ಲೆಂದು ಕೆಲಸ ಕಲಿಸುವುದಕ್ಕೆ ಸಹ ಏರ್ಪಾಟು ಮಾಡಿದೆ. ಕೆಲಸ ಕಲಿಯು ತ್ತಿರುವಾಗ ಇಂತಹ ದುರ್ಘಟ ಪ್ರಸಂಗವು ನಡೆಯಿತು. ನಿಮಗೆ ಹೇಳ ಬೇಕಾದ ಮುಖ್ಯವಾದ ವಿಷಯವೊಂದಿದೆ. ಮ್ಯಾನೇಜರುಗಳನ್ನು ಮೊದಲು ಗೊಂಡು ಬ್ಯಾಂಕ್ ನೌಕರರುಗಳವರೆವಿಗೆ ನಮ್ಮಂತಹವರ ಮೇಲೆ ಬಹಳ ಅಸೂಯೆ ಇರುತ್ತದೆ. ನಮ್ಮ ಹುಡುಗ ಮುಂದೆ ಬರುತ್ತಾನೆಯಲ್ಲ ಎಂದು ಯಾರಾದರೂ ಅಪಕ್ಖ್ಯಾತಿಯನ್ನು ಹಾಕಿ, ಅವನ ಭವಿಷ್ಯಕ್ಕೆ ಕಲ್ಲು ಹಾಕಿರ ಲಿಕ್ಕೆ ಸಹ ಸಾಕು. ಆದರೆ...."

ಆತನ ಮಾತು ಕೇಳಿ ಚಲಂ ನಕ್ಕ.

ರಮಾನಂದ ಪೈಗಳು "ಯಾಕೆ ನಗುತ್ತೀರಿ ಸ್ವಾಮಿ ? ನಾನು ಹೇಳ್ಳು ವುದು ಸರಿಯಲ್ಲವೆಂದೇ?" ಎಂದು ಕೇಳಿ, ತಮ್ಮ ಮಾತು ಮುಂದುವರಿಸುತ್ತಾ "ಮೊದಲು ಛಪಾವಣೆಯಾಗಿದೆ ಎಂಬ ವಿಷಯ ಕಿವಿಗೆ ಬಿದ್ದೊಡನೆಯೇ, ಅಕ ಸ್ಮಾತ್ ನಮ್ಮ ಹುಡುಗನೇ ಮಾಡಿದನೋ ಎಂಬ ಸಂದೇಹ ಬಂದು, ಮೂವ

ತ್ತಾರು ಸಾವಿರ ರೂಪಾಯಿಗಳನ್ನು ಕಟ್ಟಿಬಿಟ್ಟು ಹುಡುಗನನ್ನು ಬಿಡಿಸಿಕೊಳ್ಳು ವುದು ಎಂದು ಸಹ ಆಲೋಚನೆ ಮಾಡಿದೆ. ಅವನು ತಾನು ನಿರಪರಾಧಿ ಎಂದು ಹೇಳಿದ ಮೇಲೆ, ಏನಾದರೂ ಆಗಲಿ ಈ ವಿಷಯದಲ್ಲಿ ಹೊಡೆದಾ ಡಿಯೇ ನೋಡುವುದು ಅಂತ ಮನಸ್ಸನ್ನು ಗಟ್ಟಿಮಾಡಿದೆ. ನೀವೂ ಸಹ ಅವನು ನಿರಪರಾಧಿಯೆಂದೇ ಹೇಳುತ್ತೀರಿ. ಈಗ ನಾನು ಹೇಳುವ ಮಾತು ಕೇಳಿ. ಬ್ಯಾಂಕಿಗೆ ಕಟ್ಟಿಬಿಡುತ್ತೇನೆಂದುಕೊಂಡಿದ್ದ ಮೂವತ್ತಾರು ಸಾವಿರ ರೂಪಾಯಿಗಳನ್ನು ನಿಮಗೇ ಕೊಟ್ಟುಬಿಡುತ್ತೇನೆ. ನೀವು ದೊಡ್ಡ ಮನಸ್ಸಿ ನಿಂದ ಸಹಾಯ ಮಾಡಿ. ನಮಗಿರುವವನು ಒಬ್ಬನೇ ಮಗ. ಅವನನ್ನು ನಮಗುಳಿಸಿದಂತೆ ಆಗುವುದಲ್ಲದೇ, ಹುಡುಗನ ಭವಿಷ್ಯವನ್ನು ಕಾಪಾಡಿದಂತೆ ಆಗುತ್ತದೆ. ನಿರಪರಾಧಿಯೆಂದು ಸಾಬೀತಾದರೆ ನನ್ನ ಉದ್ದೇಶದಂತೆ ಬ್ಯಾಂಕಿ ನಲ್ಲಿ ಅವನಿಗೆ ಒಳ್ಳೆಯ ಉದ್ಯೋಗ ದೊರಕುವುದರಲ್ಲಿ ಸಂದೇಹವಿಲ್ಲ." ಎಂದರು.

"ನೀವು ಹೇಳುವಂತೆ ಈ ದುರ್ಘಟನೆಗೆ ಬ್ಯಾಂಕ್ ನೌಕರರ ದ್ವೇಷಾ ಸೂಯೆಗಳು ಕಾರಣವಲ್ಲ. ಬ್ಯಾಂಕ್ ನೌಕರರಿಗೂ ಈ ಪ್ರಸಂಗಕ್ಕೂ ಸಂಬಂಧವೇ ಇಲ್ಲ. ಇನ್ನೊಂದು ವಿಷಯ ತಿಳಿದುಕೊಳ್ಳಿರಿ. ನಿಮ್ಮ ಬೆಂಗಳೂರು ಬ್ರಾಂಚಿನ ಮ್ಯಾನೇಜರ್ ಆನಂದರಾಯರು ನಿಮ್ಮ ಹುಡುಗನು ಲಾಕಪ್ಪಿನಿಂದ ಹೊರಗೆ ಬರಲು ಎಷ್ಟು ಸಹಾಯವನ್ನು ಮಾಡಬೇಕಾಗಿದ್ದರೂ ತಯಾರಾಗಿದ್ದಾರೆ. ವೃಥಾರೋಪಗಳನ್ನು ಮಾಡಬೇಡಿರಿ."

"ಹುಂ, ಯಾವುದು ಎಲ್ಲಿಯಾದರೂ ಹೋಗಲಿ, ನಮ್ಮ ಹುಡುಗನನ್ನು ಬಿಡಿಸಿಕೊಡಿರಿ...."

"ಪೈಗಳೇ! ನಾನು ಎಷ್ಟು ಹೇಳಿದರೂ ನೀವು ಅರ್ಥಮಾಡಿಕೊಳ್ಳುವು ದಿಲ್ಲ. ಈಗ ನಿಮ್ಮ ಹುಡುಗ ನಾಲ್ಕು ಸಾವಿರ ರೂಪಾಯಿಗಳ ಚೆಕ್‌ಗೆ ನಲ ವತ್ತು ಸಾವಿರ ರೂಪಾಯಿಗಳನ್ನು ಕೊಟ್ಟನೆಂದು ತಾನೇ, ಅವನ ಮೇಲೆ ಆಪಾದನೆ ಬಂದಿರುವುದು. ಅದು ಹೇಗಾಯಿತೆಂದು ಹೇಳುತ್ತೇನೆ ಕೇಳಿರಿ – ಈರಾನಿ ಎಂಬಾತನು ಚೆಕ್ ತಂದನಷ್ಟೇ. ಅದು ನಾಲ್ಕು ಸಾವಿರಗಳದು. ಲೆಡ್ಜರ್ ಕ್ಲಾರ್ಕು ಮತ್ತು ಮ್ಯಾನೇಜರು, ಅದು ನಾಲ್ಕು ಸಾವಿರಗಳ ಚೆಕ್ಕೆಂದು ಬರೆದುಕೊಂಡು ಪಾಸುಮಾಡಿದುದು ಸರಿ. ಆದರೆ ಅದು ನಿಮ್ಮ

ಹುಡುಗನ ಕೈಗೆ ಬರುವ ವೇಳೆಗೆ ನಲವತ್ತು ಸಾವಿರಗಳದಾಯಿತು. ಪ್ರಕಾಶ ಹಾಗೆಯೇ ಹಣ ಕೊಟ್ಟ. ಮತ್ತೆ ಸ್ವಲ್ಪ ಹೊತ್ತಿನಲ್ಲಿಯೇ ಅದು ನಾಲು ಸಾವಿರಗಳ ಚೆಕ್ ಆಯಿತು."

ರಮಾನಂದ ಪೈಗಳು ಬಾಯಿ ಬಿಟ್ಟುಕೊಂಡು "ಹಾಗಾಗುವುದ್ಕ ಸಾಧ್ಯವೇ? ಹಾಗಾದರೆ ಇನ್ನು ಮುಂದೆ ನಾವುಗಳು ಬ್ಯಾಂಕುಗಳನ್ನು ಮುಚ್ಚಬೇಕಾಗುತ್ತದೆ." ಎಂದರು.

"ಹೆದರಿಕೊಳ್ಳಬೇಡಿ. ಬ್ಯಾಂಕುಗಳನ್ನು ಮುಚ್ಚುವ ಸಂದರ್ಭ ಬರುವುದಿಲ್ಲ. ಪ್ರಪಂಚದಲ್ಲಿರುವವರೆಲ್ಲರೂ ಮೋಸಗಾರರಲ್ಲ."

"ಅದು ಸರಿಯೆನ್ನಿ. ಎಲ್ಲರೂ ಮೋಸಗಾರರೇ ಆದರೆ ಪ್ರಪಂಚದಲ್ಲಿ ಮಳೆ ಬೆಳೆಗಳು ಹೇಗಾದಾವು?"

"ಅದಿರಲಿ, ಹಾಗಾದುದು ನಿಜವೆಂದು ಇಟ್ಟುಕೊಳ್ಳಿ. ಇಂದಲ್ಲ ನಾಳೆಯಾದರೂ, ಅಥವಾ ಇನ್ನೊಂದು ತಿಂಗಳಿಗಾದರೂ ಯಾವ ತಂತ್ರದಿಂದ ಹಾಗೆ ಮಾಡಿದ್ದಾರೆಂಬದನ್ನು ಪತ್ತೆ ಹಚ್ಚುತ್ತೇನೆ."

"ಹೂ, ಈಗ ಅರ್ಥವಾಯಿತು. ಅದರಿಂದಲೇ ಪ್ರಕಾಶ್ ತಾನು ನಿರಪರಾಧಿಯೆಂದು ಹೇಳುತ್ತಿರುವುದು."

"ಅದಾಯಿತಲ್ಲ, ಯಾವನೋ ಇಂತಹದೊಂದು ತಂತ್ರವನ್ನು ಮಾಡಿದ್ದಾನೆಂದುಕೊಳ್ಳೋಣ. ಅದನ್ನೇಕೆ ಮಾಡಿದ?"

"ಗೊತ್ತೇ ಇದೆಯಲ್ಲಾ. ನಾಲ್ಕು ಸಾವಿರಗಳ ಚೆಕ್‌ನ ಮೇಲೆ ನಲವತ್ತು ಸಾವಿರಗಳನ್ನು ಲಪಟಾಯಿಸಿಕೊಂಡು ಹೋಗಲು."

"ಸ್ವಲ್ಪ ತಡೆಯಿರಿ. ಅಲ್ಲಿಯೇ ನೀವು ಜಾರುತ್ತಿರುವುದು. ಕೇವಲ ಹಣವನ್ನು ಮಾತ್ರ ಲಪಟಾಯಿಸಿಕೊಂಡು ಹೋಗುವುದು ಅವನ ಉದ್ದೇಶವಾಗಿದ್ದಿದ್ದರೆ, ನಾಲ್ಕು ಎಂದಿದ್ದುದನ್ನು ನಲವತ್ತು ಎಂದು ತಿದ್ದಿ ಫೋರ್ಜರಿ ಮಾಡಬಹುದಾಗಿದ್ದಿತಲ್ಲ. ಮಹಮದಾಲಿಯ ಲೆಕ್ಕದಲ್ಲಿ ಐದಾರು ಲಕ್ಷ ರೂಪಾಯಿಗಳಿದ್ದವು. ಚೆಕ್ ಸುಲಭವಾಗಿ ಕ್ಯಾಷ್ ಆಗುತ್ತಿತ್ತು. ಅಪರಾಧಿಯು ಹಾಗೇಕೆ ಮಾಡಲಿಲ್ಲ?''

ರಮಾನಂದ ಪೈಗಳಿಗೆ ಇನ್ನೂ ವಿಷಯ ಅರ್ಥವಾಗಿರಲಿಲ್ಲವೋ, ಅರ್ಥವಾರೂ ಮಾತನಾಡುವ ಮನಸ್ಸಿರಲಿಲ್ಲವೋ ಸುಮ್ಮನೆ ಕುಳಿತುಕೊಂಡಿದ್ದರು.

"ಫೋರ್ಜರಿ ಮಾಡಿದ್ದರೆ ಹಣ ಸಿಕ್ಕುತ್ತಿದ್ದಿತೇ ವಿನಾ ಪ್ರಕಾಶನನು ಸಿಕ್ಕಿಸುವುದಕ್ಕಾಗುತ್ತಿರಲಿಲ್ಲ. ಅವರಿಗೆ ಅಪಮಾನ ಪಡಿಸಿ ಜೈಲಿಗೆ ಕಳಿಸುವುದು ಮಾತ್ರವೇ ಮುಖ್ಯ ಉದ್ದೇಶವಾಗಿತ್ತು. ಇಷ್ಟೇ ಅಲ್ಲ. ಆ ನೋಟುಗಳಲ್ಲಿ ಕೆಲವನ್ನು ಪ್ರಕಾಶನ ಜೇಬಿನಲ್ಲಿ ತಿಳಿಯದಂತೆ ಇಟ್ಟು, ಅವನ್ನು ಪೋಲೀಸರಿಗೆ ಸಿಕ್ಕಿಹಾಕಿಕೊಳ್ಳುವಂತೆ ಮಾಡಿದರು. ಈಗಲಾದರೂ ನಾನು ಹೇಳುತ್ತಿರುವುದೇನೆಂಬುದು ನಿಮ್ಮ ಮನಸ್ಸಿಗೆ ಬರುತ್ತಿದೆಯೇ?''

"ಬಂದಿತು ಸ್ವಾಮಿ. ನಾನು ಅದೇ ಕೇಳುತ್ತಿರುವುದು. ನಿರಪರಾಧಿಯಾದ ಹುಡುಗನ ಮೇಲೆ ಇಷ್ಟೆಲ್ಲಾ ಮಾಡಿದವರನ್ನು ಶಿಕ್ಷೆಗೆ ಗುರಿ ಮಾಡಬೇಡವೇ? ಅದಾದರೂ ಹೋಗಲಿ. ದುರಾತ್ಮರುಗಳ ಮೋಸಕ್ಕೆ ಒಳಗಾದ ನಿರಪರಾಧಿಯನ್ನು ಉಳಿಸಬೇಡವೇ?''

"ಉಳಿಸಬೇಕು. ಅದರಿಂದಲೇ ನಾನು ನಿಮ್ಮಲ್ಲಿಗೆ ಬಂದ ಕೂಡಲೇ ನಿಮ್ಮ ಮೇಲೆ ದ್ವೇಷವನ್ನು ಸಾಧಿಸುವಂತಹ ಛಲ ಯಾರಿಗಿದೆ ಹೇಳಿ ಎಂದು ಕೇಳಿದುದು."

ತಲೆಯ ಮೇಲೆ ಪೆಟ್ಟು ಬಿದ್ದ ಸರ್ಪವು ಮೆತ್ತಗಾದಂತೆ ಆದರೂ ರಮಾನಂದ ಪೈಗಳು.

"ಪೈಗಳೇ, ಹಾಗೆ ಛಲವನ್ನು ಸಾಧಿಸುತ್ತಿರುವ ವ್ಯಕ್ತಿ ಯಾರೆಂಬುದು ನಿಮಗೆ ಚೆನ್ನಾಗಿ ತಿಳಿದಿದೆ. ಯಾವುದೋ ಹಟದಿಂದ ಅದನ್ನು ಹೇಳಬಾರದೆಂದು ನಿರ್ಧರಿಸಿದ್ದೀರಿ. ನೀವು ಆ ರಹಸ್ಯವನ್ನು ಒಡೆದು ಹೇಳುವವರೆವಿಗೆ ನಿಮ್ಮ ಮಗನ ಮೇಲೆ ನಡೆದಿರುವ ಷಡ್ಯಂತ್ರವನ್ನು ಭೇದಿಸಲಾಗುವುದಿಲ್ಲ."

ಅಲ್ಲಿಗೂ ಪೈಗಳು ಮಾತನಾಡಲಿಲ್ಲ.

"ಅಂದರೆ ನಿಮ್ಮ ಮಗನಿಗಿಂತಲೂ ಆ ನಿಮ್ಮ ರಹಸ್ಯವು ದೊಡ್ಡದೇನು?"

"ನನ್ನ ಮಗನಿಗಿಂತಲೂ ದೊಡ್ಡದು ಈ ಪ್ರಪಂಚದಲ್ಲಿ ನನಗೆ ಯಾವುದೂ ಇಲ್ಲ. ಆದರೆ ನಾನು ಮಾಡಿರುವ ತಪ್ಪನ್ನು ನಾನೇ ಹೇಳಿಕೊಳ್ಳಲು ಬಾಯೇ ಬರುವುದಿಲ್ಲ."

"ಪೈಗಳೇ, ನಾನು ಪೋಲೀಸ್ ಅಧಿಕಾರಿಯಲ್ಲ. ಖಾಸಗೀ ಪತ್ತೇದಾರ. ನಿಮ್ಮಿಂದ ಏನು ತಪ್ಪಾಗಿದ್ದರೂ ಪರವಾಯಿಲ್ಲ. ಹೇಳಿರಿ.

ಸ್ಥಾನದನ್ನು ಯಾರೊಂದಿಗೂ ಹೇಳುವುದಿಲ್ಲ. ನಿಮ್ಮ ಮಗನನ್ನು ಉಳಿಸಲು ಎಷ್ಟು ಬೇಕೋ ಅಷ್ಟು ಮಾತ್ರ ಉಪಯೋಗಮಾಡಿಕೊಳ್ಳುತ್ತೇನೆ."

ಕ್ಷಣಕಾಲ ರಮಾನಂದಪೈಗಳು ಯೋಚನೆ ಮಾಡಿದರು. ಅವರು ಯಾವುದೋ ಒಂದು ನಿರ್ಧರಕ್ಕೆ ಬಂದರೆಂದು ಕಾಣುತ್ತದೆ. ಕೂಡಲೇ ಹೆಣದಂತೆ ಕಳಾರಹಿತವಾಗಿದ್ದ ಅವರ ಮುಖದಲ್ಲಿ ಪ್ರಕಾಶವು ಕಂಡಿತು.

"ಚಲಂ ಅವರೇ! ಪರಲೋಕವೊಂದಿದೆ ಎಂದೂ ಮನುಷ್ಯ ಮಾಡುವ ತಪ್ಪುಗಳಿಗೆ ಅಲ್ಲಿ ಶಿಕ್ಷೆಯಾಗುತ್ತದೆಂದೂ ಹೇಳುತ್ತಾರೆ. ಆದರೆ ತಾನು ಮಾಡುವ ತಪ್ಪುಗಳಿಗೆ ಶಿಕ್ಷೆಯನ್ನು ಇಹಲೋಕದಲ್ಲಿಯೇ ಮನುಷ್ಯ ಅನುಭವಿಸುತ್ತಾನೆಂದು ಹೇಳುವವರ ಮಾತೇ ಸತ್ಯವಾಗಿ ಕಂಡುಬರುತ್ತಿದೆ. ನಾನೊಂದು ದೊಡ್ಡ ತಪ್ಪು ಮಾಡಿದೆ. ಅದಕ್ಕಾಗಬೇಕಾಗಿದ್ದ ಶಿಕ್ಷೆಯನ್ನೂ ತಪ್ಪಿಸಿಕೊಂಡೆ. ನನಗೆ ಬದಲಾಗಿ ನನ್ನ ಮಗ ಆ ಶಿಕ್ಷೆಯನ್ನು ಅನುಭವಿಸಬೇಕಾದ ಗತಿಯು ಬಂದಿದೆ. ಇನ್ನೂ ಯುವಕನೂ, ನಿರಪರಾಧಿಯೂ ಆದ ಪ್ರಕಾಶನೇಕೆ ವಿನಾಕಾರಣವಾಗಿ ಶಿಕ್ಷೆಯನ್ನು ಅನುಭವಿಸಬೇಕು. ನನಗೆ ವಯಸ್ಸಾಗಿದೆ. ಇಹಲೋಕದಲ್ಲಿ ಒಂದು ಕಾಲಿದ್ದರೆ ಪರಲೋಕದಲ್ಲಿ ಮತ್ತೊಂದು ಕಾಲಿದೆ. ನಾನು ಮಾಡಿದ ತಪ್ಪಿಗೆ ನಾನೇ ಶಿಕ್ಷೆಯನ್ನು ಅನುಭವಿಸಲು ತಯಾರಾಗಿದ್ದೇನೆ. ಖಂಡಿತವಾಗಿ ಹೇಳುತ್ತೇನೆ ಈ ಘಟನೆಗೂ ನಾನು ಮಾಡಿರುವ ತಪ್ಪಿಗೂ ಸಂಬಂಧವಿಲ್ಲ. ನಾನು ಈ ಗಳಿಗೆಯೇ ಜೈಲಿಗೆ ಹೋಗಲು ಸಿದ್ಧ. ಆದರೆ ನನ್ನ ಮಗ ಪ್ರಕಾಶ ನಿರುಪಾದಿಕನಾಗಿ ಹೊರಗೆ ಬರುತ್ತಾನೆಂಬ ನಂಬಿಕೆಯೇನು?"

"ನಾನು ಸ್ವಲ್ಪ ಹೊತ್ತಿನ ಮೊದಲು ಹೇಳಿದ ಮಾತುಗಳನ್ನು ಮರೆತು ಬಿಟ್ಟಿರೆಂದು ಕಾಣುತ್ತದೆ. ನೀವೊಂದು ವೇಳೆ ಹೇಳದಿದ್ದರೂ ಸಹ ನಿಮ್ಮ ಮೇಲೆ ಛಲ ಮಾಡುತ್ತಿರುವ ವ್ಯಕ್ತಿಯನ್ನೂ ಅದರ ಕಾರಣವನ್ನೂ ಕಂಡು ಹಿಡಿಯುತ್ತೇನೆ. ಅದಕ್ಕೆ ಕಾಲಾವಕಾಶವು ಬೇಕಾಗಿಬರಬಹುದು." ಅಷ್ಟರಲ್ಲಿ ಆ ವ್ಯಕ್ತಿಯೇ ಜಾರಿಕೊಂಡರೆ ಗತಿಯೇನೆಂದು ಯೋಚಿಸುತ್ತಿದ್ದೇನೆ. ಅದರಿಂದಲೇ ನೇರವಾಗಿ ಬಂದು ವಿಷಯವನ್ನು ಹೇಳಿ ಎಂದುದು. ಪ್ರಕಾಶ ನಿರಪರಾಧಿಯೆಂದೂ ಅದನ್ನು ಸಾಬೀತುಮಾಡಲು ಬೇಕಾದ ಸಾಕ್ಷಿ ಪುರಾವೆ

ಗಳು ನನ್ನ ಬಳಿ ಇವೆ ಎಂದೂ ಪುನಃ ಹೇಳುತ್ತೇನೆ. ಅವನು ಬಿಡುಗಡೆ ಹೊಂದುವುದರಲ್ಲಿ ಸಂದೇಹವೇ ಇಲ್ಲ."

"ಹಾಗಾದರೆ ಹೇಳುತ್ತೇನೆ ಕೇಳಿರಿ. ನಾನು ಹೇಳುವುದು ಆರೇಳು ವರ್ಷಗಳ ಹಿಂದಿನ ಮಾತು. ನಾನು ಕುಂದಾಪುರದವನು. ನಮ್ಮಲ್ಲಿ ಅಕ್ಕಿ ಬೆಳೆಯುವುದು ಬಹಳ. ನಾನು ಆ ವ್ಯಾಪಾರ ಮಾಡುತ್ತಿದ್ದೆ. ನನ್ನ ಹತ್ತಿರ ಹೆಚ್ಚು ಹಣವಿರಲಿಲ್ಲ, ಹೇಗೋ ಕಷ್ಟದಿಂದ ನಿಭಾಯಿಸಿಕೊಂಡು ಹೋಗುತ್ತಿದ್ದೆ. ಈ ಸಮಯದಲ್ಲಿ ಅಲ್ಲಿಗೆ ಆಗಾಗ ವ್ಯಾಪಾರದ ಮೇಲೆ ಬರುತ್ತಿದ್ದ ಸುರಾಜ್‌ಮಲ್ ಎಂಬ ಸೇಟ್‌ನ ಪರಿಚಯವಾಯಿತು. ಅವನು ಉತ್ತರ ಭಾರತದವನು. ಆತನ ಹಣಕಾಸಿನ ಸ್ಥಿತಿಗತಿಗಳು ನನಗೆ ಗೊತ್ತಿರಲಿಲ್ಲ. ಆದರೆ ಬಹಳ ಹಣಗಾರನಂತೆ ಕಂಡುಬರುತ್ತಿದ್ದ. ನನಗೆ ಎರಡು ಸಲ ಹಣ ಸಾಲ ಕೊಟ್ಟು ಸಹಾಯವನ್ನೂ ಸಹ ಮಾಡಿದ್ದ. ಒಂದು ಬಾರಿ ಗೋವೆಗೆ ಅಕ್ಕಿ ಕಳಿಸಬೇಕಾಗಿದೆ ಎಂದೂ ಅದಕ್ಕೆ ಸಹಾಯ ಮಾಡಬೇಕೆಂದು ಹೇಳಿದ. ಮೊದಲು ನಾನು ಹೆದರಿದರೂ ವಿಪರೀತ ಲಾಭ ಸಿಕ್ಕುತ್ತದೆಂಬ ಆಶೆಯಿಂದ ಒಪ್ಪಿಕೊಂಡೆ. ಸುತ್ತಮುತ್ತಲೂ ಅಕ್ಕಿ ಕೊಳ್ಳಲು ಅವನು ಹಣ ಕೊಟ್ಟ. ನಾನು ಸಾಕಷ್ಟು ಕೊಂಡು ದಾಸ್ತಾನು ಮಾಡಿದೆ. ಒಂದು ದಿನ ರಾತ್ರಿ ಹತ್ತು ದೊಡ್ಡ ಪತ್ತೇಮಾರಿಗಳಲ್ಲಿ ಹಾಕಿ ಅವನ್ನು ಸಾಗಿಸಿಬಿಟ್ಟೆವು. ಗೋವೆಯ ನೋಟುಗಳು ಹಿಂದೂಸ್ಥಾನದಲ್ಲಿ ನಡೆಯುವುದಿಲ್ಲವೆಂಬುದನ್ನು ನೀವು ಬಲ್ಲಿರಲ್ಲಾ. ಆಗ ಅಕ್ಕಿಗೆ ಬದಲಾಗಿ ಚಿನ್ನವನ್ನು ತೆಗೆದುಕೊಳ್ಳುವುದೆಂದು ಮಾತಾಗಿತ್ತು. ಅದು ನಮಗೆ ಲಾಭವಾಗಿಯೂ ಇತ್ತು. ಗೋವೆಯ ಬೆಲೆಗೆ ತೆಗೆದ ಚಿನ್ನಕ್ಕೆ ಇಲ್ಲಿ ಒಳ್ಳೇ ಹಣ ಸಿಕ್ಕುತ್ತದೆಯಷ್ಟೇ. ಇದಾದ ಒಂದು ವಾರದೊಳಗಾಗಿ ಹತ್ತು ಪತ್ತೇಮಾರಿಗಳಷ್ಟು ಅಕ್ಕಿಯು ಗೋವೆಗೆ ಸಾಗಿಹೋಯಿತೆಂದು ವರ್ತಮಾನ ಬಂದಿತು. ಇದನ್ನು ಸಾಗಿಸುವುದರಲ್ಲಿ ಸುರಾಜ್‌ಮಲ್‌ನ ಕೈವಾಡವೂ ಇದೆಯೆಂದು ಗೊತ್ತಾಯಿತು. ಬೊಂಬಾಯಿನ ಪೋಲೀಸಿನವರು ಅವನನ್ನು ದಸ್ತಗಿರಿ ಮಾಡಿದರು. ಆಗ ಇನ್ನೊಂದು ದೊಡ್ಡ ಗಲಾಟೆಯಾಯಿತು. ಈ ಪ್ರಸಂಗ ನಿಮ್ಮವರೆವಿಗೂ ಬಿದ್ದಿದೆಯೇನು ?"

ಚಲಂ ಮುಗುಳುನಗೆ ನಗುತ್ತಾ "ನಿಮ್ಮ ಸಂಬಂಧವಿರುವುದರಿಂದ ಇದು ನಿಮಗೆ ದೊಡ್ಡದಾಗಿ ಕಂಡಿರಬೇಕು. ದಕ್ಷಿಣ ಕನ್ನಡ, ಉತ್ತರ ಕನ್ನಡ ಗಳಿಂದ ಗೋವೆಯ ಕಡೆಗೆ ಅಕ್ಕಿ ಸಾಗಿಸುವುದು ಸಾಧಾರಣವಾದ ಪ್ರಸಂಗ ಗಳು. ಆಗಾಗ ನಡೆಯುತ್ತಲೇ ಇರುತ್ತವೆ. ಮುಂದೇನಾಯಿತೆಂಬುದನು ಹೇಳಿ" ಎಂದ.

"ಮೊದಲು ಅರ್ಥವಾಗದಿದ್ದರೂ ಅನಂತರ ಅರ್ಥವಾಯಿತು. ಸುರಾಜ್‌ಮುಲ್ ಬಹಳ ಬುದ್ಧಿವಂತ. ಅವನಂತಹ ಕದೀಮ ನನ್ನಂತಹವ ನನ್ನು ಈ ವ್ಯವಹಾರಕ್ಕೆ ಯಾಕೆ ಉಪಯೋಗಿಸಿದನೆಂಬುದೇ ನನಗೆ ಅರ್ಥ ವಾಗದೇ ಇದ್ದದ್ದು. ಪೋಲೀಸಿನವರು ಬಂದು ನನ್ನನ್ನು ಕೇಳಿದರು. ನಾನು ಅರ್ಧ ನಿಜವನ್ನೂ ಅರ್ಧ ಸುಳ್ಳನ್ನೂ ಹೇಳಿದೆ. "ನಾನು ಬಡವ, ಸುರಾಜ್ ಮುಲ್ ಆಗಾಗ ಸಾಲ ಕೊಡುತ್ತಿದ್ದ. ಈ ಬಾರಿ ಬಂದವನು ತನಗೆ ಅಕ್ಕಿಯು ಬೇಕಾಗಿದೆ ಎಂದೂ ಸಂಗ್ರಹಿಸಿಕೊಡಬೇಕೆಂದೂ ಹಣವನ್ನು ಕೊಟ್ಟ. ಅವನಿಗೆ ಯಾಕೆ ಬೇಕಾಗಿದೆ ಎಂಬುದು ತಿಳಿಯದೇ ಅಕ್ಕಿ ಕೂಡಿಸಿಕೊಟ್ಟೆ. ಅದನ್ನು ಅವನೇನು ಮಾಡಿದನೋ ತಿಳಿಯದು." ಎಂದೆ. ಪತ್ತೇಮಾರಿಗಳು ಗಂಗೊಳ್ಳಿ ಕಡವಿನಿಂದ ಹೊರಟ ಮಾರನೆಯ ದಿನ ಸುರಾಜ್‌ಮುಲ್ ಕುಂದಾಪುರವನ್ನು ಬಿಟ್ಟು ಹೋದನೆಂಬುದು ಗೊತ್ತಾಗಿ ಪೋಲೀಸಿನವರು ಹೊರಟುಹೋದರು. ಅನಂತರ ನನ್ನ ಮೇಲೆ ಅವರು ನಿಗಾ ಮಾಡಲಿಲ್ಲ. ನಾನು ಹೇಳಿದುದು ನಿಜವೆಂದುಕೊಂಡರು ಎಂದು ಕಾಣುತ್ತದೆ. ಸುರಾಜ್‌ಮುಲ್‌ನಿಗೆ ಹಣ ಮೊದಲೇ ಬಂದಿದೆ – ಎಂದು ಪೋಲೀಸಿನವರು ಭಾವಿಸಿದರೋ ಅಥವಾ ಅದು ಕಾರವಾರಕ್ಕೆ ಬರುತ್ತ ದೆಂದು ಅವನು ಅಲ್ಲಿಯೇ ಕಾದು ಕುಳಿತಿದ್ದನೆಂದುಕೊಂಡರೋ ಅವರು ಇತ್ತ ಕಡೆ ಗಮನಿಸಲಿಲ್ಲ. ಸುಮಾರು ಹದಿನೈದು ದಿನಗಳ ನಂತರ ಸೀನ ನೆಂಬ ಬೆಸ್ತರವನು ನನಗೆ ಚಿನ್ನವನ್ನು ತಂದುಕೊಟ್ಟ. ಮಾರಲು ಅದು ಮೂರು ಲಕ್ಷ ರೂಪಾಯಿಗಳಷ್ಟಾದುವು.

ತಾನು ಹೇಳುತ್ತಿರುವ ಕತೆಯಿಂದ ಚಲಂನ ಮುಖದಲ್ಲಿ ಯಾವ

ಭಾವಗಳು ಕಾಣುತ್ತಿವೆ ಎಂಬುದನ್ನು ಪರಿಶೀಲಿಸಿ ಸಹಾನುಭೂತಿಯೋ ಕಂಡುಬರುತ್ತಿರುವಂತೆ ತೋರಲು ಮುಂದಕ್ಕೆ ಹೇಳತೊಡಗಿದರು.

"ಸುರಾಜ್‌ಮಲ್‌ಗೆ ಮೂರು ವರ್ಷಗಳ ಶಿಕ್ಷೆಯಾಯಿತು. ಅವನು ಬಹಳ ಲಂಚ ಖುಷವತ್ತುಗಳನ್ನು ಕೊಟ್ಟನೆಂದೂ, ಇಲ್ಲದಿದ್ದರೆ ಇನ್ನೂ ಹೆಚ್ಚು ಶಿಕ್ಷೆಯಾಗುತ್ತಿದ್ದಿತೆಂದು ಕೇಳಿದೆ. ಅಲ್ಲಿಗೆ ನಾನು ಅವನನ್ನು ಮರೆತು ಬಿಟ್ಟೆ. ಆದರೆ ಅವನು ನನ್ನನ್ನು ಮರೆಯಲಿಲ್ಲ. ಈಗ್ಗೆ ಎರಡೂವರೆ ಮೂರು ವರ್ಷಗಳ ಹಿಂದೆ ಎಂದು ಕಾಣುತ್ತದೆ. ಜೈಲಿನಿಂದ ಬಂದವನೇ ನನ್ನನ್ನು ಹಣ ಕೇಳಿದ ಅಲ್ಪಸ್ವಲ್ಪವಿಟ್ಟುಕೊಂಡು ಗೋವೆಯಿಂದ ಬಂದ ಚಿನ್ನ ಅಥವಾ ಅದರ ಬಾಬ್ತು ಹಣವೆಲ್ಲವನ್ನೂ ಕೊಡಬೇಕೆಂಬುದು ಅವನ ಇಷ್ಟವಾಗಿದ್ದಿತೆಂದು ತೋರುತ್ತದೆ...."

"ಯಾಕೆ ಅರ್ಧದಲ್ಲಿಯೋ ನಿಲ್ಲಿಸಿಬಿಟ್ಟಿರಿ ಪೈಗಳೇ! ಅಥವಾ ನೀವು ಹೇಳಬೇಕಾದುದು ಮುಗಿದುಹೋಯಿತೋ ?"

"ಮುಗಿಯಲಿಲ್ಲ ಸ್ವಾಮಿ. ಆದರೆ ಮುಂದೆ ಹೇಳುವುದಕ್ಕೆ ಸಂಕೋಚ ವಾಯಿತು, ನಿಲ್ಲಿಸಿಬಿಟ್ಟೆ. ಇಷ್ಟು ಹೇಳಿದವನಿಗೆ ಅವಷ್ಟನ್ನು ಹೇಳುವುದರಿಂದ ನಷ್ಟವಾದರೂ ಏನು? ಒಂದು ವೇಳೆ ನಾನು ಹೇಳದೇ ಇದ್ದರೂ ಅದು ನಿಮಗೆ ಅರ್ಥವಾಗಿಯೇ ಆಗುತ್ತದೆ. ಹಣವೇನೋ ಅವನದು. ಯಾವ ದೃಷ್ಟಿಯಿಂದ ನೋಡಿದರೂ ಅವನದೇ. ಆದರೆ ಅದು ನನ್ನದಾದಂತೆ ಆಗಿ ಹೋಗಿದ್ದಿತು. ಮೂರು ವರ್ಷಗಳ ಕಾಲ ಅದನ್ನು ಅನುಭವಿಸಿಯೂ ಬಿಟ್ಟಿದ್ದೆ. ಅದರಿಂದ ಹಣವನ್ನು ವಾಪ್ಸು ಕೊಡುವುದಕ್ಕೆ ಮನಸ್ಸು ಬರ ಲಿಲ್ಲ. ನನಗೆ ಆ ಬಾಬ್ತು ಚಿನ್ನವಾಗಲೀ, ಹಣವಾಗಲೀ ಬರಲಿಲ್ಲವೆಂದೂ, ಆ ಸಮಯದಲ್ಲಿ ಪೋಲೀಸರ ಬಾಯಲ್ಲಿ ಅಷ್ಟೋ ಇಷ್ಟೋ ಹಾಕಿ ತಲೆ ಯುಳಿಸಿಕೊಳ್ಳಬೇಕಾದರೆ ನನಗೆ ಸಾಕಾಗಿ ಹೋಯಿತೆಂದೂ ಹೇಳಿದೆ. ಅವ ನಿಗೆ ನನ್ನ ಮಾತಿನಲ್ಲಿ ನಂಬಿಕೆಯಾಗಲಿಲ್ಲ. ಆದರೆ ಸೀನನನ್ನು ರೂಬು ರೂಬು ಕರೆದುಕೊಂಡು ಬಂದು ಮುಖಾಬಿಲೆ ಮಾಡುವಂತಿರಲಿಲ್ಲ. ಸುರಾಜ್ ಮಲ್ ಜೈಲಿನಿಂದ ಬರುವುದಕ್ಕಿಂತ ಒಂದು ವರ್ಷದ ಮೊದಲೇ ಅವನು ಕಣ್ಣು ಮುಚ್ಚಿಕೊಂಡಿದ್ದ. ಬೇಡಿ ನೋಡಿದ, ಕಾಡಿ ನೋಡಿದ. ನನ್ನನ್ನು

ಹೆದರಿಸುವುದಕ್ಕೆ ಪ್ರಯತ್ನ ಮಾಡಿದ. ನನ್ನ ಮೇಲೆ ಯಾರಾದರೂ ದ್ವೇಷ ಸಾಧನೆ ಮಾಡಬಹುದಾದರೆ ಆತನೊಬ್ಬ ಮಾಡಬಹುದು."

ಚಲಮ್ಮು "ಈಗ ವಿಷಯ ಅರ್ಥವಾಯಿತು ಬಿಡಿ." ಎಂದ.

"ಅವನು ಹೊರಟು ಹೋದರೂ ಸಹ ಆಗ ನಾನು ಹಣ ತೆಗೆದು ಕೊಂಡೆನೆಂಬ ವಿಷಯ ಪೋಲೀಸಿಗೆ ಹೇಳಿ ನನಗೆ ತಂಟೆ ತಂದಿಡುತ್ತಾನೆಯೋ ಎಂದುಕೊಂಡೆ. ಅನೇಕ ದಿನಗಳು ಹೆದರಿಕೊಂಡೇ ಇದ್ದೆ. ಆ ಸಂದರ್ಭ ದಲ್ಲಿಯೇ ಏನೂ ಮಾಡದೇ ಇದ್ದುದರಿಂದ ಆ ಹಳೆಯ ದ್ವೇಷವನ್ನು ಸಾಧಿ ಸುವ ಛಲ ಅವನಿಗಿಲ್ಲವೆಂದು ಕಾಣುತ್ತದೆ."

"ನಿಮ್ಮದು ತಪ್ಪು ಭಾವನೆ, ಪೈಗಳೇ. ಆಗ ಅವನು ಏನು ಮಾಡ ಬಹುದಾಗಿತ್ತು? ನೀವು ಹೇಳಿದಂತೆ ಗೋವೆಗೆ ಅಕ್ಕಿ ಕಳುಹಿಸಿದ ಅಪ ರಾಧದಲ್ಲಿ ನೀವೂ ಪಾಲುಗಾರರೆಂದು ಹೇಳಬಹುದಾಗಿತ್ತು. ಆ ಕೇಸು ಮುಗಿದು ಮೂರು ವರ್ಷಗಳಾಗಿತ್ತು. ಆಗ ಹೇಳಿದ್ದರೆ ಯಾರೂ ನಂಬುತ್ತಿರ ಲಿಲ್ಲ. ಸುರಾಜ್‌ಮುಲ್ ಬಹಳ ಬುದ್ಧಿವಂತ. ಆದರಿಂದ ನಿಮಗೆ ಹೆಚ್ಚು ತೊಂದರೆಯಾಗದೆಂದು ಅವನು ಸುಮ್ಮನಿದ್ದು ಸಮಯ ಕಾಯುತ್ತಿದ್ದ. ಈಗ ನಿಮ್ಮ ಮಗನನ್ನೂ ಸಿಕ್ಕಿಹಾಕಿ ನಿಮ್ಮ ಮೇಲಿನ ಛಲ ತೀರಿಸಿಕೊಳ್ಳುತ್ತಿದ್ದಾ ನೆಂದು ಕಂಡುಬರುತ್ತದೆ."

"ಹಾಗಾದರೆ ಇದನ್ನೆಲ್ಲ ಮಾಡಿದವನು ಸುರಾಜ್‌ಮುಲ್‌ನೇ ಎಂದು ಹೇಳುತ್ತೀರೇನು?"

"ನನಗಂತೂ ಹಾಗೆಯೇ ತೋರುತ್ತದೆ. ವಿನಾಕಾರಣ ಯಾರೂ ಯಾವ ಮನುಷ್ಯನಿಗೂ ತೊಂದರೆಯನ್ನುಂಟುಮಾಡಿದ್ದನ್ನು ನಾನು ಇದುವರೆ ವಿಗಿನ ನನ್ನ ಅನುಭವದಲ್ಲಿಯೇ ಕಂಡಿಲ್ಲ."

ಪೈಗಳಿಗೆ ಏನು ಹೇಳುವುದಕ್ಕೂ ತೋರದೆ ಸುಮ್ಮನೆ ಕುಳಿತರು.

"ಪೈಗಳೇ, ಸುರಾಜ್‌ಮುಲ್ ಉದ್ದವಾಗಿ ಬೆಳ್ಳಗೆ ತೆಳ್ಳಗಿರುವ ಮನುಷ್ಯ ನೇನು?"

ಅತ್ಯಾಶ್ಚರ್ಯದಿಂದ ರಮಾನಂದಪೈ, "ಹೌದು. ನಿಜ. ಆದರೆ ನೀವು ಅದನ್ನು ತಿಳಿದುಕೊಂಡುದು ಹೇಗೆ? ಯಾವಾಗಲಾದರೂ ನೀವು ಈತನನ್ನು ಎಲ್ಲಿಯಾದರೂ ಕಂಡಿದ್ದೀರೇನು?" ಎಂದು ಕೇಳಿದರು.

"ಇಲ್ಲ. ನಾನು ಇದುವರೆವಿಗೂ ಆತನನ್ನು ಕಂಡಿಲ್ಲ. ಆದರೆ ಸುರಾಜ್‌ಮಲ್ ಆ ರೀತಿ ಇರಬಹುದೆಂದು ತೋರಿತು ಅಷ್ಟೇ."

ಚಲಂ ಹೇಳಿದ ಮಾತು ಪೈಗಳಿಗೆ ಪೂರಾ ನಂಬಿಕೆಯಾಗಲಿಲ್ಲ.

## ೧೫

ಮೇಜದ ಮೇಲೆ ಚುಟ್ಟಾದ ಪೆಟ್ಟಿಗೆಯಿತ್ತು. ಚಲಂ ಸಿಗಾರ್ ಸೇದುತ್ತಾ ಕುಳಿತಿದ್ದ. ಆಗತಾನೇ ಆಫೀಸಿಗೆ ಬಂದ ಕುಪ್ಪುಸ್ವಾಮಿಗೆ ಎಂದೂ ಇಲ್ಲದೇ ಚಲಂ ಸಿಗಾರ್ ಸೇದುತ್ತಿರುವುದನ್ನು ನೋಡಿ ಆಶ್ಚರ್ಯ ವಾಯಿತು. ಅವನು ಕೇಳಿದ.

"ಇದೇನು ಸಾರ್ ಸಿಗಾರ್ ಸೇದುತ್ತಿದ್ದೀರಿ ?"

"ಅದೊಂದು ದೊಡ್ಡ ಕತೆ, ಕುಪ್ಪುಸ್ವಾಮಿ. ಸಿಗಾರ್ ಸೇದಲೇ ಬೇಕಾಗಿ ಬಂದಿತು. ಅದನ್ನೆಲ್ಲಾ ಸಾವಕಾಶನಾಗಿ ಹೇಳುತ್ತೇನೆ. ಈಗ.."

ಅಷ್ಟರಲ್ಲಿ ಈ ಕುಪ್ಪುಸ್ವಾಮಿಯು ಬಾಯಿ ಹಾಕಿ "ನಿಮ್ಮ ಕೆಲಸವೆಲ್ಲ ವನ್ನೂ ಮಾಡಿಕೊಂಡು ಬಂದಿದ್ದೇನೆ. ಬಹುಮಟ್ಟಿಗೆ ಎಲ್ಲವೂ ನೀವು ಹೇಳಿ ದಂತೆಯೇ ಆಗಿದೆ. ಈಗ ನೀವು ಸಾವಕಾಶವಾಗಿ ಹೇಳಬಹುದು. ಎಂದೂ ಸಿಗಾರ್ ಸೇದದೇ ಇರುವವರು ಈ ದಿನ ಪೆಟ್ಟಿಗೆಯನ್ನೇ ಎದುರಿಗೆ ಇಟ್ಟು ಕೊಂಡು ಕುಳಿತುಕೊಂಡಿರುವುದು ಬಹಳ ಆಶ್ಚರ್ಯಕರವಾಗಿದೆ" ಎಂದ.

"ಹಾಗಾದರೆ ಈಗ ಸಾವಕಾಶವೆಲ್ಲಿ ಬಂದಿತು ? ವಿಷಯಗಳು ನಾನು ಹೇಳಿದಂತೆಯೇ ಆಗಿದ್ದರೆ ಒಂದು ಕ್ಷಣಕಾಲ ಸಹ ಸಾವಕಾಶವಿಲ್ಲ. ಮೊದಲು ನೀನು ಹೋದ ಕೆಲಸವೇನಾಯಿತೆಂಬುದನ್ನು ಹೇಳು ?"

"ನೀವು ಹೇಳಿದಂತೆ ಸಿಂಕ್ಸ್ ಹೋಟಲಿಗೆ ಹೋದೆ. ಆ ಹೋಟಲಿ ನಲ್ಲಿ ಎರಡು ಕಟ್ಟಡಗಳಿರುವುದನ್ನು ನೀವು ಬಲ್ಲಿರಿ. ಒಂದು ದೊಡ್ಡ ಕಟ್ಟಡ. ಅದರ ಪಕ್ಕದಲ್ಲಿರುವುದು ಸಣ್ಣ ಕಟ್ಟಡ. ಸಣ್ಣ ಕಟ್ಟಡದ ಮುಂದಿನ ಜಗು ಲಿಯ ಮೇಲೆ ನಾಲ್ಕು ಟೇಬಲ್‌ಗಳನ್ನು ಹಾಕಿ ಕುಡಿಯುವುದಕ್ಕೆ ಅಣಿ ಮಾಡಿದ್ದಾರೆಯಷ್ಟೇ. ಆ ಜಗುಲಿಯಿಂದ ಒಳಗೆ ಹೋಗುವುದಕ್ಕೆ ಒಂದು

ಬಾಗಿಲಿದೆ. ಅದನ್ನು ದಾಟಿ ಹೋದರೆ ದಾರಿಗುಂಟ ಯಿರುವ ಉದ್ದವಾದ ನಡುವೆ. ಅದರ ಎರಡು ಕಡೆಗಳಲ್ಲಿಯೂ ಸಾಲಾಗಿ ಕೋಣೆಗಳಿವೆ. ಅದರಲ್ಲಿ ಎಡಗಡೆ ಸಾಲಿನಲ್ಲಿ ಗುಲಾಬ್‌ಚಂದರು ಎರಡು ಕೋಣೆಗಳನ್ನು ತೆಗೆದು ಕೊಂಡಿದ್ದಾರೆ. ಒಂದರಲ್ಲಿ ಅವರೂ ಮತ್ತೊಂದರಲ್ಲಿ ಅವರ ಮಗಳೂ ವಾಸ ವಾಗಿದ್ದಾರೆ. . . ,"

"ಸರಿ. ಮುಂದೆ. . . . ."

"ಅದರ ಎದುರು ಸಾಲಿನಲ್ಲಿ – ಎಂದರೆ ಗುಲಾಬ್‌ಚಂದರು ಬಾಡಿಗೆಗೆ ಪಡೆದಿರುವ ಕೋಣೆಗಳಿಗೆ ಬಹುಮಟ್ಟಿಗೆ ಎದುರಾಗಿ ವಹಿದಾ ಬೇಗಂ ಒಂದು ಕೋಣೆಯನ್ನು ತೆಗೆದುಕೊಂಡಿದ್ದಾಳೆ."

ಚಲಂ ಸೇದುತ್ತಿದ್ದ ಬತ್ತಿಯ ಹೊಗೆಯನ್ನು ದೀರ್ಘವಾಗಿ ಒಳಗೆಳೆದು ಕೊಂಡ. ಅದು ಚುಟ್ಟಾ ಆದುದರಿಂದಲೂ ಅದರ ಹೊಗೆ ಸಿಗರೇಟಿನ ದಕ್ಕಿಂತಲೂ ಘಾಟಾಗಿದ್ದುದರಿಂದಲೂ ವಿಪರೀತ ಕೆಮ್ಮು ಬಂದಿತು. ಕಣ್ಣು ಕೆಂಪಾಗಿ ಅದರಿಂದ ನೀರೂರಿತು.

ಅದನ್ನು ನಿವಾರಿಸಿಕೊಂಡು, "ಆಮೇಲೆ. . . ." ಎಂದ.

"ಆಮೇಲಿನದೇ ಇದ್ದುದರಲ್ಲಿ ಸ್ವಾರಸ್ಯವಾದ ವಿಷಯ. ಸುಮಾರು ಒಂದು ಗಂಟೆಯ ವೇಳೆಗೆ ಇಸ್ಮಾಯಿಲ್ ಪಿಂಕ್ಸ್‌ಗೆ ಬಂದ. . . "

"ಹಾಗಾದರೆ ಇಸ್ಮಾಯಿಲ್ ಇಷ್ಟು ಬೇಗ ಹೊರಗೆ ಬಂದನೇನು? ಅಂದರೆ ಯಾವುದೋ ತಂತ್ರದಿಂದ ಅವನು ತಪ್ಪಿಸಿಕೊಂಡಿದ್ದಾನೆ. . . ."

"ನಾನೂ ಹಾಗೆಯೇ ಎಂದುಕೊಂಡೆ. ಸೆಂಟ್ರಲ್ ಪೋಲೀಸ್ ಸ್ಟೇಷನ್ ಕಡೆಗೋ ಅಥವಾ ಕೋರ್ಟಿನ ಬಳಿಗೋ ಹೋಗಿದ್ದರೆ ವಿಷಯ ವೇನೆಂದು ತಿಳಿದುಕೊಂಡು ಬರಬಹುದಾಗಿತ್ತು. ಆದರೆ ನೀವು ಈ ಕೆಲಸ ವಿನಾ ಮತ್ತೇನನ್ನೂ ಮಾಡಕೂಡದೆಂದು ಹೇಳಿದ್ದುದರಿಂದ ಸುಮ್ಮನಾದೆ."

"ಇಸ್ಮಾಯಿಲ್ ಹೇಗೆ ತಪ್ಪಿಸಿಕೊಂಡನೆಂಬುದು ಈಗ ಮುಖ್ಯ ವಿಷಯ ವಲ್ಲ. ಪಿಂಕ್ಸ್‌ಗೆ ಬಂದವನು ಏನು ಮಾಡಿದ?"

"ಅವನು ಬರುವ ವೇಳೆಗೆ ವಹೀದಾ ತನ್ನ ಕೋಣೆಯಲ್ಲಿಯೇ ಇದ್ದಳು. ಇಸ್ಮಾಯಿಲ್ ಮೊದಲು ಅವಳ ಕೋಣೆಗೆ ಹೋದ. ಇಬ್ಬರೂ ಮಾತ ನಾಡುತ್ತಿದ್ದರೆಂದು ಕಾಣುತ್ತದೆ. ಸ್ವಲ್ಪ ಹೊತ್ತಿನ ತರುವಾಯ ಇಬ್ಬರೂ

ಕೂಡಿ, ಗುಲಾಬ್‌ಚಂದರ ಕೋಣೆಗೆ ಹೋದರು. ನೀವು ಹೇಳಿದಂತೆ ಅವರವರುಗಳಿಗೆ ಬಹಳ ಸ್ನೇಹವಿರುವಂತೆ ಕಂಡುಬರುತ್ತದೆ. ನೋಡಿದ್ದರಲ್ಲಿ ನನಗೂ ಹಾಗೆಯೇ ತೋರಿತು."

"ಗುಲಾಬ್‌ಚಂದನಿಗೂ ಇಸ್ಮಾಯಿಲ್‌ಗೂ ಸ್ನೇಹವಿರಬಹುದೆಂದೂ, ಗುಲಾಬ್‌ಚಂದನ ಅಥವಾ ಲತೆಯ ಕೋಣೆಗೆ ಇಸ್ಮಾಯಿಲ್‌ನೋ ಇಲ್ಲ ಅವನ ಕಡೆಯವರೋ ಹೋಗಿಬರಲು ಅವಕಾಶವಿದ್ದಿರಬಹುದೆಂದೂ ಊಹಿಸಿದ್ದೆ. ಈಗ ನೀನು ಹೇಳಿದ್ದರಲ್ಲಿ ನನ್ನ ಊಹೆಯು ಸರಿಯಾಯಿತು. ಇದನ್ನು ನಾವೀಗ ಖಚಿತಮಾಡಿಕೊಂಡಂತೆ ಆಯಿತೇ ವಿನಾ, ಇದಿಷ್ಟೂ ಒಂದು ವಿಧವಾಗಿ ನಮಗೆ ತಿಳಿದಿರುವಂತಹುದೇ ಎಂದು ಹೇಳಬಹುದು. ಅವರುಗಳು ಏನುಮಾಡುತ್ತಾರೆ ಎಂಬುದನ್ನು ಗಮನಿಸುವುದು ಮುಖ್ಯವೆಂದು ನಿನಗೆ ತೋರಲಿಲ್ಲವೇ ? ನನಗೀ ವಿಷಯವನ್ನು ಟೆಲಿಫೋನಿನಲ್ಲಿ ಹೇಳಬಹುದಾಗಿತ್ತು ಅಥವಾ ಮತ್ತಷ್ಟು ಸ್ವಲ್ಪ ಹೊತ್ತು ಬಿಟ್ಟುಕೊಂಡು ಬಂದು ತಿಳಿಸಬಹುದಾಗಿತ್ತು. . . ."

"ಸಾಧ್ಯವಿದ್ದಿದ್ದರೆ ಹಾಗೆಯೇ ಮಾಡುತ್ತಿದ್ದೆ. ಅರಗಳಿಗೆಯೂ ಸಹ ಅವರ ಮೇಲೆ ನಿಗಾ ಮಾಡದೇ ಇರುತ್ತಿರಲಿಲ್ಲ. ಆದರೆ ಒಂದು ಕೆಲಸವಾಯಿತು. ನಾನು ಜಗುಲಿಯ ಮೇಲಿನ ಟೇಬಲ್‌ನಲ್ಲಿ ಬಿಯರ್ ಕುಡಿಯುವವನಂತೆ ನಟಿಸುತ್ತಾ ಕುಳಿತು ಎಲ್ಲವನ್ನೂ ಗಮನಿಸುತ್ತಿದ್ದೆ. ಇಸ್ಮಾಯಿಲ್ ಒಳಗೆ ಹೋಗುತ್ತಲೂ ಬೇರರ್‌ನನ್ನು ಕರೆಯುವ ನೆವದಿಂದ ಎದ್ದು ಅವನೆಲ್ಲಿ ಹೋಗುತ್ತಾನೆಂಬುದನ್ನು ನೋಡಿದೆ. ಬಾತ್ ರೂಂ ಹಿಂದುಗಡೆಯಿದೆ. ಅಲ್ಲಿಗೆ ಹೋಗುವವನಂತೆ ಹೊರಟು, ಅವನ ಹಿಂದೆ ಹೋಗಿ ಗುಲಾಬ್ ಚಂದರ ಕೋಣೆಯೊಳಗೆ ಹೋಗುವುದನ್ನು ಗಮನಿಸಿದೆ. ಆದರೆ ಅವರು ಬಲು ಹೊತ್ತು ಅಲ್ಲಿರಲಿಲ್ಲ. ಗುಲಾಬ್‌ಚಂದನೂ ಇಸ್ಮಾಯಿಲ್‌ನೂ ಹೊರಗೆ ಬಂದರು ಹೊರಗೆ ನಿಂತಿದ್ದ ಸ್ಪೋರ್ಟ್ಸ್ ಕಾರಿನಲ್ಲಿ ಕುಳಿತು ಎಲ್ಲಿಗೋ ಹೊರಟರು. . . ."

"ಅವರನ್ನು ಅನುಸರಿಸಿ ಹೋಗಲಾಗಲಿಲ್ಲವೇ ಕುಪ್ಪು?"

"ಇಲ್ಲ ಸಾರ್, ಆಗಲಿಲ್ಲ ಅವರಿಬ್ಬರನ್ನೂ ಬೀಳ್ಕೊಡಲು ವಹೀದಾ ಹೊರಗಡೆ ಬಂದಳು. ಇಬ್ಬರೂ ಕಾರಿನಲ್ಲಿ ಕುಳಿತು ಹೊರಟಾಗ ಅವಳು

ಜಗುಲಿಯ ಮೇಲೆಯೇ ನಿಂತುಕೊಂಡಿದ್ದಳು. ನನ್ನ ಟ್ಯಾಕ್ಸಿ ಹೊರಗಡೆಯೇ ನಿಂತಿತ್ತು. ಆದರೆ ನಾನು ಅನುಸರಿಸಿ ಹೋಗಿದ್ದರೆ ಪಹೀದೆಗೆ ಗೊತ್ತಾಗುತ್ತಿತ್ತು. ಅದರಿಂದ ಹಾಗೆ ಮಾಡಲಿಲ್ಲ. ಅವಳಲ್ಲಿ ನಿಂತಿದ್ದ ಹಾಗೆಯೇ ಬೇರರ್‌ನನ್ನು ಕರೆದು, "ಬಿಯರ್ ಮತ್ತು ಗ್ಲಾಸುಗಳು ಹೀಗೆಯೇ ಇರಲಿ. ಸ್ವಲ್ಪ ಹೊತ್ತಿನಲ್ಲಿ ಬರುತ್ತೇನೆ" ಎಂದು ಹೇಳಿ ಬಂದಿದ್ದೇನೆ.''

ತುಸ ಹೊತ್ತು ಯೋಚಿಸಿ ಚಲಂ "ಸರಿ, ಕುಪ್ಪುಸ್ವಾಮಿ. ಪರಿಸ್ಥಿತಿಗಳೇ ಹಾಗೆ ಬಂದರೆ ನೀನೇನುತಾನೆ ಮಾಡಬಲ್ಲೆ? ನನ್ನ ಲೆಕ್ಕಾಚಾರದಲ್ಲಿ ಇಸ್ಮಾಯಿಲ್‌ನ ಕೆಲಸಗಳು ಮುಗಿದಿವೆ. ಅವನು ಯಾವಾಗ ಎಂದರೆ ಆವಾಗ ಮಾಯವಾಗಬಹುದು. ನೀನು ಎಡಬಿಡದೇ ಅವನನ್ನು ನಿಗಾ ಮಾಡುತ್ತಿರು. ಏನಾದರೂ ವಿಶೇಷವಾದ ಘಟನೆಯು ನಡೆದರೆ, ಅಥವಾ ಇಸ್ಮಾಯಿಲ್ ಮಾಯವಾಗಲು ಪ್ರಯತ್ನಮಾಡಿದರೆ ನನಗೆ ಕೂಡಲೆ ತಿಳಿಸು" ಎಂದ.

"ಅಂದರೆ ಇಸ್ಮಾಯಿಲ್ ಅಪರಾಧಿ ಎಂದು ಹೇಳುತ್ತೀರಾ ಸಾರ್."

"ಹುಂ. ಖಂಡಿತವಾಗಿ ಅವನೇ ಅಪರಾಧಿ. ಬಹುಮಟ್ಟಿಗೆ ಘಾಜಿ ಖಾನ್ ಈರಾನಿಯು ಅವನೇ ಎಂದೂ, ಅವನು ತಂತ್ರಮಾಡಿ ಪ್ರಕಾಶನನ್ನು ಸಿಕ್ಕಿಹಾಕಿದ್ದಾನೆಂದೂ ನನ್ನ ದೃಢವಾದ ನಂಬಿಕೆ. ಅವನಿಗೆ ಗುಲಾಬ್ ಚಂದ್ ಬೆಂಬಲನಾಗಿದ್ದಾನೆ."

ನಂಬುವುದಕ್ಕೆ ಕಷ್ಟವಾದವನಂತೆ ಕುಪ್ಪುಸ್ವಾಮಿ ಚಲಂ ಕಡೆಗೆ ನೋಡಿದ.

"ಅದೇ ಹೇಳಿದೆನಲ್ಲಾ ಕುಪ್ಪು. ಸಾವಕಾಶವಾಗಿ ಹೇಳಲು ಈಗ ಸಮಯವಿಲ್ಲವೆಂದು. ಇಸ್ಮಾಯಿಲ್ ಯಾವಾಗಲೂ ಚುಟ್ಟಾ ಸೇದುತ್ತಾನೆಂಬುದನ್ನು ಬಲ್ಲೆಯಷ್ಟೇ. ಈರಾನಿಯೂ ಸಹ ಬ್ಯಾಂಕಿಗೆ ಬಂದಾಗ ಚುಟ್ಟ ಸೇದುತ್ತಲೇ ಇದ್ದ. ಅಂತಹ ವೇಷಭೂಷಣಗಳನ್ನು ಧರಿಸಿದಂತಹ ಯಾವನಾದರೂ ವ್ಯಕ್ತಿ ಎಂದಾದರೂ ರೇಸ್‌ಕೋರ್ಸ್‌ನಲ್ಲಿ ಕಣ್ಣಿಗೆ ಬಿದ್ದನೇ ಎಂದು ಶೇಷಾಚಲಂ ನಾಯಿಡುವನ್ನು ವಿಚಾರಿಸಿದೆ. ಆತ ಇಲ್ಲವೆಂದು ಹೇಳಿದ? ಅಂದರೆ ಈ ಈರಾನಿಯಾರು? ಬಹುಮಟ್ಟಿಗೆ ವೇಷಧಾರಿಯಾದ ಇಸ್ಮಾಯಿಲ್ ಇರಬೇಕು. ಪೋಲೀಸ್ ಲಾಕಪ್ಪಿನಿಂದ ಹೊರಗೆ

ಬಂದ ಕೂಡಲೇ ಅವನು ಬಂದು ಗುಲಾಬ್‌ಚಂದ್‌ನನ್ನು ನೋಡಿದ್ದು ನನ್ನ ಆಲೋಚನೆಯನ್ನು ಸಮರ್ಥಿಸುತ್ತದೆ."

"ಅವನ ಕೆಲಸವಷ್ಟು ಆಯಿತೆಂದು ಹೇಳಿದಿರಲ್ಲಾ ಹೇಗೆ ?"

"ಯಾವುದಾದರೂ ದೊಡ್ಡ ಅಪರಾಧವನ್ನು ಮಾಡುವ ಸಮಯದಲ್ಲಿ ಸಣ್ಣ ಅಪರಾಧವನ್ನು ಕಣ್ಣಿಗೆ ಬೀಳುವಂತೆ ತೋರಿಸಿ ತಪ್ಪಿಸಿಕೊಳ್ಳುವುದು ಇಸ್ಮಾಯಿಲ್‌ನ ಸ್ವಭಾವ. ಮೋಸದಿಂದ ವಜ್ರದ ಹರಳನ್ನು ಅಪಹರಿಸುವವನಂತೆ ತೋರಿಸಿಕೊಂಡು ಈ ಮರುಳತನವನ್ನು ಮಾಡಿದ್ದಾನೆ. ಇನು ಇವೆಲ್ಲಾ ಸ್ಥಿಮಿತಕ್ಕೆ ಬರುವವರೆವಿಗೆ ಅವನು ಸುಮ್ಮನಿರಬೇಕಷ್ಟೇ."

"ಇಸ್ಮಾಯಿಲ್ ಅಪರಾಧಿ ಎಂಬುದು ನಿಮಗೆ ದೃಢವಾಗಿದ್ದರೆ ಅವನನ್ನೇಕೆ ದಸ್ತಗಿರಿ ಮಾಡಬಾರದು ?"

ಚಲಂ ನಗುತ್ತಾ, "ಇವೆಲ್ಲಾ ಊಹೆಗಳೇ ಹೊರತು, ಘಾಜೀಖಾನ್ ಈರಾನಿಯು ಇಸ್ಮಾಯಿಲ್ ಎಂದು ಸಾಬೀತು ಮಾಡುವುದು ಹೇಗೆ?" ಎಂದ.

"ನನ್ನನ್ನು ಕೇಳಿದರೆ ಅದು ಅತ್ಯಂತ ಸುಲಭವಾದ ಕೆಲಸ."

ಅದು ಹೇಗೆ ಎಂಬಂತೆ ಚಲಂ ನೋಡಿದ.

"ಎಷ್ಟಾದರೂ ಇಸ್ಮಾಯಿಲ್ ಸಂದೇಹಾಸ್ಪದನಾದ ಮನುಷ್ಯ. ಅವನನ್ನು ಹಿಡಿದು ಅವನ ಕೈಬೆರಳು ಗುರ್ತುಗಳನ್ನು ತೆಗೆದುಕೊಂಡು ನೀವು ಸಂಗ್ರಹಿಸಿರುವ ಕೈಬೆರಳ ಗುರುತುಗಳೊಡನೆ ಹೋಲಿಸಿ ನೋಡಿದರೆ ಗೊತ್ತಾಗುತ್ತದೆ. ಚೆಕ್‌ನ ಮೇಲೆ ಅಪರಿಚಿತನಾದ ವ್ಯಕ್ತಿಯೊಬ್ಬನ ಕೈಬೆರಳು ಗುರುತುಗಳನ್ನು ಗುರುತಿಸಿ ಅವೇ ಘಾಜೀಖಾನ್ ಈರಾನಿಯದಿರಬೇಕೆಂದು ನೀವು ಲೆಕ್ಕ ಹಾಕಿದ್ದೀರಲ್ಲಾ. ಅವು ಇಸ್ಮಾಯಿಲ್‌ನದಾದರೆ ಅವನೇ ಈರಾನಿಯಾಗಿರಬೇಕಷ್ಟೇ."

"ಅದು ನಿಜ. ಕಟ್ಟಕಡೆಯದಾಗಿ ವಿಷಯವನ್ನು ನಿರ್ಣಯಿಸುವ ಮಾರ್ಗವೇ ಅದು. ಆದರೆ ನೀನು ಹೇಳುವುದು ಬೆಕ್ಕಿಗೆ ಗಂಟೆ ಕಟ್ಟಿದಂತೆ ವಿಚಿತ್ರವಾಗಿದೆ. ಇಸ್ಮಾಯಿಲ್‌ನ ಕೈಬೆರಳ ಗುರುತುಗಳನ್ನು ಬಲಾತ್ಕಾರದಿಂದಲೋ ಅಥವಾ ಉಪಾಯದಿಂದಲೋ ಸಂಗ್ರಹಿಸಿದ ಮೇಲಲ್ಲವೇ ಅವುಗಳನ್ನು ಹೋಲಿಸುವುದಕ್ಕೆ ಸಾಧ್ಯ."

"ಅಂದರೆ ಈಗೇನು ಮಾಡುತ್ತೀರಿ ?"

"ಏನೂ ಇಲ್ಲ, ಸುಮ್ಮನೆ ಕುಳಿತಿರುತ್ತೇನೆ."

"ಅಪರಾಧಿಗಳು ರಾಜಾರೋಷವಾಗಿ ಓಡಿಯಾಡಿಕೊಂಡಿದ್ದರೆ ನೀವು ಸುಮ್ಮನೆ ಕುಳಿತಿರುವುದೇ ?"

"ಹಾಗಾಗುವುದಿಲ್ಲ ಕುಪ್ಪು. ಇಸ್ಮಾಯಿಲ್ ಮಾಯವಾಗುತ್ತಾನೆಂದು ನಾನು ಹೇಳಿದ್ದು ನಿನಗೆ ನೆನಪಿದೆ ತಾನೇ. ಮಾಯವಾಗುತ್ತಾನೆ ಎಂದರೆ ಏನು, ವೇಷಾಂತರದಿಂದಲೋ ಅಥವಾ ಹಾಗೇನೋ ? ಯಾರ ಕಣ್ಣಿಗೂ ಬೀಳದಂತೆ ಮುಚ್ಚಿಟ್ಟುಕೊಳ್ಳುತ್ತಾನೆ. ಇಲ್ಲವೇ ಊರು ಬಿಟ್ಟು ಹೊರಟು ಹೋಗುತ್ತಾನೆ. ಹಾಗೆ ಏನಾದರೊಂದು ಆಗುವ ಮೊದಲು ಗಮನಾರ್ಹ ವಾದಂತಹ ಯಾವುದಾದರೂ ಘಟನೆ ನಡೆಯಬಹುದು."

ಕುಪ್ಪುಸ್ವಾಮಿಯು ಏನೂ ಹೇಳದೇ ಸುಮ್ಮನಿದ್ದ.

"ಯಾಕೆ ಕಪ್ಪು ಹಾಗೆ ಕುಳಿತುಕೊಂಡಿದ್ದೀ ?"

"ನೀವು ಜ್ಯೋತಿಷ್ಯರು ಹೇಳುವಂತೆ ಹೇಳುತ್ತಿದ್ದೀರಿ ?"

"ಜ್ಯೋತಿಷ್ಕರು ಕಣ್ಣಿಗೆ ಕಾಣದೇ ಎಲ್ಲಿಯೋ ಇರುವ ಗೃಹಗಳ ಗತಿ ಯನ್ನು ಲೆಕ್ಕ ಹಾಕಿಕೊಂಡು ಫಲವನ್ನು ಹೇಳುತ್ತಾರೆಯಲ್ಲವೇ ? ಅದು ನಿಜ ವಾಗುತ್ತದೆಯೋ ಸುಳ್ಳಾಗುತ್ತದೆಯೋ ನಾನೆಂದೂ ಯೋಚಿಸಿಲ್ಲ. ಆದರೆ ಕಣ್ಣೆದುರಿಗೆ ಕಾಣುವ ವ್ಯಕ್ತಿಗಳ ಗತಿಗಳನ್ನು ಹಿಡಿದು ಲೆಕ್ಕ ಹಾಕುವುದರಲ್ಲಿ ಮಾತ್ರ ಎಂದೆಂದಿಗೂ ತಪ್ಪಾಗುವುದಿಲ್ಲ...."

ಮುಂದೆ ಮಾತನಾಡುವ ಮೊದಲು ಚಲಂ ಕ್ಷಣಕಾಲ ತಡೆದ. ಅವನು ಯಾವುದೋ ಮುಖ್ಯವಾದ ವಿಷಯ ಹೇಳಬಹುದೆಂದು ಕುಪ್ಪುಸ್ವಾಮಿ ಆಸಕ್ತಿಯಿಂದ ಕೇಳತೊಡಗಿದ.

"ಇದು ಅವರುಗಳೆಂದುಕೊಂಡಿರುವಷ್ಟು ಸುಲಭವಾಗಿ ಕೊನೆಗಾಣುವು ದಿಲ್ಲ. ಸ್ವಲಾಭಕ್ಕಾಗಿ ಯಾವ ದುಷ್ಕಾರ್ಯವನ್ನು ಮಾಡುವುದಕ್ಕಾದರೂ ಇಸ್ಮಾಯಿಲ್ ಸಿದ್ಧನಾಗಿರಬಹುದಾದರೂ ಪ್ರಕಾಶನಿಗೆ ತೊಂದರೆ ಮಾಡ ಬೇಕೆಂಬುದು ಅವನ ಉದ್ದೇಶವಲ್ಲ. ಕೇವಲ ನಲವತ್ತು ಸಾವಿರಗಳನ್ನು ಅಪಹರಿಸುವುದಕ್ಕಾಗಿ ಈ ಪ್ರಸಂಗ ನಡೆಯಲೂ ಇಲ್ಲ. ಬಹುಮಟ್ಟಿಗೆ

ಗುಲಾಬ್‌ಸಿಂಗನ ಪ್ರೇರಣೆಯಿಂದಲೇ ಇಸ್ಮಾಯಿಲ್ ಈ ಕೆಲಸ ಮಾಡಿದ್ದಾನೆ. ಯಾರ ಪ್ರೇರಣೆಯಿಂದಲಾದರೂ ಮಾಡಿರಲಿ, ಯಾಕೆ ಮಾಡಿದ? ಯಾವುದೋ ಲಾಭಕ್ಕೆ ತಾನೇ? ಇದರಲ್ಲ ಲಾಭವೇನೆಂಬುದನ್ನು ಆಲೋಚನೆ ಮಾಡೋಣ. ಬ್ಯಾಂಕಿನಿಂದೆ ಹೆಚ್ಚಾಗಿ ಹೊಡೆದುಕೊಂಡು ಬಂದ ಹಣದಲ್ಲಿ ಪ್ರಕಾಶನ ಜೇಬಿನಲ್ಲಿ ಇಟ್ಟದನ್ನು ಕಳೆದು ಉಳಿದುದು ಲಾಭ. ಇದು ಯಾರಿಗೆ ಹೋಗಬೇಕು ?"

"ಇಸ್ಮಾಯಿಲ್‌ಗೆ ಹೋಗಬೇಕು, ಅಥವಾ ಹಂಚಿಕೆಯಾಗಬೇಕು ?"

"ಎರಡನೆಯದು ಸರಿ. ಯಾಕೆಂದರೆ ಇಸ್ಮಾಯಿಲ್ ಒಬ್ಬನೇ ಆ ಕೆಲಸವನ್ನು ಮಾಡಬಲ್ಲವನಾಗಿದ್ದಿದ್ದರೆ ಗುಲಾಬ್‌ಚಂದನ ಸಹಾಯವನ್ನೂ ಪಡೆಯುತ್ತಿರಲಿಲ್ಲ. ಪ್ರಕಾಶನನ್ನೂ ಸಿಕ್ಕಿಸುತ್ತಿರಲಿಲ್ಲ. ಆದರಿಂದ ಈ ಪ್ರಸಂಗದಲ್ಲಿ ಇಸ್ಮಾಯಿಲ್ ಗುಲಾಬ್‌ಚಂದನಿಂದ ಸಹಾಯ ಪಡೆದಿದ್ದಾನೆ. ಪ್ರಕಾಶನನ್ನು ಸಿಕ್ಕಿಸುವ ತನ್ನ ಉದ್ದೇಶವು ನೆರವೇರಿದರೂ ಸಹ ಆಕಲಾಯವಾಗಿ ಬಂದ ಹಣದಲ್ಲಿ ಗುಲಾಬ್‌ಚಂದ್ ಭಾಗ ಕೇಳದಿರುವನೇ ? ಒಂದು ವಿಧವಾಗಿ ಗುಲಾಬ್‌ಚಂದ್‌ನ ಕೆಲಸವಾಗಿರುವಾಗ ತನ್ನ ಕೈಗೆ ಸಿಕ್ಕಿರುವ ಹಣದಲ್ಲಿ ಭಾಗ ಕೊಡುವಷ್ಟು ಇಸ್ಮಾಯಿಲ್ ಸಜ್ಜನನೇ ? ಒಂದು ವೇಳೆ ಹಂಚಿಕೆಯಾಗುವುದಾದರೂ ಯಾರಾರಿಗೆ ಎಷ್ಟೆಷ್ಟು ಎಂಬುದರಲ್ಲಿ ತಕರಾರು ಬಂದೇ ಬರುತ್ತದೆ."

"ನೀವು ಹೇಳುವುದು ನಿಜ. ನನಗೆ ಆ ಆಲೋಚನೆ ತೋರಲಿಲ್ಲ."

"ಇನ್ನೂ ಒಂದು ಮುಖ್ಯವಾದ ವಿಷಯವಿದೆ ಕುಪ್ಪು. ಈ ನಡುವೆ ಲತೆಯದೊಂದು ಪಾತ್ರವಿದೆ. ಅವಳು ಪ್ರಕಾಶನನ್ನು ವಾಸ್ತವವಾಗಿ ಪ್ರೀತಿಸುತ್ತಿದ್ದಾಳೆ. ಅವಳಿಗೆ ಈ ಘಟನೆಗಳ ಸುಳಿವು ಸ್ವಲ್ಪ ಸಿಕ್ಕಿದರೂ ಸಹ ಏನು ಮಾಡುತ್ತಾಳೆಂದು ಹೇಳುವುದು ಕಷ್ಟ. ಈ ಕಾರಣಗಳಿಂದ ಕ್ಷಿಪ್ರದಲ್ಲಿಯೇ ಯಾವುದೋ ಘಟನೆಯು ನಡೆದು ಅಪರಾಧಿಗಳು ತಾವಾಗಿ ಬಂದು ನಮ್ಮ ಕೈಯಲ್ಲಿ ಸಿಕ್ಕಿಬೀಳುತ್ತಾರೆ. ಅಲ್ಲಿಯವರೆವಿಗೆ ನಾವು ಸಮಾಧಾನದಿಂದ ಇರಬೇಕು."

"ಈಗ ನಾನೇನು ಮಾಡಲಿ ಸಾರ್ ?"

"ನೇರವಾಗಿ ಪಿಂಕ್ಸ್‌ಗೆ ಹೋಗು. ನೀನು ಒಡೆದಿಟ್ಟಿರುವ ಬಿಯರ್ ಬಾಟಲ್ ಇನ್ನೂ ಅಲ್ಲಿಯೇ ಇರಬೇಕಲ್ಲವೇ ?"

ಮರು ಮಾತಾಡದೇ ಕುಪ್ಪುಸ್ವಾಮಿ ಅಲ್ಲಿಂದ ಹೊರಟ.

## ೧೪

ಅನಂತರ ಮೂರು ನಾಲ್ಕು ಗಂಟೆಗಳ ಕಾಲ ಚಲಂ ಕುಳಿತಲ್ಲಿಯೇ ಕುಳಿತಿದ್ದ. ಈ ಮೂರು ದಿನಗಳಲ್ಲಿ ನಡೆದ ವಿವಿಧ ಘಟನೆಗಳೂ, ಆ ಸಂಬಂಧ ವಾದ ಆಲೋಚನೆಗಳೂ ಅವನ ತಲೆಯಲ್ಲಿ ಸುಳಿಯುತ್ತಿದ್ದವು. ಸಿಗರೇಟಿ ನಂತೆಯೇ ಒಂದಾದ ಮೇಲೆ ಒಂದು ಚುಟ್ಟಾ ಹಚ್ಚಿ ಹೊಗೆಯುಗುಳುತ್ತಿದ್ದ. ಕೈಯಲ್ಲಿದ್ದ ತುಂಡು ಚುಟ್ಟಾ ಎಸೆದು, ಎಳನೆಯ ಚುಟ್ಟಾ ಹಚ್ಚುವ ಸಮಯ ದಲ್ಲಿ ಹೊರಗಡೆ ಹಜಾರದಲ್ಲಿದ್ದ ಗಡಿಯಾರವು ಆರು ಗಂಟೆಗಳನ್ನು ಹೊಡೆದ ಶಬ್ದವು ಕೇಳಿಬಂದಿತು.

ಆಗ ಟೆಲಿಫೋನ್ ತೆಗೆದು ಸೆಂಟ್ರಲ್ ಪೋಲೀಸ್ ಸ್ಟೇಷನ್ನಿಗೆ ರಿಂಗ್ ಮಾಡಿ ಇಬ್ರಾಹೀಂ ಸಾಹೇಬರನ್ನು ಕರೆದ. ಅವರು ಸ್ಟೇಷನ್ನಿನಲ್ಲಿಯೇ ಇದ್ದರು.

"ಏನು ಸಾಹೇಬರೇ! ಇಸ್ಮಾಯಿಲ್ ಹೊರಗಡೆ ಓಡಿಯಾಡುತ್ತಿದ್ದಾ ನೆಂದು ಕೇಳಿದೆ."

ಅವರು ರಾಗವನ್ನೆಳೆದುಕೊಂಡು "ಅವನು ಚಕ್ಕರ್ ಕೊಟ್ಟ ಚಲಂ ಸ್ವಾಮಿ. ಆ ಬದ್ಮಾಷ್ ಹೆಂಗಸಿನ ಮಾತು ನಂಬಿ ಮೋಸಹೋದೆ. ನನ್ನ ಇಡೀ ಸರ್ವಿಸ್‌ನಲ್ಲಿಯೇ ಇಂತಹ ಅಪಮಾನವಾಗಿರಲಿಲ್ಲ." ಎಂದರು.

ಚಲಂ ವಿಷಯುವೇನೆಂದು ವಿಚಾರಿಸಿದ. ಅವರು ವಿವರವಾಗಿ ಎಲ್ಲ ವನ್ನೂ ಹೇಳಿದರು.

"ಅವನೀಗ ನನ್ನ ಕೈಗೆ ಸಿಕ್ಕಿಬಿದ್ದಿದ್ದಾನೆ. ಹಿಡಿದು ಕೊಡುತ್ತೇನೆ. ಏನು ಹೇಳುತ್ತೀರಿ ?"

ಸಾಹೇಬರಿಗೆ ಚಲಂನ ಮಾತಿನಲ್ಲಿ ನಂಬಿಕೆ ಬರಲಿಲ್ಲ.

"ಅದು ಬಹುಮಟ್ಟಿಗೆ ಅಸಂಭವ. ಅವನು ಒಳ್ಳೆಯ ನಸರಾಣಿ. ಯಾರ ಕೈಗೂ ಸಿಕ್ಕಿಹಾಕಿಕೊಳ್ಳುವುದೇ ಇಲ್ಲ. ಅವನನ್ನು ಪುನಃ ಲಾಕಪ್ಪಿನಲ್ಲಿ ಹಾಕಬಲ್ಲೆನಾದರೆ ನನ್ನ ಜೀವನವು ಸಾರ್ಥಕವಾಯಿತೆಂದುಕೊಳ್ಳುತ್ತೇನೆ. ನೀವು ಅದಕ್ಕೆ ಸಹಾಯ ಮಾಡಿದರೆ ಚಿರಋಣಿಯಾತರುತ್ತೇನೆ. ಆದರೆ ನನಗೆ ಅಂತಹ ಅದೃಷ್ಟವಿಲ್ಲ."

"ಎಂದಾದರೂ ನಾನು ವೃಥಾ ಆಸೆಯಿಟ್ಟದ್ದೇನೆಯೇ? ನನ್ನ ಮಾತು ನಂಬಿ. ಖಂಡಿತವಾಗಿ ನಿಮಗೆ ಅಂತಹ ಅದೃಷ್ಟವಿದೆ."

ಸಾಹೇಬರು ಅತ್ಯಾಶೆಯಿಂದ "ಹಾಗಾದರೆ ಏನೋ ಖರಾಮತ್ ಇರುವಂತಿದೆ. ಸ್ವಲ್ಪ ನನಗೂ ಹೇಳಿ." ಎಂದರು.

"ಈಗ ಏನೂ ಹೇಳುವ ಸ್ಥಿತಿಯಲ್ಲಿಲ್ಲ. ನಾನು ಪುನಃ ಟೆಲಿಫೋನ್ ಮಾಡಿ ಕರೆಯುತ್ತೇನೆ. ಆ ವೇಳೆಗೆ ಸೆಂಟ್ರಲ್ ಪೋಲೀಸ್ ಸ್ಟೇಷನ್ನಿನಲ್ಲಿ ಒಂದು ಜೀಪ್ ಸಿದ್ಧವಾಗಿರಲಿ. ಇಬ್ಬರು ಕಾನ್ಸ್ಟೇಬಲ್ಲುಗಳೂ, ಒಬ್ಬ ದಫೇದಾರನೂ ಕೈಕೋಳಗಳನ್ನಿಟ್ಟುಕೊಂಡು ತಯಾರಾಗಲಿ. ನಾನು ಕರೆದ ಕೂಡಲೇ ಬರಬೇಕೆಂದು ಅವರಿಗೆ ಹುಕ್ಕುಂ ಮಾಡಿ."

"ಅದೆಲ್ಲಾ ಯಾಕೆ, ಯಾವಾಗ ಬೇಕೋ ಆಗ ಫೋನ್ ಮಾಡಿ. ಕಾದಿರುತ್ತೇನೆ."

"ನಾನು ಕರೆಯುವುದು ಎಷ್ಟು ಹೊತ್ತಿಗೆಂಬುದು ನನಗೇ ಗೊತ್ತಿಲ್ಲ. ಅರ್ಧ ರಾತ್ರಿಯಾದರೂ ಆಯಿತು, ಬೆಳಗಿನ ಜಾವವಾದರೂ ಆಯಿತು. ಒಂದು ವೇಳೆ ಈ ದಿನವೇ ಆಗದೇ ನಾಳೆಯಾದರೂ ಆಗಬಹುದು."

"ಎಷ್ಟು ಹೊತ್ತು ಬೇಕಾದರೂ ಆಗಲಿ. ನಾನೇ ಕಾದಿರುತ್ತೇನೆ. ಇಸ್ಮಾಯೆಲ್‌ನ ಕೈಗೆ ಕೋಳಗಳನ್ನು ತೊಡಿಸುವ ಅವಕಾಶ ಬರುವುದಾದರೆ ಮೂರು ದಿನ ಬೇಕಾದರೂ ಅನ್ನ ನಿದ್ದೆಗಳನ್ನು ಬಿಟ್ಟು ಎದ್ದು ಕುಳಿತಿರುತ್ತೇನೆ."

ಚಲಮ್ಮು "ಹಾಗಾದರೆ ನಿಮ್ಮ ಇಷ್ಟ." ಎಂದು ಟೆಲಿಫೋನ್ ಡಿಸ್‌ಕನೆಕ್ಟ್ ಮಾಡಿದ.

ಆರು ಗಂಟೆಯಾಗಿ ಹೋಗಿದ್ದಿತು ಉಷೆಯು ಮನೆಗೆ ಹೋಗುವ ಸಮಯವಾಗಿತ್ತು. ಚಲಂ ಮಧ್ಯಾಹ್ನದಿಂದಲೂ ಹಾಗೆ ಕುಳಿತಿರುವಾಗ

ಕುಪ್ಪುಸ್ವಾಮಿಯು ಹೊರಗೆ ಹೋಗಿ ಅವನಿಂದ ಸಮಾಚಾರವನ್ನು ಎದುರು ನೋಡುತ್ತಿರುವಾಗ ತಾನು ಹೊರಟು ಹೋಗುವುದು ಸರಿಯೇ ಎಂದು ಯೋಚಿಸಿದಳು. ಎಷ್ಟು ಯೋಚಿಸಿದರೂ ತನಗೆ ಕೆಲಸವಿಲ್ಲವೆಂದು ಅವಳಿಗೆ ತೋರಿತು.

ಕೋಣೆಯ ಬಾಗಿಲಲ್ಲಿ ಬಂದು ನಿಂತು, ಬಾಗಿಲು ಸರಿಸಿ, ಮುಖ ಒಳಗಿಟ್ಟು "ನನಗೇನಾದರೂ ಕೆಲಸವಿದೆಯೇ ?" ಎಂದು ಕೇಳಿದಳು.

"ಈ ದಿನ ಏನೂ ಕೆಲಸವಿಲ್ಲ. ನೀನು ಹೋಗಬಹುದು. ಏನಿದ್ದರೂ ನಾಳೆಯ ದಿನ ಬೆಳಗಾಗ ನೋಡಿಕೊಳ್ಳೋಣ."

ಉಷೆಯು ಸಹ ಹೊರಟು ಹೋದಳು.

ಅದಾದನಂತರ ಎರಡು ಚುಟ್ಟಾಗಳನ್ನು ಸೇದುವ ಹೊತ್ತು ಉರುಳಿ ಹೋಯಿತು.

ಆಮೇಲೆ ಚಲಂನ ಸೂಕ್ಷ್ಮವಾದ ಕಿವಿಗೆ ಯಾರೋ ಮಹಡಿಯ ಮೆಟ್ಟಿಲುಗಳನ್ನು ಹತ್ತಿಬರುವ ಶಬ್ದ ಕೇಳಿಸಿತು. ಹೆಂಗಸರ ಹೈ ಹೀಲ್ ಷೂನ ಶಬ್ದ. ಅವನು ಯಾರನ್ನೂ ನಿರೀಕ್ಷಿಸಿರಲಿಲ್ಲ. ಆದರಿಂದ ಬರುವ ಹೆಂಗಸು ಯಾರೆಂದು ಕುತೂಹಲವುಂಟಾಯಿತು.

ಮತ್ತೂ ಒಂದು ಕ್ಷಣ. ಷೂನ ಕಟಕಟ ಶಬ್ದವು ಹತ್ತಿರ ಹತ್ತಿರಕ್ಕೆ ಬಂದಿತು. ಕಡೆಗೆ ಹಜಾರದಲ್ಲಿ ನಿಂತು "ಚಲಂ ಅವರು ಇದ್ದಾರೆಯೇ ?" ಎಂದು ಗಾಬರಿಯಿಂದ ಕೇಳಿದ ಸ್ತ್ರೀ ಕಂಠ ಧ್ವನಿ.

ಬಾಗಿಲು ಸರಿಸಿ ಹೊರಗೆ ನೋಡಿ "ಒಳಗೆ ಬನ್ನಿ ಲತಾದೇವಿ." ಎಂದು ಕರೆದ.

ಲತಾದೇವಿಯು ಒಳಗೆ ಬಂದಳು.

"ಚಲಂ ಅವರೇ ! ಅನಾಹುತವಾಯಿತು, ನಮ್ಮ ತಂದೆಯವರನ್ನು ಯಾರೋ ಚೂರಿಯಿಂದ ಹೊಡೆದರು."

"ಲತಾದೇವಿ, ವಿಷಯ ಎಂತಹವರನ್ನಾದರೂ ಅಧೀರರನ್ನಾಗಿ ಮಾಡುವಂತಹುದೇ. ಆದರೂ ನಮ್ಮಂತಹವರೊಡನೆ ಹೇಳುವಾಗ ವಿಷದವಾಗಿ ಹೇಳಬೇಕು. ಮೊದಲು ಹೇಳಿರಿ. ನಿಮ್ಮ ತಂದೆಯವರು ಈಗೆಲ್ಲಿದ್ದಾರೆ ? ಯಾರಾದರೂ ಡಾಕ್ಟರು ಬಂದು ಅವರನ್ನು ನೋಡಿದರೇ ?"

"ಚೂರಿಯು ಪೆಟ್ಟುಬಿದ್ದು ನರಳುತ್ತಾ ಬಿದ್ದಿದ್ದ ನಮ್ಮ ತಂದೆಯವರನ್ನು ನಾನು ನೋಡಿದಾಗ ಅವರು ತಮ್ಮ ಕೋಣೆಯಲ್ಲಿಯೇ ಇದ್ದರು. ಕೂಡಲೇ ಕಿರುಚಿಕೊಂಡೆ. ಹೋಟೆಲಿನವರೂ, ಅಕ್ಕಪಕ್ಕದ ಕೋಣೆಯವರೂ ಬಂದರು. ಅವರನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರು.

"ಸರಿ, ಡಾಕ್ಟರು ಏನು ಹೇಳುತ್ತಾರೆ?"

"ಗಾಯವೇನೋ ಅಪಾಯಕಾರಿಯಾದುದೇ. ಆದರೆ ಅವರು ಬದುಕಿಕೊಳ್ಳಬಹುದು ಎಂದು ಹೇಳುತ್ತಾರೆ. ಅದು ನನ್ನನ್ನು ಸಮಾಧಾನಗೊಳಿಸಲು ಹೇಳಿದ ಮಾತಾಗಿದ್ದರೂ ಇರಬಹುದು. ಬಹಳವಾಗಿ ರಕ್ತವು ಹೋಗಿದೆ. ಅವರು ಬದುಕಲಾರರೆಂದೇ ತೋರುತ್ತದೆ."

"ಇನ್ನು ಕುಳಿತುಕೊಂಡು ವಿಷಯ ಆಮೂಲಾಗ್ರಹವಾಗಿ ಹೇಳು

ಅದುವರೆವಿಗೆ ನಿಂತಿದ್ದ ಲತೆಯು ಕುಳಿತುಕೊಂಡಳು.

ಅನಂತರ "ಹೇಳುವುದಕ್ಕೆ ಹೆಚ್ಚು ವಿಷಯವೇನೂ ಇಲ್ಲ. ಅದಾವ ಕಾರಣವೋ ತಿಳಿಯದು. ಈ ದಿನ ಮಧ್ಯಾಹ್ನ ಟೀ ತೆಗೆದುಕೊಂಡನಂತರ ಮಲಗಿಕೊಳ್ಳಬೇಕೆಂದು ತೋರಿತು. ಹಾಸಿಗೆಯ ಮೇಲೆ ಬಿದ್ದು ಹೊರಳುತ್ತಿದ್ದೆ. ಒಂದು ಹೊತ್ತಿನಲ್ಲಿ ಎಚ್ಚರವಾಯಿತು. ಕಣ್ಣುಬಿಟ್ಟು ನೋಡುತ್ತೇನೆ. ಕೋಣೆಯೆಲ್ಲಾ ಕತ್ತಲಾಗಿದೆ. ಹೊರಗಡೆ ಕಿಟಕಿಯಲ್ಲಿಯೂ ಬೆಳಕಿಲ್ಲ. ಎದ್ದು ಹೊರಗೆ ಬಂದೆ ಯಾರೂ ಕಂಡುಬರಲಿಲ್ಲ. ನೇರವಾಗಿ ನಮ್ಮ ತಂದೆಯ ಕೋಣೆಗೆ ಹೋದೆ. ಅಲ್ಲಿಯೂ ದೀಪವಿರಲಿಲ್ಲ. ಹಾಗಾದರೆ ಅಲ್ಲಿಲ್ಲವೇನೋ ಎಂದು ಹೊರಗೆ ಬರುವುದರೊಳಗಾಗಿ ನರಳುವ ಧ್ವನಿಯು ಕೇಳಿಬಂದಿತು. ಅದು ನಮ್ಮ ತಂದೆಯ ಧ್ವನಿಯಂತೆ ಭಾಸ್ವವಾಯಿತು. ದೀಪ ಹಾಕಿ ನೋಡುತ್ತೇನೆ. ನಮ್ಮ ತಂದೆ ಹಾಸಿಗೆಯ ಮೇಲೆ ಬಿದ್ದು ನರಳುತ್ತಿದ್ದಾರೆ. ಹಾಕಿಕೊಂಡಿರುವ ಬಟ್ಟೆ, ಮಲಗಿರುವ ಹಾಸಿಗೆ ಎಲ್ಲವೂ ರಕ್ತಮಯವಾಗಿದೆ. ರಕ್ತ ಹೆಚ್ಚಾಗಿ ಸೋರದಿರಲೆಂದೋ ಅಥವಾ ನೋವಿನ ಬಾಧೆಯನ್ನು ತಡೆಯಲಾರದೇನೋ ಗಾಯದ ಮೇಲೆ ಕೈಯಿಟ್ಟುಕೊಂಡಿದ್ದಾರೆ. ಅವನ್ನು ನೋಡಿ ಕಿರುಚಿಕೊಂಡೆ. ನಾನ ಹೇಳಿದಂತೆ ಜನ ಓಡಿಬಂದು ಸೇರಿದರು. ಇಂತಹ ಅಪಾಯ ಸ್ಥಿತಿಯಲ್ಲಿ

ಹೋಟಲಿನಲ್ಲಿಟ್ಟುಕೊಳ್ಳುವುದು ಸರಿಯಲ್ಲವೆಂದು ಅವರನ್ನು ಟ್ಯಾಕ್ಸಿಯಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋದರು." ಎಂದಳು.

"ನಿಮ್ಮ ಕೆಂಪು ಬಣ್ಣದ ಸ್ಟೋರ್ಟ್ಸ್ ಕಾರೇ ಇದ್ದಿತಲ್ಲವೇ ?"

"ಆ ಸಮಯದಲ್ಲಿ ನಾನು ಡ್ರೈವ್ ಮಾಡಲಾರೆನೆಂದು ಟ್ಯಾಕ್ಸಿಯನ್ನೇ ಕರೆದೆ.

''ನಿಮ್ಮ ತಂದೆ ಗಾಯಗೊಂಡು ನರಳುತ್ತಿದ್ದುದಾಗಿ ಹೇಳಿದಿರಲ್ಲಾ. ಆಗ ನೀವು ಚೂರಿಯಿಂದ ಹೊಡೆದವರಾರೆಂದು ವಿಚಾರಿಸಲಿಲ್ಲವೇ ?"

"ವಿಚಾರಿಸದರುತ್ತೇನೆಯೇ ? ವಿಚಾರಿಸಿದೆ. ತಲೆಯು ನೋವೆಂದು ಮಲಗಿದ್ದರಂತೆ. ಕೋಣೆಯಲ್ಲಿ ದೀಪವಿರಲಿಲ್ಲ. ಯಾರೋ ಬಂದು ಚೂರಿಯಿಂದ ಹೊಡೆದು ಹೊರಟು ಹೋದರಂತೆ ಯಾರು ಹೊಡೆದರೆಂಬುದು ನನಗೆ ಗೊತ್ತಾಗಲಿಲ್ಲ - ಎಂದು ಹೇಳಿದರು."

ಚಲಂ ಸ್ವಲ್ಪ ಹೊತ್ತು ಯೋಚನೆ ಮಾಡುತ್ತಾ ಕುಳಿತುಕೊಂಡ. ಏಳೆಂಟು ಬಾರಿ ಹೊಗೆ ಎಳೆದುಕೊಂಡು ಉಗುಳಿದ. ಕಡೆಯ ಬಾರಿ ಬಿಟ್ಟ ಹೊಗೆಯನ್ನು ವರ್ತುಲಾಕಾರವಾಗಿ ಬಿಟ್ಟ. ಒಂದಾದನಂತರ ಒಂದರಂತೆ ಬಾಯಿಂದ ಹೊರಗೆ ಬಂದ ವರ್ತುಲಗಳು ಒಂದರ ಒಳಗೆ ಬಂದು ಹೋದವು. ಅನಂತರ ಲತೆಯನ್ನು ಕೇಳಿದ.

''ಆಯಿತು, ಈಗ ನೀವು ಬಂದಿರುವ ವಿಷಯವೇನು ?"

"ಇದೇನು ಈ ರೀತಿಯಾಗಿ ಕೇಳುತ್ತೀರಿ, ಚಲಂ ಅವರೇ. ಇಂತಹ ಸಮಯಗಳಲ್ಲಿ ಜನರು ಪತ್ತೇದಾರರ ಹತ್ತಿರಕ್ಕೆ ಯಾಕೆ ಬರುತ್ತಾರೆಂಬುದನ್ನು ಊಹೆ ಮಾಡಲಾರಿರಾ? ನಮ್ಮ ತಂದೆಯನ್ನು ಖೂನಿಮಾಡಲು ಪ್ರಯತ್ನಿಸಿದ ದುರಾತ್ಮರನ್ನು ಹಿಡಿದು ಅವರಿಗೆ ಶಿಕ್ಷೆಯಾಗುವಂತೆ ಮಾಡಬೇಕೆಂದು ಕೇಳಲು ಬಂದಿದ್ದೇನೆ."

ಚಲಂ ನಗುತ್ತಾ ''ಸರಿ, ಸರಿ. ಅದಕ್ಕೇ ಬಂದಿದ್ದೀರೆಂದು ಊಹೆ ಮಾಡಿದೆ. ಆದರೆ ಎಲ್ಲ ವಿಷಯಗಳನ್ನೂ ಖಚಿತ ಮಾಡಿಕೊಳ್ಳಬೇಕಷ್ಟೇ. ಅದರಿಂದ ಕೇಳಿದೆ." ಎಂದ.

''ಹೌದು, ಅದನ್ನು ಕೇಳುವುದಕ್ಕಾಗಿಯೇ ಬಂದಿದ್ದೇನೆ. ಇತರ

ಪತ್ತೇ ತರದೂದಿಗಾಗಿ ಎಷ್ಟು ಹಣವನ್ನು ಕೊಡಬೇಕೆಂದರೂ ಕೊಡಲು ತಯಾರಾಗಿದ್ದೇನೆ.”

‘‘ಬಹಳ ಸಂತೋಷ, ಲತಾದೇವಿ. ನೀವು ನಿಮ್ಮ ಕೋಣೆಯಲ್ಲಿದ್ದಾಗ ಯಾವ ಶಬ್ದವನ್ನೂ ಕೇಳಲಿಲ್ಲವೋ ?’’

“ಇಲ್ಲ. ಅದನ್ನು ಕೇಳುವಂತೆಯೂ ಇಲ್ಲ. ಪಿಂಕ್ಸ್‌ನ ದೇಗುಲದಂತಹ ಕೋಣೆಗಳನ್ನು ನೀವು ನೋಡಿಲ್ಲವೆಂದು ಕಂಡುಬರುತ್ತದೆ. ಒಂದು ಕೋಣೆಯಲ್ಲಿ ಕುಳಿತು ಸೋಡಾ ಬಾಟಲು ಹೊಡೆದರೂ ಸಹ ಮತ್ತೊಂದ ಕೋಣೆಗೆ ಕೇಳಿಬರುವುದಿಲ್ಲ.’’

‘‘ನಿಮ್ಮ ಕೋಣೆಯಿಂದ ಎದ್ದು ಹೊರಗೆ ಬಂದುದಾಗಿ ಹೇಳಿದಿರಲ್ಲಾ ಆ ಸಮಯದಲ್ಲಿ ಯಾರೂ ಕಂಡುಬರಲಿಲ್ಲವೆಂದಿರಿ. ಆಗ ನೀವು ಯಾರನ್ನು ನಿರೀಕ್ಷಿಸಿದ್ದಿರಿ ?”

“ಯಾರನ್ನೂ ನಿರೀಕ್ಷಿಸಿರಲಿಲ್ಲ. ನನ್ನ ಕೋಣೆಯಿಂದ ನಮ್ಮ ತಂದೆಯವರ ಕೋಣೆಗೆ ಹೋಗುತ್ತಾ ಯಾರೂ ಕಂಡುಬರಲಿಲ್ಲವೆಂದೆ.”

“ನೀವು ಈ ಕೇಸನ್ನು ನನಗೆ ಒಪ್ಪಿಸುವುದಕ್ಕಿಂತಲೂ ಮತ್ತಾರಿಗಾದರೂ ಒಪ್ಪಿಸುವುದು ಒಳ್ಳೆಯದು.”

ಎಷ್ಟು ಬೇಕಾದರೂ ಹಣ ಕೊಡುವುದಕ್ಕೆ ತಾನು ತಯಾರಾಗಿರುವಾಗ ಈ ಮನುಷ್ಯ ಹೀಗೆ ಮಾತಾಡುವುದು ಲತೆಗೆ ವಿಸ್ಮಯವಾಯಿತು.

“ಅದೇಕೆ ಹಾಗೆ ಹೇಳುತ್ತೀರಿ ?”

“ನೋಡಿ, ಲತಾದೇವಿ. ಪತ್ತೇ ತರದೂದಿನ ಸಮಯದಲ್ಲಿ ಯಾರು ನಿಜವಾದ ಅಪರಾಧಿಗಳೋ ಅವರನ್ನು ಗುರ್ತಿಸುವುದು ನನ್ನ ಸ್ವಭಾವ....”

“ನಾನೂ ಅದೇ ಉದ್ದೇಶದಿಂದ ಬಂದಿರುವುದು.”

“ಪೂರಾ ಹೇಳುವುದನ್ನು ಕೇಳಿರಿ. ನನಗೆ ಕೇಸು ಒಪ್ಪಿಸುವವರು, ಹಣ ಕೊಡುವವರೇ ಅಪರಾಧಿಗಳಾದರೂ ನಾನು ಹಿಂದೆ ಮುಂದೆ ನೋಡದೇ ಅವರು ಅಪರಾಧಿಗಳೆಂದು ಹೇಳುತ್ತೇನೆ.”

“ಅಂಪರೆ ನಾನೇ ನಮ್ಮ ತಂದೆಯವರಿಗೆ ಚೂರಿ ಹಾಕಿದೆನೆಂದೋ ನಿಮ್ಮ ಅಭಿಪ್ರಾಯ....”

"ಹಾಗೆ ನಾನು ಹೇಳುತ್ತಿಲ್ಲ, ಲತಾದೇವಿ. ನೀವು ಅವಕ್ಕೆ ಕಾರಣವಿರ ಬಹುದೆಂದು ನನಗೆ ತೋರುತ್ತದೆ."

ವಿಸ್ಮಯಾತ್ಮಳಾಗಿ ಲತೆಯು "ಅದನ್ನು ಹೇಗೆ ಹೇಳುತ್ತೀರಿ ?" ಎಂದು ಕೇಳಿದಳು

"ನೀವು ಪ್ರಕಾಶರನ್ನು ಪ್ರೀತಿಸುತ್ತಿರುವ ವಿಷಯ ನಿಮ್ಮ ತಂದೆಗೆ ತಿಳಿದಿದೆ. ಏಕಮಾತ್ರಪುತ್ರಿಯಾದ ನೀವು ಆತನನ್ನು ಮದುವೆಯಾಗುವುದು ಅವರಿಗೆ ಇಷ್ಟವಿಲ್ಲ. ಆದರೆ ಮಾಡುವುದೇನು ? ಪರಿಸ್ಥಿತಿಯು ಮಿತಿಮೀರಿದೆ. ತಮಗಿಷ್ಟವಿಲ್ಲದ ಕೆಲಸಗಳಾವುದನ್ನು ನೋಡುವುದಕ್ಕಿಂತಲೂ ಕಣ್ಣು ಮುಚ್ಚಿಕೊಳ್ಳುವುದೇ ಹಿತಕರವಾದುದೆಂದು ಆತ ಯಾಕೆ ಭಾವನೆ ಮಾಡಿರಬಹುದು ? ಅಂತಹ ಸಂದರ್ಭಗಳಲ್ಲಿ ಜನರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಆತ್ಮಹತ್ಯೆಯು ಅಪರಾಧ ಲತಾದೇವಿ. ಆದರಲ್ಲಿ ವಿಫಲತೆ ಹೊಂದಿದವರು ತಮ್ಮ ಮೇಲೆ ಬರಬಹುದಾದ ಅಪರಾಧವನ್ನು ತಪ್ಪಿಸಿಕೊಳ್ಳಲು ಯಾರೋ ತಮ್ಮನ್ನು ಕೊಲೆ ಮಾಡಿದರೆಂದು ಹೇಳುತ್ತಾರೆ ನಿಮ್ಮ ತಂದೆಯ ವಿಷಯದಲ್ಲಿಯೂ ಹೀಗೆಯೇ ಆಗಿರಬಾರದೇಕೆ ?"

"ಅದು ಸರಿಯಲ್ಲ. ಯಾರೋ ನಮ್ಮ ತಂದೆಯನ್ನು ಚೂರಿಯಿಂದಲೇ ಹೊಡೆದಿದ್ದಾರೆ, ನಾನು ಬಲ್ಲೆ !"

"ಹೇಗೆ ಬಲ್ಲಿರಿ ? ಯಾರು ಹೊಡೆದಿರಬಹುದೆಂದು ಸಂದೇಹಿಸುತ್ತೀರಿ ?"

"ಅದನ್ನೆಲ್ಲಾ ನಾನು ಹೇಳಬಲ್ಲೆನಾದರೆ ಪತ್ತೇದಾರನ ಬಳಿಗೆ ಯಾಕೆ ಬರಬೇಕು ?"

"ಪತ್ತೇದಾರನ ಬಳಿಗೆ ಬಂದುದರಲ್ಲಿ ತಪ್ಪಿಲ್ಲ. ಆದರೆ ನಿಮಗೆ ಗೊತ್ತಿರುವ ಕೆಲವಂಶಗಳನ್ನು ಮುಚ್ಚಿಡಲು ಪ್ರಯತ್ನ ಪಡುತ್ತಿದ್ದೀರಿ. ಅದು ಮಾತ್ರ ಸರಿಯಲ್ಲ.''

"ನಾನು ಯಾವ ಅಂಶಗಳನ್ನೂ ಮುಚ್ಚಿಡಲು ಪ್ರಯತ್ನಪಡುತ್ತಿಲ್ಲ."

"ಆತ್ಮಸಾಕ್ಷಿಯಾಗಿ ನೀವಾ ಮಾತನ್ನು ಹೇಳಬಲ್ಲಿರಾ ? ಹೊರಗೆ ಬಂದಾಗ ಯಾರೂ ಕಣ್ಣಿಗೆ ಬೀಳಲಿಲ್ಲವೆಂದು ಹೇಳಿದಿರಿ. ಆದರೆ ಯಾರನ್ನೂ

ನಿರೀಕ್ಷಿಸಿರಲಿಲ್ಲವೆನ್ನುತ್ತೀರಿ. ಅದು ತಪ್ಪು. ಹೊರಗೆ ಬಂದು ನೀವು ವಹಿದೆಯನ್ನೂ ಇಸ್ಮಾಯಿಲ್‌ನನ್ನು ನೋಡಿದಿರಿ. ಅವರು ಕಂಡುಬರಲಿಲ್ಲ."

ಚಲಂನ ಮಾತುಗಳನ್ನು ಕೇಳಿ ಲತೆಯ ಮುಖವು ಬಿಳಿಚಿಕೊಂಡಿತು ಅವಳು ಮೇಲೆದ್ದು ನಿಂತುಕೊಂಡು ಹೇಳಿದಳು.

"ನಾನು ಇಲ್ಲಿ ಬಂದುದೇ ತಪ್ಪಾಯಿತು. ಮೊದಲು ನಮ್ಮ ತಂದೆಯವರು ಅಪರಾಧ ಮಾಡಿದರೆಂದು ಆರೋಪ ಮಾಡಿದಿರಿ. ಈಗ ನನ್ನ ಮೇಲೆಯೇ ಅಕ್ಷೇಪಣೆ ಮಾಡಲು ಮೊದಲುಮಾಡಿದ್ದೀರಿ. ಪ್ರಕಾಶರು ದಸ್ತಗಿರಿ ಮಾಡಲ್ಪಟ್ಟಾಗ ನೀವು ನಡೆದುಕೊಂಡ ತರಹದಿಂದ ನಿಮ್ಮನ್ನು ಸಂಭಾವಿತರೆಂದುಕೊಂಡೆ. ಅದರಿಂದಲೇ ಇಲ್ಲಿಗೆ ಬಂದೆ. ಈಗ ನೀವು ಮಾತನಾಡುವ ರೀತಿಯನ್ನು ನೋಡಿದರೆ ನಾನಿಲ್ಲಿ ಬಂದದ್ದು ಸರಿಹೋಗಲಿಲ್ಲವೆಂದು ಕಾಣುತ್ತದೆ. ನನಗೆ ಇಲ್ಲಿ ಇನ್ನೇನೂ ಕೆಲಸವಿಲ್ಲ, ಹೋಗುತ್ತೇನೆ."

ಚಲಂ ನಗುತ್ತಾ, "ಸ್ವಲ್ಪ ನಿಂತುಕೊಳ್ಳಿರಿ, ಲತಾದೇವಿ. ನಾನು ಹೇಳುವುದೊಂದು ಮಾತನ್ನು ಕೇಳಿಕೊಂಡು ಹೋಗುವಿರಂತೆ ಪ್ರಕಾಶರು ತಮ್ಮನ್ನು ಬಿಡಿಸಬೇಕೆಂದು ನನ್ನನ್ನು ಪ್ರಾರ್ಥಿಸಿದ್ದಾರೆ. ಅವರ ತಂದೆ ರಮಾನಂದಪೈಗಳು ನಿನ್ನೆಯ ದಿನ ಬಂದು ಕ್ರಮವಾಗಿ ನನಗೆ ಆ ಕೇಸನ್ನು ಒಪ್ಪಿಸಿಹೋಗಿದ್ದಾರೆ. ತಕ್ಕಮಟ್ಟಿಗೆ ಆ ಪತ್ತೇತರದೂದು ಮುಂದುವರಿದಿದೆ. ಪ್ರಕಾಶರ ಮೇಲೆ ನಡೆದಿರುವ ಷಡ್ಯಂತ್ರದಲ್ಲಿ ಇಸ್ಮಾಯಿಲ್‌ನದು ಪ್ರಧಾನ ಪಾತ್ರ. ನಿಮಗೆ ಆಸಕ್ತಿಯನ್ನುಂಟುಮಾಡುವ ವಿಷಯವೊಂದನ್ನು ಹೇಳುತ್ತೇನೆ, ಕೇಳಿರಿ. ಇದರಲ್ಲಿ ನಿಮ್ಮ ತಂದೆಯವರ ಸಂಬಂಧವೂ ಇದೆ. ಇದನ್ನೆಲ್ಲಾ ಯಾಕೆ ಹೇಳುತ್ತಿದ್ದೀರೆನ್ನುತ್ತೀರೋ? ನೀವು ಯಾವ ವಿಷಯಗಳನ್ನು ಮುಚ್ಚಿಡಲು ಪ್ರಯತ್ನ ಮಾಡುತ್ತಿದ್ದೀರೋ ಅದು ಒಂದು ವಿಧವಾಗಿ ಈಗಾಗಲೇ ಬೆಳಕಿಗೆ ಬರುತ್ತಿದೆ." ಎಂದ.

ನಿಂತುಕೊಂಡಿದ್ದ ಲತೆಯ ಕಾಲುಗಳು ಕುಸಿದಂತೆ ಕುರ್ಚಿಯ ಮೇಲೆ ಕುಳಿತುಕೊಂಡಳು.

ಸುಧಾರಿಸಿಕೊಳ್ಳಲು ಸ್ವಲ್ಪ ಅವಕಾಶವನ್ನು ಕೊಟ್ಟು, "ಈಗೇನು ಹೇಳುತ್ತೀರಿ, ಲತಾದೇವಿ." ಎಂದ ಚಲಂ.

ಅವಳು ಹತಾಶಳಾಗಿ "ಏನು ಹೇಳಲಿ. ನನಗೇನೂ ತೋರುವುದಿಲ್ಲ." ಎಂದಳು.

"ನಿಮಗೇನು ಗೊತ್ತಿದೆಯೋ ಎಲ್ಲವನ್ನೂ ಹೇಳಿರಿ."

ಲತೆಯು ಏನೂ ಮಾತನಾಡಲಿಲ್ಲ.

"ಹೇಳಿ, ಲತಾದೇವಿ."

ಪ್ರಯತ್ನಪುರಸ್ಸರವಾಗಿ ಅವಳು ಹೇಳಿದಳು. "ಚಲಂ ಅವರೇ. ನನಗೆ ಗೊತ್ತಿರುವುದು ಅತ್ಯಲ್ಪ. ಅದಷ್ಟನ್ನೂ ನಿಮಗೆ ಹೇಳಲು ತಯಾರಾಗಿದ್ದೇನೆ. ಆದರೆ ನೀವು ನನಗೊಂದು ಉಪಕಾರವನ್ನು ಮಾಡಬೇಕು. ನಮ್ಮ ತಂದೆ ಉತ್ಕ್ರಮಣಾವಸ್ಥೆಯಲ್ಲಿದ್ದಾರೆ. ದೈವಾನುಗ್ರಹದಿಂದ ಅವರು ಉಳಿದುಕೊಳ್ಳುವುದಾದರೆ ಅವರಿಗೇನೂ ತೊಂದರೆಯಾಗಬಾರದು. ಒಂದು ವೇಳೆ ಅವರು ಕಾಲವಶರಾಗುವುದಾದರೂ ಅವರ ಹೆಸರಿಗೆ ಕಲಂಕವು ತಟ್ಟಬಾರದು" ಎಂದು ಹೇಳಿ ಎದ್ದುನಿಂತುಕೊಂಡು, ಚಲಂನ ಎರಡು ಕೈಗಳನ್ನೂ ಹಿಡಿದುಕೊಂಡು, "ಇದನ್ನು ನಿಮ್ಮ ಕಾಲುಗಳು ಎಂದು ಭಾವಿಸಿರಿ. ನಿಮ್ಮ ತಂಗಿಯೊಬ್ಬಳು ಇಂತಹ ಸಂಧಿಗ್ಧತೆಯಲ್ಲಿ ಸಿಕ್ಕಿಹಾಕಿಕೊಂಡಿದ್ದರೆ ಯಾವ ರೀತಿಯಾಗಿ ಸಹಾಯ ಮಾಡುತ್ತಿದ್ದಿರೋ ಆ ರೀತಿಯಾಗಿ ಸಹಾಯಮಾಡಿರಿ." ಎಂದು ಕೇಳಿಕೊಂಡಳು.

ಚಲಂ ಅವಳನ್ನು ಸಮಾಧಾನಪಡಿಸಿ, ಕುಳ್ಳಿರಿಸಿ, ಸ್ವಾಂತವಚನಗಳಿಂದ "ಲತಾದೇವಿ, ನೀವು ಹೇಳಿದ ಕಡೆಯ ಮಾತು ಸರಿ. ತಂಗಿಗೆ ಅಣ್ಣನು ಏನು ಮಾಡುವುದಕ್ಕೆ ಸಾಧ್ಯವೋ ಅಷ್ಟನ್ನೂ ಮಾಡುತ್ತೇನೆ. ಆದರೆ ಆ ಯಾವ ವಾಗ್ದಾನವನ್ನೂ ನನ್ನಿಂದ ಅಪೇಕ್ಷಿಸಬೇಡಿರಿ." ಎಂದು ಹೇಳಿದ.

"ನೀವು ಹೇಗೆ ಹೇಳುತ್ತೀರೋ ಹಾಗೆ ಕೇಳುತ್ತೇನೆ. ನಮ್ಮ ತಂದೆಗೆ ಯಾವ ತೊಂದರೆ, ಕಲಂಕಗಳೂ ಬರದಂತೆ ನೋಡಿಕೊಂಡರೆ ಸಾಕು."

"ಸರಿ. ನಿಮಗೆ ಈ ವಿಷಯವೇನು ಗೊತ್ತಿದೆಯೋ ಅವೆಲ್ಲವನ್ನೂ ಚಾಚೂ ತಪ್ಪದೆ ಹೇಳಿರಿ."

ಚಲಂ ಮಾತನಾಡಿದ ತರಹದಿಂದ ಅವಳ ಮನಸ್ಸಿಗೆ ಎಷ್ಟೋ ಅಪ್ಯಾಯಮಾನವಾಗಿತ್ತು. ತನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಅವಳು ಯಾರ

ಮುಂದಾದರೂ ತೋಡಿಕೊಳ್ಳಬೇಕಾಗಿತ್ತು. ವಿಷಯ ಮನಸ್ಸಿಗೆ ಭಾರವಾಗಿ ಒಳಗೆ ಕುಳಿತಿತ್ತು. ಅದರಿಂದ ಲತೆ ಹೇಳತೊಡಗಿದಳು.

"ಈ ದಿನ ಮಧ್ಯಾಹ್ನ ಟೀ ಕುಡಿದಾದ ಮೇಲೆ ನನಗೆ ಮಲಗಿಕೊಳ್ಳ ಬೇಕೆಂದು ತೋರಿದ್ದೂ ನಾನು ಮಲಗಿಕೊಂಡದ್ದೂ ನಿಜ. ನಿದ್ದೆ ಹತ್ತು ವಂತೆಯೂ ಆಯಿತು. ಆದರೆ ಅಷ್ಟರಲ್ಲಿ ನಮ್ಮ ತಂದೆಯೂ, ಇಸ್ಮಾಯಿಲ್‌ನೂ, ವಹಿದೆಯೂ ಒಳಗೆ ಬಂದರು. ಅವರುಗಳು ಬಂದಾಗ ನನಗೆ ಇಂತಹವರೇ ಬಂದರೆಂಬುದು ಗೊತ್ತಾಗಲಿಲ್ಲ. ಯಾರೋ ಒಳಗೆ ಬಂದ ರೆಂದುಕೊಂಡೆ. ಹೋಟೆಲ್ ಜವಾನನೋ, ಆಯಾನೋ ಬಂದಿರಬೇಕೆನ್ನಿ ಸಿತು. ನನ್ನ ಪಾಡಿಗೆ ನಾನು ಮಲಗಿಕೊಂಡಿದ್ದೆ. ಅವರು ಮಾತನಾಡಿ ಕೊಂಡುದರಲ್ಲಿ ಬಂದವರು ಇಂತಹವರೆಂದು ಗೊತ್ತಾಯಿತು...."

"ಒಂದು ನಿಮಿಷ. ನೀವು ಅಲ್ಲಿ ಮಲಗಿದ್ದರೂ ಅವರು ಮಾತನಾಡಿದರೆ..."

"ಉಹುಂ, ನಾನಿರುವುದು ಅವರಿಗೆ ಗೊತ್ತಾಗಲಿಲ್ಲವೆಂದು ಕಾಣು ತ್ತದೆ. ಅಥವಾ ಉದ್ವೇಗದಲ್ಲಿ ಯಾರಾದರೂ ಇದ್ದಾರೆಯೋ ಇಲ್ಲವೋ ಎಂಬುದನ್ನು ಗಮನಿಸದೆಯೂ ಇದ್ದಿರಬಹುದು. ಅಲ್ಲಿರುವುದು ದೊಡ್ಡ ಕೋಣೆಗಳು. ಅಟಾಚ್ಡ್ ಬಾತ್‌ರೂಂ ಇದ್ದರೂ ಪ್ರತ್ಯೇಕವಾದ ಸ್ಥಳ ವೊಂದಿಲ್ಲ. ಅದರಿಂದಲೇ ತಂದೆಯವರ ಕೋಣೆಯಲ್ಲಿಯೇ ಇರದೇ ಬೇರೆ ಕೋಣೆ ಮಾಡಿಕೊಂಡೆ. ಆ ಕೋಣೆಯಲ್ಲಿಯೂ ಪ್ರತ್ಯೇಕತೆಯು ಬೇಕಾ ಯಿತು. ಹೋಟೆಲಿನವರಿಗೆ ಹೇಳಿದೆ. ಅವರಲ್ಲಿ ದಪ್ಪವಾದ ದೊಡ್ಡದೊಂದು ಪರದೆಯದ್ದಿತೆಂದು ತೋರುತ್ತದೆ. ತಂದು ಹಾಕಿದರು. ನನ್ನ ಮಂಚವಿರು ವುದು ಅಲ್ಲಿಯೇ......."

"ಸರಿ ಮುಂದೆ ಹೇಳಿರಿ—"

"ಉದ್ವೇಗದಲ್ಲಿದ್ದುದರಿಂದ ಅವನು ನನ್ನನ್ನು ಗಮನಿಸಲಿಲ್ಲವೋ ಏನೋ ಎಂದು ಹೇಳಿದೆನಲ್ಲಾ. ಅದು ನಿಜ. ಅವರು ಉದ್ವೇಗದಲ್ಲಿಯೇ ಇದ್ದರು. ಎರಡು ಮಾತುಗಳನ್ನಾಡುವುದರೊಳಗಾಗಿ ಅದು ಕಂಡುಬಂದಿತು. ಅವರು ಮೆಲ್ಲನೆಯ ಧ್ವನಿಯಲ್ಲಿ ಮಾತನಾಡುತ್ತಿದ್ದರೂ ಅದು ಜಗಳದಂತಿದ್ದಿತು. ನಮ್ಮ ತಂದೆ ಇಸ್ಮಾಯಿಲ್‌ಗೆ ಏನೋ ಕೆಲಸ ಹೇಳಿದ್ದರಂತೆ. ಅದಕ್ಕಾಗಿ ಹತ್ತು ಸಾವಿರ ರೂಪಾಯಿಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದ್ದರಂತೆ.

ಅದನ್ನು ಕೊಡಬೇಕೆಂದೂ ಇಂದೇ ತಾನು ಊರಿಗೆ ಹೊರಟು ಹೋಗಬೇಕಾಗಿದೆ ಎಂದೂ ಇಸ್ಮಾಯಿಲ್ ಹೇಳಿದ. ಪ್ರಕಾಶರು ಸಿಕ್ಕಿ ಬಿದ್ದಿರುವ ಅಪರಾಧದಲ್ಲಿ ನಮ್ಮ ತಂದೆಯುವರದೂ ಯಾವುದೋ ಭಾಗವಿದೆಯೆಂದು ತೋರುತ್ತದೆ. ಬ್ಯಾಂಕಿನಿಂದ ತಂದ ನಲವತ್ತು ಸಾವಿರ ರೂಗಳಲ್ಲಿ ಮೂರು ಸಾವಿರಗಳನ್ನು ಪ್ರಕಾಶನ ಜೇಬಿನಲ್ಲಿಡಲಾಯಿತು. ಉಳಿದ ಮುವತ್ತೆಂಟು ಸಾವಿರಗಳನ್ನು ಕೊಟ್ಟುಬಿಡು. ನನ್ನ ಮಾತಿನಂತೆ ನಾನು ಹತ್ತುಸಾವಿರ ಕೊಡುತ್ತೇನೆಂದರು. ಮುಪತ್ತೇಳು ಸಾವಿರಗಳನ್ನು ಕೈಗೆಕೊಟ್ಟು ಹತ್ತುಸಾವಿರ ಬಿಕ್ಷ ತೆಗೆದುಕೊಳ್ಳಲು ನಾನೇನೂ ಹುಚ್ಚನಲ್ಲವೆಂದ ಇಸ್ಮಾಯಿಲ್."

"ಅದಕ್ಕೆ ನಿಮ್ಮ ತಂದೆ ಏನೆಂದರು ?"

"ಹೇಳುತ್ತೇನೆ. ಅವರು ಹೇಳಿದ್ದು ನ್ಯಾಯವೆಂದು ನನಗೆ ತೋರುತ್ತದೆ. ನಲವತ್ತುಸಾವಿರಗಳು ಅಪರಾಧ ಸಂಬಂಧವಾದ ದ್ರವ್ಯ. ಅದನ್ನು ಇಸ್ಮಾಯಿಲ್ ಆಗಲೀ ತಾವಾಗಲೀ ಉಪಯೋಗಿಸಿ ಕೊಳ್ಳಬಾರದು. ಮೂರುಸಾವಿರಗಳು ಪೋಲೀಸಿನವರಿಗೆ ಸಿಕ್ಕಿಯೇ ಇವೆ. ಇನ್ನುಳಿದ ಮುವತ್ತೇಳು ಪೋಲೀಸನವರಿಗೋ ಬ್ಯಾಂಕಿನವರಿಗೋ ಸಿಕ್ಕುವಂತೆ ಮಾಡಬೇಕು. ಹತ್ತುಸಾವಿರಗಳನ್ನು ತಮ್ಮ ಕೈಯಿಂದ ಕೊಡುತ್ತೇನೆ–ಎಂದರು. ಅವನು ಅದಕ್ಕೆ ಒಪ್ಪಲಿಲ್ಲ. ಆ ಚಕ್ ಕೊಟ್ಟವರು ನಮ್ಮ ತಂದೆಯುವರೇ ಆದರೂ ಅದರಿಂದ ನಲವತ್ತು ಸಾವಿರಗಳನ್ನು ತೆಗೆದು ಕೊಂಡವನು ತಾನೆಂದೂ ಅದು ನಮ್ಮ ತಂದೆಗೆ ಸಂಬಂಧವಿಲ್ಲವೆಂದೂ ಹೇಳಿದ. ಬೇಕಾಗಿದ್ದರೆ ವಾಸ್ತವವಾಗಿ ಆ ಚಕ್‌ನಲ್ಲಿ ಬರೆದಿದ್ದ ನಾಲ್ಕುಸಾವಿರಗಳನ್ನು ಕೊಡುವುದಾಗಿ ಹೇಳಿದ."

"ಅನಂತರ ಏನು ಇತ್ಯರ್ಥವಾಯಿತು."

"ಇತ್ಯರ್ಥವಾಗಲೇ ಇಲ್ಲ. ಅವನು ಜಗಳವಾಡಿಕೊಂಡು ಮಹಡಿಯ ಕೋಣೆಗೆ ಹೊರಟು ಹೋದ, ಅನಂತರ ನಾನು ಹೇಳಿದೆಲ್ಲಾವೂ ಸರಿ. ಅವನು ಹೊರಟು ಹೋದನಂತರ ಸ್ವಲ್ಪ ಹೊತ್ತು ಬಿಟ್ಟುಕೊಂಡು ನಮ್ಮ ತಂದೆಯ ಕೋಣೆಯ ಹೋದೆ. ಅವರು ಮಂಚದ ಮೇಲೆ ಮಲಗಿಸಿಕೊಂಡಿದ್ದರು. ನಿದ್ದೆ ಮಾಡುತ್ತಿರಲಿಲ್ಲ. ಕಣ್ಣು ಬಿಟ್ಟು ಕೊಂಡಿದ್ದರು. ಆದರೂ ನಿದ್ದೆ ಬಂದವರಂತೆ ಅಚಲವಾಗಿ ಬಿದ್ದು ಕೊಂಡಿದ್ದರು. ನಾನು ಅವರನ್ನೇನೂ ಮಾತನಾಡಿಸ ಬೇಕೆಂದು ಹೋಗಿರಲಿಲ್ಲ. ಏನು ಮಾಡುತ್ತಿದ್ದಾರೆಯೋ ನೋಡಿ

ಕೊಂಡು ಬರೋಣವೆಂದು ಹೋಗಿದ್ದೆ. ಪತ್ರಿಕೆಗಾಗಿ ಹುಡುಕಿಕೊಂಡು ಹೋದವಳಂತೆ ಅಲ್ಲಿ ಬಿದ್ದಿದ್ದ ದಿನಪತ್ರಿಕೆಯನ್ನು ತೆಗೆದುಕೊಂಡು ನನ್ನ ಕೋಣೆಗೆ ಬಂದು ಬಿಟ್ಟೆ. ಪುನಃ ಬಂದು ಮಲಗಿಕೊಂಡರೂ ನಿದ್ದೆ ಬರಲಿಲ್ಲ ಸಂಜೆಯುವರೆವಿಗೆ ಅಲ್ಲಿಯೇ ಇದ್ದೆ. ಸುಮಾರು ಆರೂವರೆ ಗಂಟೆಯಾಯಿತು ಇನ್ನೂ ಮಲಗಿರುವುದೇನೆಂದು ಮೇಲೆದ್ದೆ. ಹೊರಗೆ ಹೋಗುವ ಮೊದಲು ತಂದೆಯುವರಿದ್ದ ಕೋಣೆಗೆ ಹೋಗಿ ಸೇರಿದೆ. ಅವರನ್ನು ಚೂರಿಯಿಂದ ಇರಿ ಯಲಾಗಿತ್ತು."

"ಯಾರೂ ಇರಲಿಲ್ಲವೆಂದು ಹೇಳಿದಿರಲ್ಲ. ಯಾರೋ ಎಂಬುದಕ್ಕೆ ವಹಿ ಮತ್ತು ಇಸ್ಮಾಯಿಲ್ ಎಂದು ತಾನೇ ಅರ್ಥ ?"

"ಹೌದು. ನಮ್ಮ ತಂದೆಯುವರಿಗೆ ಗಾಯವಾಗಿರುವುದನ್ನು ನೋಡಿದ ಕೂಡಲೇ ಇಸ್ಮಾಯಿಲ್ ಆರೀತಿಯಾಗಿ ಮಾಡಿರಬಹುದೆಂದು ನನಗೆ ತೋರಿತು"

"ಲತಾದೇವಿ. ಯಾರಿಂದ ಈ ರೀತಿಯಾಯಿತೆಂದು ನೀವು ನಿಮ್ಮ ತಂದೆ ಯುವರನ್ನು ಕೇಳಲಿಲ್ಲವೇ ?"

"ಕೇಳಿದೆ. ಕೇಳದೇ ಉಂಟೆ ? ಅವರು ಯಾರು ಮಾಡಿದರೋ ತಮಗೆ ಗೊತ್ತಾಗಲಿಲ್ಲವೆಂದು ಹೇಳಿದರು. ನಾನು ಅದನ್ನು ನಂಬಲಿಲ್ಲ. ಯಾವುದೋ ಕಾರಣದಿಂದ ಇಸ್ಮಾಯಿಲ್‌ನ ಹೆಸರು ಮುಚ್ಚಿಡುತ್ತಿದ್ದಾ ರೆಂದು ಭಾವಿಸಿ ವಹಿದೆಯ ಕೋಣೆಗೆ ಸಹ ಹೋಗಿ ನೋಡಿದೆ. ಅವರುಗಳ್ಯಾ ಯಾರೂ ಇರಲಿಲ್ಲ.

"ಸರಿ ಇನ್ನೊಂದು ವಿಷಯ ಕೇಳಬೇಕಾಗಿದೆ. ನೀವು ಪ್ರಕಾಶರನ್ನು ಪ್ರೀತಿಸುತ್ತಿರುವುದು ನಿಮ್ಮ ತಂದೆಯುವರಿಗೆ ಗೊತ್ತು."

''ಗೊತ್ತು. ನನ್ನನ್ನು ಕೇಳಿದರು. ನಾನೇ ಹೇಳಿದೆ.

"ಯಾವಾಗ ಕೇಳಿದರು ?"

"ಮೊನ್ನೆಯ ದಿನ ಸಾಯಂಕಾಲ ಪ್ರಕಾಶರನ್ನು ದಸ್ತಗಿರಿಮಾಡಿದರಷ್ಟೇ. ನನಗೆ ಬಹಳ ದುಃಖವಾಯಿತು. ಹಾಸಿಗೆಯ ಮೇಲೆ ಮಲಗಿಕೊಂಡು ಅಳುತ್ತಾ ಇದ್ದೆ. ಆಗ ನಮ್ಮ ತಂದೆ ಬಂದು ಏನಾಯಿತೆಂದು ವಿಚಾರಿಸಿದರು. ನನ್ನಿಂದ ಮಾತನಾಡಲಾಗಲಿಲ್ಲ. ಆಗ ವಹಿದೆಯು" ನಿಮ್ಮ ಮಗಳು ಪ್ರಕಾಶ ನನ್ನು ಪ್ರೇಮಮಾಡುತ್ತಾಳೆ. ಆವನ ದಸ್ತಗಿರಿಯಾಯಿತಲ್ಲ—ಎಂದು ದುಃಖ

ದಿಂದ ಅಳುತ್ತಿದ್ದಾಳೆ" ಎಂಬುದಾಗಿ ಪರಿಹಾಸದಿಂದ ಹೇಳಿದಳು. ಅವಳು ಹೊರಟು ಹೋದ ಮೇಲೆ ನಮ್ಮ ತಂದೆ ಒತ್ತಾಯ ಪಡಿಸುತ್ತಾ ಕೇಳಿದರು. ನಾನು ಹೌದೆಂದು ಹೇಳಿದೆ."

"ಅದಕ್ಕೆ ನಿಮ್ಮ ತಂದೆ ಏನಾದರೂ ಹೇಳಿದರೋ ? "

"ಹುಂ. ಮೊದಲೇ ಈ ವಿಷಯ ತಮಗೆ ಹೇಳಬಾರದಾಗಿತ್ತೇ ಎಂದರು."

"ನೀವು ಹೇಳುವುದು ಬಹಳ ಆಶ್ಚರ್ಯಕರವಾಗಿದೆ, ಲತಾದೇವಿ, ನೀವು ಶನಿವಾರಕ್ಕೆ ಕೂದಲೇ ಪ್ರಕಾಶರೊಂದಿಗೆ ಸ್ನೇಹದಿಂದ ಇದ್ದೀರಿ. ಅವರೊಡನೆ ಓಡಿಯಾಡುತ್ತಿದ್ದೀರಿ. ಆಗ ನಿಮ್ಮ ತಂದೆಗೆ ಗೊತ್ತಾಗಲಿಲ್ಲವೋ ?''

''ಆಗ ನಾನು ಪ್ರಕಾಶರನ್ನು ಪ್ರೇಮಿಸುತ್ತಿದ್ದೇನೆಂದು ನಮ್ಮ ತಂದೆ ಭಾವಿಸಲಿಲ್ಲ. ಮೊದಲು ಪ್ರಕಾಶರನ್ನು ಸ್ನೇಹಮಾಡಿಕೊಟ್ಟವಳು ವಹಿದೆ. ನಾನು ಅದರೊಡನೆ ಜಗಳವಂಡುತ್ತಿದ್ದಾಗ ವಹಿದೆಯ ಸ್ನೇಹಿತರೊಡನೆ ಓಡಿಯಾಡುತ್ತಿದ್ದೇನೆಂದು ನಮ್ಮ ತಂದೆ ಭಾವಿಸಿದ್ದರೆಂದು ತೋರುತ್ತದೆ."

''ನಿಮ್ಮ ತಂದೆಯವರಿಗೆ ಮೊದಲು ಸುರಾಜ್ ಮಲ್ ಎಂದು ಹೆಸರಿದ್ದಿತಲ್ಲವೇ ? "

ಲತೆಯು ವಿಸ್ಮಿತಳಾಗಿ ನೋಡುತ್ತಾ ''ಹೌದು. ಅದು ನಿಮಗೆ ಹೇಗೆ ಗೊತ್ತಾಯಿತು." ಎಂದಳು.

''ಅದನ್ನು ಹೇಳುತ್ತೇನೆ. ಅವರು ತಮ್ಮ ಹೆಸರು ಬದಲಾಯಿಸಿ ಕೊಳ್ಳಲು ಕಾರಣವೇನೆಂಬುವನ್ನು ಹೇಳಿರಿ"

''ಸುಮಾರು ಮೂರು ವರ್ಷದ ಹಿಂದೆ ಕವರೊಂದು ಕುದುರೆಯನ್ನು ಕೊಂಡು ಕೊಂಡರು. ಇಂದು ಅವರಿಗಿರುವ ಐಶ್ವರ್ಯವಷ್ಟಕ್ಕೂ ಆ ಕುದು ರೆಯೇ ಬಲುಮಟ್ಟಿಗೆ ಕಾರಣವೆಂದು ಹೇಬಳಹುದು. ಆ ಕುದುರೆಯ ಹೆಸರು ಗುಲಾಬಿ. ಅದು ಅದೃಷ್ಟದ ಕುದುರೆಯೆಂದು ನಮ್ಮ ತಂದೆಯವರು ಅದರ ಹೆಸರನ್ನೂ ಕೂಡಿಸಿ ಗುಲಾಬ್ ಚಂದ್ ಎಂದು ಹೆಸರಿಟ್ಟುಕೊಂಡರು."

''ಈ ರೇಸ್ ದಂಧೆಯನ್ನು ಮಾಡುವ ಮೊದಲು ಅವರು ಏನು ಮಾಡುತ್ತಿದ್ದರೆಂಬುದು ನಿಮಗೆ ನೆನಪಿದೆಯೇ ?''

''ಹುಂ. ಆವರೇನೂ ಮಾಡುತ್ತಿರಲಿಲ್ಲ ಮೊದಲು ಯಾವುದೋ ವ್ಯಾಪಾರ ಸಾಪಾರವನ್ನು ಮಾಡುತ್ತಿದ್ದರು ಅನಂತರ ಮೂರು ವರ್ಷಗಳ

ಕಾಲ ದೇಶಾಂತರ ಹೊರಟು ಹೋದರು. ಆಮೇಲೆ ಬಂದವರು ರೇಸ್ ದಂಧೆ ಮೊದಲು ಮಾಡಿದರು. ನಮ್ಮ ತಂದೆ ದೇಶಾಂತರ ಹೋಗಿದ್ದ ದಿನ ಗಳು ನನಗೆ ಚೆನ್ನಾಗಿ ನೆನಪಿದೆ. ಆಗಲೇ ನಮ್ಮ ತಾಯಿ ಸತ್ತುಹೋದುದು. ನನಗೆ ಯಾರೂ ದಿಕ್ಕಿಲ್ಲದೇ ಬಂಧುಗಳ ಮನೆ ಸೇರಿದ್ದೆ.''

ಲತೆಯು ಹೇಳಿದ ವಿಷಯಗಳಷ್ಟನ್ನೂ ಕೇಳಿ ಚಲಂ ನಕ್ಕ.

"ಯಾಕೆ ನಗುತ್ತೀರಿ ?"

"ನಗದೇ ಏನು ಮಾಡಲಿ, ಲತಾದೇವಿ. ಇದನ್ನೇ ವಿಧಿ ವೈಚಿತ್ರ ವೆನ್ನುವುದು."

ಅದೇನೆಂದು ಲತೆಯು ಒತ್ತಾಯ ಮಾಡಿ ಕೇಳಲು ಚಲಂ ಈ ರೀತಿ ಹೇಳಿದ.

"ಲತಾದೇವಿ, ನಾನೊಂದು ಸಣ್ಣ ಕತೆಯನ್ನು ಹೇಳುತ್ತೇನೆ, ಕೇಳಿರಿ ಇಬ್ಬರು ಸ್ನೇಹಿತರಿದ್ದರು. ಸ್ನೇಹಿತರಲ್ಲದಿದ್ದರೆ ಪರಿಚಯಸ್ಥರು ಮಾತ್ರವೇ ಆಗಿರಬಹುದು. ಇಬ್ಬರೂ ಸೇರಿ ಒಂದು ನ್ಯಾಯಬಾಹಿರವಾದ ವ್ಯಾಪಾರ ಮಾಡಿದರು. ಅದರ ಪೂರ್ಣ ಹೊರೆಯನ್ನು ಹೊತ್ತವನು ಮೂರು ವರ್ಷ ಗಳ ಕಾಲ ತಲೆ ಮರೆಸಿಕೊಂಡು ಹೋಗಬೇಕಾಗಿ ಬಂದಿತು. ವಾಪ್ಸು ಬಂದ ನಂತರ, ಮತ್ತೊಬ್ಬನ ಬಳಿಗೆ ಹೋಗಿ ತನಗೆ ಬರಬೇಕಾದ ಹಣವನ್ನು ಕೊಡ ಬೇಕೆಂದು ಕೇಳಿದ. ಅವನು ಕೊಡಲಿಲ್ಲ. ಮೋಸ ಹೋದವನು ಮಾತ ನಾಡದೇ ಹೊರಟು ಹೋದರೂ ಮನಸ್ಸಿನಲ್ಲಿದ್ದ ಛಲ ಹೋಗಲಿಲ್ಲ. ಅದಾದ ಮೂರು ವರ್ಷಗಳನಂತರ ಮೋಸಹೋದವನು ಅಕಸ್ಮಾತ್ ಬೆಂಗಳೂರಿಗೆ ಬಂದ. ತನಗೆ ಮೋಸಮಾಡಿದವನೂ ಇದೇ ಊರಿನಲ್ಲಿದ್ದಾನೆಂದು ಹೇಗೋ ಕಂಡುಕೊಂಡ. ತನಗೆ ಹಣ ಕೊಡದೇ ಯಾವನು ಮೋಸ ಮಾಡಿದನೋ ಅವನ ಮಗನನ್ನು ಜೈಲಿಗೆ ಕಳುಹಿಸಿ ತನ್ನ ಪ್ರತೀಕಾರವನ್ನು ತೀರಿಸಿಕೊಳ್ಳಲು ಪ್ರಯತ್ನ ಮಾಡಿದ. ಇದಕ್ಕೆ ಚತುರನಾದ ದುಷ್ಟನೊಬ್ಬನ ಸಹಾಯವೂ ಸಿಕ್ಕಿತು."

ಲತೆಯು ಬಾಯಿಹಾಕಿ "ಇದೇನು ಹೇಳುತ್ತಿದ್ದೀರಿ ಚಲಂ ಅವರೇ. ವಿಷಯ ನನ್ನ ಹತ್ತಿರಕ್ಕೇ ಬರುವಂತಿದೆ." ಎಂದಳು.

"ಹಾಗೇ ಇಟ್ಟುಕೊಳ್ಳಿರಿ. ಪ್ರಕಾಶರನ್ನು ಜೈಲಿಗೆ ಕಳಿಸುವುದರ ಮೂಲಕ ರಮಾನಂದ ಪೈಗಳನ್ನು ನೋಯಿಸಬೇಕೆಂದು ನಿಮ್ಮ ತಂದೆ ನಿರ್ಧರಿಸಿದರು. ಯಾವ ದಿನ ಯಾವ ಕುದುರೆ ಗೆಲ್ಲುತ್ತದೆಂದು ತಿಳಿದು ಕೊಳ್ಳಲು ನಿಮ್ಮ ತಂದೆಯವರಿಗೆ ಕಷ್ಟವಾಗಲಿಲ್ಲ. ಅವರು ಯಾವುದೋ ಕುದುರೆಗೆ ಹಣ ಕಟ್ಟಿ ಮಹಮದಾಲಿಯಿಂದ ಘಾಜೀಖಾನ್ ಈರಾನಿ ಎಂಬ ಹೆಸರಿಗೆ ನಾಲ್ಕು ಸಾವಿರಗಳ ಚೆಕ್ ತೆಗೆದುಕೊಂಡು ಇಸ್ಮಾಯಿಲ್‌ನ ಕೈಗೆ ಕೊಟ್ಟರು. ಲೆಡ್ಜರ್ ಕ್ಲಾರ್ಕು ಮತ್ತು ಮ್ಯಾನೇಜರ ಬಳಿ ಅದು ನಾಲ್ಕು ಸಾವಿರ ರೂಪಾಯಿಗಳ ಚೆಕ್ ಆಗಿ ಪಾಸಾದನಂತರ, ಅದು ಪ್ರಕಾಶರ ಕೈಗೆ ಹೋಯಿತು. ಅವರದನ್ನು ಸರಿಯಾಗಿ ನೋಡುವಷ್ಟರಲ್ಲಿ ನಲವತ್ತು ಸಾವಿರ ರೂಪಾಯಿಗಳ ಚೆಕ್ ಆಗಿ ಕಾಣುವಂತೆ ಮಾಡಿದ. ಅದರ ಮೇಲೆ ಪ್ರಕಾಶರ ನಲವತ್ತು ಸಾವಿರ ರೂಪಾಯಿಗಳನ್ನು ಕೊಟ್ಟುಬಿಟ್ಟರು. ಆ ಹಣ ತೆಗೆದು ಕೊಂಡು ಈರಾನೀ ಹೊರಗೆ ಬಂದನಂತರ ಚೆಕ್ ಮತ್ತು ನಾಲ್ಕು ಸಾವಿರ ಗಳದೇ ಆಯಿತು. ಆ ಘಾಜೀಖಾನ್ ಈರಾನಿಯು ಮತ್ತಾರೂ ಅಲ್ಲ. ನೀವು ನೋಡಿರುವ ಇಸ್ಮಾಯಿಲ್‌ನೇ."

"ಸ್ವಲ್ಪ ಕಾಲ ಮಾತ್ರ ನಾಲ್ಕು ಸಾವಿರಗಳ ಚೆಕ್ ನಲವತ್ತು ಸಾವಿರ ಗಳ ಚೆಕ್‌ನ ಹಾಗೆ ಕಾಣುವಂತೆ ಮಾಡುವುದು ದುಸ್ಸಾಧ್ಯವಲ್ಲವೇ ?"

"ಆ ವಿಷಯವನ್ನೀಗ ಬಿಟ್ಟುಬಿಡಿ. ಮುಂದೆ ನಿಮ್ಮನ್ನು ಒಪ್ಪಿಸುತ್ತೇನೆ. ಇಸ್ಮಾಯಿಲ್ ಮಾಡಿದ ಕೆಲಸದಿಂದ ಏನಾಯಿತು ? ಮೂವತ್ತಾರು ಸಾವಿರ ರೂಪಾಯಿಗಳನ್ನು ಛಪಾವಣೆ ಮಾಡಿದಂತೆ ಆಯಿತಲ್ಲವೇ ? ಅಷ್ಟೇ ಸಾಲ ದೆಂದೂ, ಆ ದಿನ ಬ್ಯಾಂಕಿನಿಂದ ಹೆಚ್ಚಾಗಿ ಪಾವತಿಯಾಯಿತೆಂದು ಹೇಳ ಲಾದ ಹಣದಲ್ಲಿ ಸ್ವಲ್ಪ ಭಾಗ ಪ್ರಕಾಶರ ಜೇಬಿನಲ್ಲಿ ಸಿಕ್ಕಬೇಕೆಂದು ಹುನ್ನರ್ ಮಾಡಿದರು. ನೀವು ಶನಿವಾರ ಮಧ್ಯಾಹ್ನದ ರೇಸ್‌ಗೆ ಹೋಗುತ್ತಾ ಪ್ರಕಾಶ ನನ್ನು ಕರೆದುಕೊಂಡೇ ಹೋಗುತ್ತೀರೆಂದು ನಿಮ್ಮ ತಂದೆಯವರಿಗೆ ಖಚಿತ ವಾಗಿ ಗೊತ್ತಿತ್ತು. ಅದರಿಂದಲೇ ಆಡಬೇಕಾದ ಕೆಲವು ಕುದುರೆಗಳ ಹೆಸರು ಗಳನ್ನು ಕೊಡಬೇಕಾಗಿದೆ ಎಂದೂ, ರೇಸ್ ಕೋರ್ಸ್‌ಗೆ ಹೋಗುವ ಮೊದಲು ಹೋಟಲಿಗೆ ಸ್ವಲ್ಪ ಬಂದು ಹೋಗಬೇಕೆಂದೂ ಹೇಳಿದರು. ನೀವೂ

ಪ್ರಕಾಶರೂ ಹೋದಿರಿ. ಆಗ ನಿಮ್ಮ ತಂದೆಯವರಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅವರು ಬರುತ್ತಲೇ ಹೋಟಲು ಜವಾನ ಬಂದು ಕರೆದ. ನೀವು ಹೋದಿರಿ. ಪ್ರಕಾಶರು ಅಲ್ಲೇ ಕೋಣೆಯಲ್ಲಿ ಉಳಿದರು. ನೀವು ಬರುವುದು ತಡವಾಯಿತೋ ಏನೋ ಪ್ರಕಾಶರು ತಮ್ಮ ಕೋಟು ಬಿಚ್ಚಿ ಸೋಫಾದ ಮೇಲೆ ಹಾಕಿ ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡರು. ಅನಂತರ ನಿಮ್ಮ ತಂದೆ ಪ್ರಕಾಶರನ್ನು ಕರೆಸಿದರು, ಅವಸರದಲ್ಲಿ ಅಲ್ಲಿಗೆ ಬಂದ ಪ್ರಕಾಶರ ಕೋಟು ಇಲ್ಲಿಯೇ ಉಳಿಯಿತು. ಆ ಸಮಯದಲ್ಲಿ ಇಸ್ಮಾಯಿಲ್ ತಾನು ಬ್ಯಾಂಕಿನಿಂದ ಅಪಹರಿಸಿಕೊಂಡು ಬಂದ ನೋಟುಗಳಲ್ಲಿ ಮೂವತ್ತನ್ನು ಪ್ರಕಾಶರ ಜೇಬಿನಲ್ಲಿಟ್ಟು ಹೊರಡುಹೋದ. ಅದು ಪ್ರಕಾಶರಿಗೆ ಗೊತ್ತೇ ಆಗಲಿಲ್ಲ."

"ಚಲಂ ಅವರೇ, ನೀವು ಹೇಳುವುದನ್ನು ನಂಬುವುದೇ ಕಷ್ಟವಾಗಿದೆ. ಆದರೆ ಎಲ್ಲವೂ ನಿಜದಂತೆ ಕಾಣುತ್ತದೆ. ನನ್ನ ಜೊತೆಯಲ್ಲಿ ಬಂದ ಪ್ರಕಾಶರನ್ನು ನಮ್ಮ ತಂದೆ ವಿಶ್ವಾಸವಾಗಿ ಮಾತನಾಡಿಸುತ್ತಿದ್ದರು. ಅಂತಹವರು ಅವನನ್ನು ಇಂತಹ ಸಿಕ್ಕಿನಲ್ಲಿ ಸಿಕ್ಕಿಹಾಕಿದರೇ ಎನ್ನಿಸುತ್ತದೆ."

"ಹೌದು. ಅಷ್ಟೇ ಅಲ್ಲ, ಲತಾದೇವಿ. ಇನ್ನೊಂದು ವಿಷಯವನ್ನು ಹೇಳುವುದು ಮರೆತಿದ್ದೆ. ಈ ಪ್ರಸಂಗದಲ್ಲಿ ನಿಮ್ಮನ್ನೂ ಸಾಧನವಾಗಿ ಉಪಯೋಗಿಸಿಕೊಂಡರು.

ಲತೆ ಆಶ್ಚರ್ಯದಿಂದ ಚಲಂ ಕಡೆಗೆ ನೋಡಿದಳು.

"ಪ್ರಕಾಶರನ್ನು ಪೂರ್ಣ ರೂಪದಿಂದ ಅಪರಾಧಿಯಾಗಿ ತೋರಿಸಬೇಕಾಗಿದ್ದರೆ ಅವನು ಹೆಚ್ಚಾಗಿ ರೇಸ್ ಕೋರ್ಸ್‌ನಲ್ಲಿ ಓಡಿಯಾಡುವಂತೆ ಮಾಡಬೇಕಾಗಿತ್ತು. ಅವನ ಜೇಬಿನಲ್ಲಿ ಲಪಟಾಯಿಸಲಾದ ಹಣವನ್ನು ಇಡಬೇಕಾಗಿದ್ದಿದ್ದರೆ ಅವರಿರುವ ಜಾಗಕ್ಕೆ ಇಸ್ಮಾಯಿಲ್ ಹೋಗಲು ಅವಕಾಶವಾಗಬೇಕು. ಅದು ಸಾಧ್ಯವೇ ಇಲ್ಲ. ಆದರಿಂದ ಇಸ್ಮಾಯಿಲ್ ಬಂದು ಹೋಗಬಹುದಾದಂತಹ ಜಾಗಕ್ಕೆ ಪ್ರಕಾಶರನ್ನೇ ಬರಮಾಡಿಕೊಳ್ಳಬೇಕಾಯಿತು. ಈ ಉದ್ದೇಶಗಳಿಂದ ವಹಿದೆಯು ಹೋಗಿ ಮೊದಲು ಪ್ರಕಾಶರನ್ನು ಹಿಡಿದಳು. ಅದೇಕೋ ಅವಳಿಂದ ಆ ಕೆಲಸವಾಗಲಿಲ್ಲವೆಂದು ಕಂಡುಬರುತ್ತದೆ. ನಿಮ್ಮನ್ನು ಉಪಯೋಗಿಸಿಕೊಂಡಳು. ಅದಕ್ಕೆ ನಿಮ್ಮ ತಂದೆಯೂ ಒಪ್ಪಿಕೊಂಡರು."

ಏನು ಹೇಳುವುದಕ್ಕೂ ತೋರದೇ ಲತೆಯು ಅವಾಕ್ಕಾಗಿ ಕುಳಿತು ಕೊಂಡಳು

"ಲತಾದೇವಿ ! ನಿಮಗೊಂದು ತಮಾಷೆ ತೋರಿಸುತ್ತೇನೆ."

ಏನು ತಮಾಷೆಯೋ ಎಂದು ಲತೆಯು ತಲೆಯೆತ್ತಿ ನೋಡಿದಳು.

ಡ್ರಾಯರ್ ಎಳೆದು ಚೆಕ್ ತೆಗೆದು ಮೇಜದ ಮೇಲೆ ಹಾಕಿ, ಚಲಂ "ಇದನ್ನು ನೋಡಿ. ಇದರ ಮೇಲೆ ನಮೂದಿಸಿರುವ ಸಂಖ್ಯೆಯನ್ನು ಸರಿಯಾಗಿ ಗಮನಿಸಿ. ಯಾಕೆಂದರೆ ಇದೇ ಚೆಕ್‌ನ ಮೇಲೆಯೇ ಪ್ರಕಾಶರು ಹಣವನ್ನು ಕೊಟ್ಟದ್ದು." ಎಂದ.

ಲತೆಯು ಅದನ್ನು ಇದುವರೆವಿಗೆ ನೋಡಿರಲಿಲ್ಲ. ಅದರಿಂದ ಅಂತಹ ಸ್ಥಿತಿಯಲ್ಲಿಯೂ ಅತ್ಯಾಸಕ್ತಿಯಿಂದ ತೆಗೆದು ನೋಡಿದಳು.

ಅದನ್ನು ಕೈಯಲ್ಲಿ ಹಿಡಿದುಕೊಂಡಿದ್ದಂತೆಯೇ ಅವಳು "ಇದು ನಾಲ್ಕು ಸಾವಿರಗಳ ಚೆಕ್. ಇದರ ಮೇಲೆ ಪ್ರಕಾಶರು ನಲವತ್ತು ಸಾವಿರ ರೂಪಾಯಿಗಳನ್ನು ಹೇಗೆ ಕೊಟ್ಟರೆಂಬುದೇ ನನಗೆ ಅರ್ಥವಾಗಲೊಲ್ಲದು." ಎಂದಳು.

ಅದು ಹೇಗೆಂಬುದನ್ನು ತೋರಿಸುತ್ತೇನೆ, ತಡೆಯಿರಿ." ಎಂದು ಹೇಳಿ, ಮೂರು ನಾಲ್ಕು ಬಾರಿ ಹೊಗೆಯನ್ನು ಎಳೆದುಕೊಂಡ. ಬಾಯಲ್ಲಿದ್ದ ಚುಟ್ಟಾದ ಬೆಂಕಿಯು ದೊಡ್ಡ ಕೆಂಡದ ಚೂರಿನಂತೆ ಕಳಕಳಿಸಿತು. ಅನಂತರ ಚೆಕ್ಕನ್ನು ತೆಗೆದು ಫೋರ್ ಥೌಸಂಡ್ಸ್ ಎಂದು ಬರೆದಿದ್ದುದರ ಹಿಂಭಾಗಕ್ಕೆ ಚುಟ್ಟಾದ ಉರಿಯುವ ಭಾಗವನ್ನು ಕ್ಷಣಕಾಲ ಹಿಡಿದ. ಆಮೇಲೆ ಚೆಕ್ಕನ್ನು ತೆಗೆದು ಮೇಜದ ಮೇಲೆ ಹಾಕಿ "ಲತಾದೇವಿ, ಈಗ ಚೆಕ್ಕನ್ನು ನೋಡಿರಿ." ಎಂದ.

ಈ ಮನುಷ್ಯ ಇದೇನು ಹೀಗೆ ಮಾಡುತ್ತಾನೆ ಎಂದುಕೊಂಡ ಲತೆಯು ಚೆಕ್ ತೆಗೆದು ನೋಡಿದಳು. ಅವಳ ಮುಖವು ಬಿಳಿಯ ಬಟ್ಟೆಯಂತೆ ಬಿಳಚಿಕೊಂಡಿತು. ಪ್ರಕಾಶಮಾನನಾದ ಅವಳ ಕಣ್ಣುಗಳು ಮಂಕಾಗಿ ಗಾಬರಿಯಿಂದ ನೋಡಿದಳು.

"ಇದೇನು ಮಂಗಮಾಯ. ಇಷ್ಟು ಹೊತ್ತೂ ಫೋರ್ ಥೌಸಂಡ್ಸ್

ಎಂದು ಕಾಣುತ್ತಿದ್ದುದು ಈಗ ಫಾರ್ಟಿ ಥೊಸಂಡ್ಸ್ ಎಂದು ಕಂಡುಬರು ತ್ತಿದೆಯಲ್ಲಾ ”

“ಸರಿಯಾದ ಮಾತು ಹೇಳಿದಿರಿ. ಇದು ಮಂಗಮಾಯವೇ. ಫೋರ್ ಥೊಸಂಡ್ಸ್ ಎಂದು ಎರಡು ಅಕ್ಷರಗಳನ್ನು ಬರೆಯಲಾಗಿದ್ದತಷ್ಟೇ. ಅದರ ನಡುವೆ ಸ್ವಲ್ಪ ಸ್ಥಳವನ್ನು ಬಿಟ್ಟಿದೆ. ಚೆಕ್ ಬರೆದು ಅಭ್ಯಾಸವಿಲ್ಲದವರು ಬರಿ ದರೋ ಅಥವಾ ಬರೆಯುವಾಗ ಅಕಸ್ಮಾತ್ ಬಿಟ್ಟು ಹೋಗಿವೆಯೋ ಏನೋ ಒಂದು ಆಗಿದೆ. ಇಂಗ್ಲಿಷ್‌ನ “ಯು” ಎಂಬ ಅಕ್ಷರ ಚೆಕ್‌ನಲ್ಲಿ ಸರಿಯಾಗಿ ಬರಿಯಲ್ಪಟ್ಟಿಲ್ಲ. ಅನಂತರ ಅದೃಶ್ಯ ಮಸಿಯಲ್ಲಿ ಫೋರ್ ಎಂಬುದರ ಮುಂದೆ ಟಿ, ವೈ ಎಂಬ ಎರಡು ಇಂಗ್ಲಿಷ್ ಅಕ್ಷರಗಳನ್ನು ಸೇರಿಸಿದ್ದಾರೆ. ಸಾಧಾರಣ ಸಮಯಗಳಲ್ಲಿ ಅದೃಶ್ಯ ಮಸಿಯಲ್ಲಿ ಬರೆದ ಟಿ ವೈ ಎಂಬ ಅಕ್ಷರಗಳು ಕಂಡು ಬರುವುದಿಲ್ಲ. ಅದಕ್ಕೆ ಸ್ವಲ್ಪ ಶಾಖವು ತಗುಲಿದರೆ ಸ್ವಲ್ಪ ಹೊತ್ತು ಟಿ, ವೈ ಎಂಬ ಅಕ್ಷರಗಳು ಕಂಡುಬರುತ್ತವೆ. ಹಾಗೆಯೇ ಸ್ವಲ್ಪ ಹೊತ್ತು ಬಿಟ್ಟರೆ, ಮಸಿಯು ಶಾಖದ ಪ್ರಭಾವವನ್ನು ಕಳೆದುಕೊಂಡು ಮೊದಲಿನಂತೆಯೇ ಆಗು ತ್ತದೆ. ಆಗ ಅಕ್ಷರಗಳು ಮರೆಯಾಗುತ್ತವೆ.”

“ಹಾಗಾದರೆ ಇನ್ನು ಸ್ವಲ್ಪ ಹೊತ್ತಿನ ನಂತರ ಈ ಚೆಕ್ಕು ಪುನಃ ನಾಲ್ಕು ಗಳದಾಗಿ ಕಂಡುಬರುತ್ತದೆ ಎನ್ನುತ್ತೀರಾ ?”

“ಖಂಡಿತವಾಗಿ. ಅದನ್ನು ಮೇಜಿನ ಮೇಲೆ ಹಾಕಿಬಿಡಿರಿ.”

ಹಾಗೆಯೇ ಲತೆಯು ಅದನ್ನು ಮೇಜದ ಮೇಲೆ ಹಾಕಿದಳು.

ಚಲಂ “ಬ್ಯಾಂಕ್ ಮ್ಯಾನೇಜರು ಆನಂದರಾಯರು ನೋಡಿದಾಗ ಇದು ನಾಲ್ಕು ಸಾವಿರಗಳ ಚಕ್ಕೇ ಆಗಿತ್ತು. ಅವರು ಅಷ್ಟಕ್ಕೇ ಪಾಸು ಮಾಡಿದರು. ಅನಂತರ ಅದು ಪ್ರಕಾಶರ ಕೈಗೆ ತಲುಪುವುದರೊಳಗಾಗಿ ಅದನ್ನು ಘಾಜೀಖಾನ್ ಈರಾನಿಯ ವೇಷ ಹಾಕಿಕೊಂಡಿದ್ದ ಇಸ್ಮಾಯಿಲ್ ಚೆಕ್‌ನ ಹಿಂದುಗಡೆ ಉರ್ದುವಿನಲ್ಲಿ ರುಜು ಮಾಡಿದ. ಚೆಕ್ಕನ್ನು ಕ್ಯಾಷ್ ಕೌಂಟರಿನ ಬಳಿ ತೆಗೆದುಕೊಂಡು ಹೋದ ಬ್ಯಾಂಕ್‌ನ ಜವಾನ ಕೆಂಪಯ್ಯ ಚೆಕ್‌ನ ಮೇಲೆ ಇಂಗ್ಲಿಷ್‌ನಲ್ಲಿಯೂ ರುಜು ಮಾಡಬೇಕೆಂದು ಈರಾನಿಯನ್ನು ಕರೆದ. ಹಾಗೆ ರುಜು ಮಾಡುವುದರೊಳಗಾಗಿ ಚೆಕ್ ಕೆಳಗೆ ಬಿದ್ದಿತು. ಈರಾನಿಯು ಬಗ್ಗಿ ಅದನ್ನು ಮೇಲೆ ತೆಗೆದ. ಅದನ್ನು ಎತ್ತುತ್ತಿರುವಾಗಲೇ ಚಟ್ಟಾದ ಕೊನೆಯಲ್ಲಿದ್ದ ಕೆಂಡದಿಂದ ಚೆಕ್‌ಗೆ ಬಿಸಿ ಮುಟ್ಟಿಸಿದ್ದಾನೆ.

ಪ್ರಕಾಶರ ಕೈಗೆ ಹೋಗುವ ವೇಳೆಗೆ ಅದು ನಲವತ್ತು ಸಾವಿರಗಳದಾಗಿತ್ತು." ಎಂದ.

ಲತೆಯು "ಅಕಸ್ಮಾತ್ ಕೆಳಗೆ ಬಿದ್ದು ಚೆಕ್ ಈರಾನಿಯ ಕೈಗೆ ಸಿಕ್ಕಲು ಅವಕಾಶವಾಯಿತೆಂದು ಹೇಳುತ್ತೀರಿ. ಒಂದು ವೇಳೆ ಅದು ಕೆಳಗೆ ಬೀಳದೇ ಇದ್ದಿದ್ದರೆ?" ಎಂದು ಕೇಳಿದಳು.

"ಅದು ಅಕಸ್ಮಾತ್ ಕೆಳಗೆ ಬಿದ್ದುದಲ್ಲ. ಉದ್ದೇಶಪೂರ್ವಕವಾಗಿ ಕೆಳಗೆ ಕೆಡವಲಾಯಿತು. ಈ ಚೆಕ್ ಮೇಲೆ ಇಂಗ್ಲಿಷ್‌ನಲ್ಲಿಯೂ ರುಜು ಮಾಡಿರುವುದರಿಂದ ಘಾಜೀಖಾನ ಈರಾನಿಗೆ ಇಂಗ್ಲಿಷ್‌ನಲ್ಲಿಯೂ ರುಜು ಮಾಡಲು ಬರುತ್ತಿದ್ದಿತಲ್ಲವೇ? ಹಾಗಿದ್ದೂ ಅವನು ಇಂಗ್ಲಿಷ್‌ನಲ್ಲಿ ರುಜು ಮಾಡದೇ ಉರ್ದುವಿನಲ್ಲಿಯೇ ಮಾಡಿದ್ದುದೇಕೆ? ಬ್ಯಾಂಕಿನವರಿಗೆ ತಿಳಿಯದಂತಹ ಯಾವುದೋ ಭಾಷೆಯಲ್ಲಿ ರುಜುವನ್ನು ಮಾಡಿದ್ದರೆ ಸಾಧಾರಣವಾಗಿ ಚೆಕ್ ತಂದಿರುವವನ ಹೆಸರು ಕೇಳುತ್ತಾರೆ. ಚಾಲ್ತಿಯಲ್ಲಿರುವ ಭಾಷೆಯು ಬರುವುದಾದರೆ ಅದರಲ್ಲಿ ರುಜು ಮಾಡಲು ಹೇಳುತ್ತಾರೆ. ಕ್ಯಾಷ್ ಆಗುವ ಮೊದಲು ಚೆಕ್ ಪುನಃ ತನ್ನ ಕೈಗೆ ಬರುವ ಅವಕಾಶವನ್ನು ಏರ್ಪಡಿಸಿಕೊಳ್ಳುವ ಉದ್ದೇಶದಿಂದಲೇ ಅವನು ಉರ್ದುವಿನಲ್ಲಿ ರುಜು ಮಾಡಿದುದು. ಅದಕ್ಕೆ ತಕ್ಕಂತೆ ಕೆಂಪಯ್ಯ ಈರಾನಿಯನ್ನು ಕರೆದು ಇಂಗ್ಲಿಷ್ ಬಂದರೆ ಆ ಭಾಷೆಯಲ್ಲಿ ರುಜು ಮಾಡಲು ಹೇಳಿದ. ಒಂದು ವೇಳೆ ಹಾಗೆ ಇಂಗ್ಲಿಷ್‌ನಲ್ಲಿ ರುಜು ಮಾಡಬೇಕೆಂಬುದು ಹೇಳಲ್ಪಡದೇ ಇದ್ದರೆ ಮತ್ತಾವುದಾದರೂ ತಂತ್ರದಿಂದ ಚೆಕ್ಕನ್ನು ಕ್ಷಣಕಾಲ ಕೈಗೆ ತೆಗೆದುಕೊಳ್ಳುತ್ತಿದ್ದ."

ಚಲಂನ ಮಾತುಗಳನ್ನು ಕೇಳುತ್ತಿದ್ದರೂ ಲತೆಯ ದೃಷ್ಟಿಯು ಚೆಕ್‌ನ ಮೇಲೆಯೇ ಇದ್ದಿತು ಗಳಿಗೆ-ಗಳಿಗೆಗೂ ಟಿ, ವೈ ಎಂಬ ಅಕ್ಷರಗಳು, ಕೆಳಗಿನ ಸೊನ್ನೆಯೂ ಮಂಕಾಗುತ್ತಾ ಒಂದು ಕಡೆಗೆ ಮಾಯವಾದುದನ್ನು ನೋಡಿದಳು.

ಅವಳು "ಚಲಂ ಅವರೇ, ನೀವು ಈ ಚೆಕ್‌ನ ಮರ್ಮವನ್ನು ಕಂಡುಹಿಡಿದುದು ವಿಪರೀತ ಆಶ್ಚರ್ಯಕರವಾಗಿದೆ." ಎಂದಳು.

ಅವನು ಅದಕ್ಕೇನೋ ಉತ್ತರ ಹೇಳಬೇಕೆಂದಿರುವುದರಲ್ಲಿ ಟೆಲಿಫೋನ್ ರಿಂಗ್ ಆಯಿತು. ತೆಗೆದು ನೋಡಿದ. ಮಾತನಾಡುತ್ತಿದ್ದವನು ಕುಪು

ಸ್ವಾಮಿ. "ಸರಿ, ಹೊರಟೆ, ಕುಪ್ಪುಸ್ವಾಮಿ." ಎಂದು ಹೇಳಿ ಡಿಸ್‌ಕನೆಕ್ಟ್ ಮಾಡಿದ.

ಸೆಂಟ್ರಲ್ ಪೋಲಿಸ್ ಸ್ಟೇಷನ್ನಿಗೆ ಟೆಲಿಫೋನ್‌ಗೆ ಚಲಂ ಕೂಡಲೇ ಟೆಲಫೋನ್ ಮಾಡಿದ. ಇಬ್ರಾಹಿಂ ಸಾಹೇಬರು ಕಾಯುತ್ತಲೇ ಇದ್ದರು. ಆದಷ್ಟು ಬೇಗ ತನ್ನ ಕಚೇರಿಗೆ ಬರುವಂತೆ ಹೇಳಿದ. ಅವರು ಒಪ್ಪಿಕೊಂಡರು.

ಅನಂತರ ಚಲಂ "ಲತಾದೇವಿ, ನಿಮ್ಮ ತಂದೆಯವರು ಆಸ್ಪತ್ರೆಯಲ್ಲಿರುವುದಾಗಿ ಹೇಳಿದಿರಲ್ಲಾ. ನೀವು ಹೋಗಿ ಅವರ ಯೋಗಕ್ಷೇಮವನ್ನು ನೋಡಿರಿ. ಆದಷ್ಟು ಬೇಗ ನಾನು ಬಂದು ನಿಮ್ಮನ್ನು ನೋಡುತ್ತೇನೆ" ಎಂದ.

## ೧೭

ಅದೇ ದಿನ ರಾತ್ರಿ ಎಂಟು ಗಂಟೆಯ ವೇಳೆಯಲ್ಲಿ ವೇಗಗಾಮಿನಿಯಾದ ಜೀಪೊಂದು ಭರದಿಂದ ಓಡುತ್ತಿತ್ತು. ಡ್ರೈವರ್ ಅಲ್ಲದೇ ಐದು ಮಂದಿ ಕುಳಿತುಕೊಂಡಿದ್ದರು.

ಬಲು ಹೊತ್ತು ಯಾರೊಬ್ಬರಾಗಲೀ ಮಾತನಾಡಲಿಲ್ಲ. ಆದರೆ ಇನ್ನು ತಡೆಯಲಾಗದೇ ಇಬ್ರಾಹಿಂ ಸಾಹೇಬರು ಹೇಳಿದರು.

"ಚಲಂ ಸ್ವಾಮಿ, ಈ ಬಾರಿಯೂ ಎಲ್ಲಿ ಮೋಸವಾಗುತ್ತದೆಯೋ ಎಂದು ನನಗೆ ಸಂದೇಹವಾಗುತ್ತದೆ."

"ನೀವು ಸ್ವಲ್ಪವೂ ಸಂದೇಹ ಪಡಬೇಡಿ. ಕುಪ್ಪುಸ್ವಾಮಿ ಖಂಡಿತವಾಗಿ ಏಮಾರುವುದಿಲ್ಲ."

"ಹಾಗಲ್ಲ, ಎರಡು ಸ್ಟೇಷನ್‌ಗಳು ಕಳಿದುವಲ್ಲ. ಇನ್ನೂ ಯಾರ ಸುಳಿವೂ ಇಲ್ಲವಲ್ಲ....ಎಂದು."

"ಇನ್ನೂ ಎರಡು ಸ್ಟೇಷನ್ನುಗಳು ಕಳೆಯಲಿ, ಅವಸರವೇನು ?"

"ನಿಮ್ಮಷ್ಟು ನಮಗೆ ಗುಂಡಿಗೆಯಿಲ್ಲ."

ಚಲಂ ನಗುತ್ತಾ "ಇದು ಗುಂಡಿಗೆಯ ವಿಷಯವಲ್ಲ, ಸಾಹೇಬರೇ.

ಗುಂಟಕಲ್ ಗಾಡಿಯಲ್ಲಿ ಅವರು ಹೊರಡುತ್ತಾರೆಂದೂ, ಬೆಂಗಳೂರು ಸ್ಟೇಷ ನಲ್ಲಿ ಹತ್ತದೇ ದಾರಿಯಲ್ಲಿ ಹತ್ತುತ್ತಾರೆಂದೂ ಕುಪ್ಪುಸ್ವಾಮಿ ಹೇಳಿದ. ಅದಕ್ಕಾಗಿ ಅವರೊಂದು ಟ್ಯಾಕ್ಸಿಯನ್ನು ಇಟ್ಟುಕೊಂಡಿದ್ದಾರೆ. ಕುಪ್ಪು ಟ್ಯಾಕ್ಸಿಯವನಿಂದಲೇ ವಿಷಯ ಸಂಗ್ರಹಿಸಿದ್ದಾನೆ. ನೀವು ಗಲೋಟನೆ ಮಾಡಬೇಡಿ. ಇಸ್ಮಾಯಿಲ್‌ನನ್ನು ಹಿಡಿದುಕೊಡುವುದು ನನ್ನ ಜವಾಬ್ದಾರಿ." ಎಂದ.

"ಅಷ್ಟಾದರೆ ಸಾಕು ಚಲಂ ಸ್ವಾಮಿ. ನಿಮ್ಮ ಧೈರ್ಯ.''

ಆ ಮಾತು ಹೇಳಿದನಂತರ ಇಬ್ರಾಹಿಂ ಸಾಹೇಬರು ಸುಮ್ಮನಾದರು.

ಜೀಪ್ ದೊಡ್ಡಬಳ್ಳಾಪುರವನ್ನು ಸಮೀಪಿಸುತ್ತಿದ್ದ ಹಾಗೆ ಎಲ್ಲೋ ಕಣ್ಮರೆಯಾಗಿ ಓಡುತ್ತಿದ್ದರೂ ಇಲ್ಲಿ ನಾನಿದ್ದೇನೆ ಎಂಬುದನ್ನು ಹೇಳುವಂತೆ ರೈಲು ಗಾಡಿಯ ಇಂಜನ "ಕೊಯೋ'' ಎಂದು ಕೂಗಿಕೊಂಡಿತು. ಅದಾದ ಸ್ವಲ್ಪ ಹೊತ್ತಿಗೆ ಚಚ್ಚೌಕವಾದ ಆಕಾಶ ಬುಟ್ಟಿಗಳನ್ನು ಒಂದರ ಪಕ್ಕದಲ್ಲಿ ಒಂದನ್ನು ಹಚ್ಚಿಟ್ಟಂತೆ ರೈಲ್ವೇ ಡಬ್ಬಿಗಳ ಕಿಟಕಿಗಳಿಂದ ದೀಪದ ಬೆಳಕು ಕಂಡಿತು. ದಾರಿಯಲ್ಲಿಯೇ ಒಂದು ಟ್ಯಾಕ್ಸಿ ಸಿಕ್ಕಿದ್ದಿತು. ದಾಗಿ ಶೀಘ್ರಗಿ ಸ್ಟೇಷನ್ ಅಂಗಳಕ್ಕೆ ಬಂದಾಗ ಮತ್ತೊಂದು ಟ್ಯಾಕ್ಸಿ ವಾಪ್ಸು ಹೊರಡುವುದಕ್ಕಾಗಿ ಸ್ಟಾರ್ಟ್ ಆಯಿತು.

ಸ್ಟೇಷನ್ನಿನ ಮುಂದೆ ಜೀಪ್‌ನಿಂದ ಚಲಂ, ಇಬ್ರಾಹಿಂ ಸಾಹೇಬರು, ರಾಜಶೇಖರಪ್ಪ ಇವರುಗಳು ಇಳಿದರು. ಇಬ್ಬರು ಕಾನ್‌ಸ್ಟೇಬಲ್ಲುಗಳು ಸಹ ಇಳಿದರು.

"ನಿಮ್ಮ ಅತಿಥಿಯು ರೈಲ್ವೆ ಗಾಡಿಯಲ್ಲಿರುವ ಹಾಗಿದೆ. ಬೇಗ ಹೋಗಿ ಅವರನ್ನು ಇಳಿಸಿ." ಎಂದ.

ಇಬ್ರಾಹಿಂ ಸಾಹೇಬರೂ, ರಾಜಶೇಖರಪ್ಪನೂ ಅವಸರದಿಂದ ಓಡಿದರು. ಪೋಲೀಸ್ ಪೇದೆಗಳೂ ಅನುಸರಿಸಿದರು.

ಚಲಂ ಸಿಗರೇಟು ಹಚ್ಚಿಕೊಂಡು ಸಾವಕಾಶವಾಗಿ ಸ್ಟೇಷನ್ ಆವರಣದೊಳಗೆ ಹೋದ.

ಪೋಲೀಸ್ ಅಧಿಕಾರಿಗಳು ಹತ್ತಾರು ಡಬ್ಬಿಗಳಲ್ಲಿ ಎಲ್ಲಿ ನೋಡುವುದೆಂದು ಯೋಚಿಸುತ್ತಿರುವಾಗ ಕುಪ್ಪುಸ್ವಾಮಿಯು ಥರ್ಡ್ ಕ್ಲಾಸ್ ಡಬ್ಬಿಯೊಂದರ ಬಾಗಿಲಿನಲ್ಲಿ ನಿಂತಿರುವುದು ಕಂಡಿತು.

ಇಬ್ರಾಹಿಂ ಸಾಹೇಬರು ಅವನ ಬಳಿಗೆ ಹೋಗಿ "ಎಲ್ಲಿಗೆ ಪ್ರಯಾಣ?" ಎಂದರು.

"ಬೊಂಬಾಯಿನವರೆವಿಗೆ ಪ್ರಯಾಣ ಮಾಡಬೇಕೆಂದಿದ್ದೆ. ಇನ್ನು ಬೆಂಗಳೂರಿಗೇ ವಾಪ್ಸು ಹೊರಡಬೇಕು. ನಿಮ್ಮ ಆಸಾಮಿಗಳು ಪಕ್ಕದ ಸೆಕೆಂಡ್ ಕ್ಲಾಸ್ ಡಬ್ಬಿಯಲ್ಲಿದ್ದಾರೆ."

ಕೂಡಲೇ ಅವರು ಪಕ್ಕದಲ್ಲಿದ್ದ ಸೆಕೆಂಡ್ ಕ್ಲಾಸ್ ಡಬ್ಬಿಗೆ ಹತ್ತಿದರು. ಅಪ್ಪರ್ ಬರ್ತ್‌ನಲ್ಲಿ ಇಸ್ಮಾಯಿಲ್ ಸಿಗರೇಟು ಸೇದುತ್ತಾ ಮಲಗಿದ್ದ. ಅದರ ಎದುರು ಬರ್ತನಲ್ಲಿ ವಹಿದಾ ಮಲಗಿದ್ದಳು. ಸಾಹೇಬರೂ, ರಾಜಶೇಖರಪ್ಪನೂ ಅವರಿಬ್ಬರನ್ನೂ ಕೆಳಗೆ ಇಳಿಸಿದರು. ಕಾನ್‌ಸ್ಟೇಬಲುಗಳು ಅವರಿಬ್ಬರ ಸಾಮಾನುಗಳನ್ನೂ ತೆಗೆದು ಕೆಳಗಿಟ್ಟರು.

ದಂಪತಿಗಳಂತೆ ಕಂಡುಬರುವ ಪ್ರಯಾಣಿಕರನ್ನು ಪೋಲೀಸ್ ಅಧಿಕಾರಿಗಳು ಗಾಡಿಯಿಂದ ಇಳಿಸಿ ನಿಂತುಕೊಂಡಿರುವುದನ್ನು ನೋಡಿ. ಗಾರ್ಡ್, ಟಿಕೆಟ್ ಕಲೆಕ್ಟರುಗಳು ಬಂದರು. ಸ್ಟೇಷನ್ ಮಾಸ್ಟರ್ ಸಮೀಪಿಸಿದರು. ರೈಲಿನಿಂದ ಏಳೆಂಟು ಮಂದಿ ಪ್ರಯಾಣಿಕರು ಕುತೂಹಲದಿಂದ ಕೆಳಗಿಳಿದು ನಿಂತುಕೊಂಡರು.

ಸ್ಟೇಷನ್ ಮಾಸ್ಟರ್ ವಿಷಯವೇನೆಂದು ವಿಚಾರಿಸಿದರು.

ಇಬ್ರಾಹಿಂ ಸಾಹೇಬರು "ಇವರು ಇಲ್ಲಿಯೇ ಇರುತ್ತಾರೆ. ರೈಲು ಹೊರಡಬಹುದು." ಎಂದರು.

ಇಸ್ಮಾಯಿಲ್ ಉದ್ರೇಕಿತನಾಗಿ "ಇನ್‌ಸ್ಪೆಕ್ಟರ್ ಸಾಹೇಬರೇ, ಒಂದು ಬಾರಿ ಮಾಡಿದ ತಪ್ಪನ್ನೇ ಪುನಃ ಮಾಡುತ್ತಿದ್ದೀರಿ." ಎಂದು ಹೇಳಿದ.

ಸಾಹೇಬರು ಉತ್ತರ ಹೇಳುವುದರೊಳಗಾಗಿ ಅಲ್ಲಿಗೆ ಬಂದ ಚಲಂ "ಉಹುಂ, ಈ ಬಾರಿ ತಪ್ಪಾಗುವುದಿಲ್ಲ. ಅವರು ಇಸ್ಮಾಯೀಲ್ ಸೇಟ್‌ನನ್ನು ದಸ್ತಗಿರಿ ಮಾಡುತ್ತಿಲ್ಲ, ಘಾಜೀಖಾನ್ ಈರಾನಿಯನ್ನು ದಸ್ತಗಿರಿ ಮಾಡುತಿದ್ದಾರೆ." ಎಂದ.

ಆ ಮಾತು ಕೇಳುತ್ತಲೇ ಪೆಟ್ಟುಬಿದ್ದ ಹಾವಿನಂತೆ ಇಸ್ಮಾಯಿಲ್ ತಲೆ ತಗ್ಗಿಸಿದ. ವಹಿದಾ ಪರಮಾಶ್ಚರ್ಯದಿಂದ ಚಲಂ ಕಡೆ ನೋಡಿದಳು.

ಇಸ್ಮಾಯಿಲ ಸೆಂಟ್ರಲ್ ಪೋಲೀಸ್ ಸ್ಟೇಷನ್ ಲಾಕಪ್‌ನೊಳಗೆ ಹೋಗುತ್ತಿದ್ದಂತೆಯೇ ಪ್ರಕಾಶನಿಗೆ ಅದೇ ರಾತ್ರಿ ಬಿಡುಗಡೆಯಾಯಿತು. ಹೊರಗೆ ಬಂದವನು ಕೃತಜ್ಞತೆಯಿಂದ ಚಲಂಗೆ ವಂದಿಸಿದ.

ಅನಂತರ "ನನ್ನ ನಿರಪರಾಧಿತ್ವವು ಸಾಬೀತಾಯಿತೇ ?" ಎಂದ.

"ಆಗಿದೆ, ಅದರಿಂದಲೇ ನಿಮಗೆ ಬಿಡುಗಡೆಯಾಗಿರುವುದು.

"ಸರಿ, ಸಾರ್. ನಾಲ್ಕು ಸಾವಿರಗಳ ಚೆಕ್ ನನಗೆ ನಲವತ್ತು ಸಾವಿರಗಳದಾಗಿ ಕಂಡದ್ದು ಹೇಗೆ ?"

"ಅದನ್ನು ಸಿಧಾನವಾಗಿ ಹೇಳುತ್ತೇನೆ. ಅವಸರವೇನಿದೆ ?"

ಚಲಂ ಇಬ್ರಾಹಿಂ ಸಾಹೇಬರಿಗೂ, ರಾಜಶೇಖರಪ್ಪನಿಗೂ ಹೇಳಿ ಅಲ್ಲಿಂದ ಹೊರಟ. ಕುಪ್ಪುಸ್ವಾಮಿಯೂ ಅವನೊಂದಿಗೇ ಹೊರಟ. ಪ್ರಕಾಶನು ಸೂತ್ರದ ಗೊಂಬೆಯಂತೆ ಅವರನ್ನು ಅನುಸರಿಸಿದ.

ಸೆಂಟ್ರಲ್ ಸ್ಟೇಷನ್ನಿನ ಕಾಂಪೌಂಡಿನಿಂದ ಹೊರಗೆ ಬಂದು ಆಸ್ಪತ್ರೆಯ ಕಡೆ ಹೋಗುತ್ತಿರುವಾಗ ಚಲಂ "ನೀವೆಲ್ಲಿಗೆ ಬರುತ್ತಿದ್ದೀರಿ." ಎಂದ.

"ಎಲ್ಲಿಗೂ ಇಲ್ಲ, ಸಾರ್. ಮನೆಗೆ ಹೋಗಬೇಕು. ನಿಮ್ಮನ್ನು ಅಷ್ಟು ದೂರ ಬಿಟ್ಟು ಹೋಗೋಣವೆಂದು ಬರುತ್ತಿದ್ದೇನೆ."

"ಒಳ್ಳೆಯದಾಯಿತು. ನೀವೂ ಬನ್ನಿ, ಲತೆ ಆಸ್ಪತ್ರೆಯಲ್ಲಿದ್ದಾಳೆ.

ಪ್ರಕಾಶನು ಗಾಬರಿಯಿಂದ "ಲತೆಯೇಕೆ ಆಸ್ಪತ್ರೆಯಲ್ಲಿದ್ದಾಳೆ ?" ಎಂದ.

ಚಲವ್ಮು "ಈ ದಿನ ಸಂಜೆ ಗುಲಾಬ್‌ಚಂದರಿಗೆ ಚೂರೀ ಏಟು ಬಿದ್ದಿತು. ಅಪರಾಧಿಯನ್ನು ಹಿಡಿಯಬೇಕೆಂದೂ, ಅದಕ್ಕೆ ಫೀಸ್ ಕೊಡುತ್ತೇನೆಂದೂ ಲತೆ ಹೇಳಿದ್ದಾಳೆ. ಕೆಲಸ ಆಗಿದೆಯೆಂದೂ, ಫೀಸ್ ತಂದು ಕೊಡಬೇಕೆಂದೂ ಅವಳಿಗೆ ಹೇಳಿ ಹೋಗಬೇಕಾಗಿದೆ." ಎಂದ.

ಆಸ್ಪತ್ರೆಯಲ್ಲಿ ಚಲಂಗೆ ಸಹ ವಿಸ್ಮಯವನ್ನುಂಟುಮಾಡುವ ಪ್ರಸಂಗವೊಂದು ಕಾದಿತ್ತು.

ಸ್ಪೆಷಲ್ ವಾರ್ಡಿನಲ್ಲಿ ಹಾಸಿಗೆಯ ಮೇಲೆ ಗುಲಾಬ್‌ಚಂದ್ ಮಲಗಿದ್ದ. ಅಪಾಯವನ್ನು ದಾಟಿ ಗುಣಮುಖ ಹೊಂದುತ್ತಿರುವ ಕಳೆ ಮುಖ

ದಲ್ಲಿತ್ತು. ಲತೆ ತಂದೆಯ ಬಳಿಯೇ ಇದ್ದಳು. ರಮಾನಂದ ಪೈಗಳು ಗುಲಾಬ್‌ಚಂದನ ತಲೆಯ ಬುಡದಲ್ಲಿ ಕುಚಿನಯ ಮೇಲೆ ಕುಳಿತಿದ್ದರು.

ಚಲಂ ವಿಸ್ಮಿತನಾಗಿ "ಇದೇನು, ರಮಾನಂದ ಪೈಗಳು ಇಲ್ಲಿದ್ದಾರೆ ?" ಎಂದ.

ಲತೆಯು ಪ್ರಫುಲ್ಲವದನೆಯಾಗಿ "ಸತ್ತು ಹೋಗುತ್ತೇನೆಂಬ ಗಾಬರಿಯಲ್ಲಿ ನಮ್ಮ ತಂದೆ ಮಾತನಾಡಲು ಪೈಗಳನ್ನು ಕರೆಸಿದರು. ಈಗ ಇಬ್ಬರೂ ರಾಜೀ ಮಾಡಿಕೊಂಡಿದ್ದಾರೆ." ಎಂದಳು.

ಚಲಂನನ್ನು ಕುರಿತು ಅವಳಾ ಮಾತು ಹೇಳುತ್ತಿದ್ದರೂ, ಅವಳ ದೃಷ್ಟಿಯು ಪ್ರಕಾಶನ ಕಡೆಗೆ ಇತ್ತು.

